# ಫಿರಂಗಿಗಳ ಉತ್ಪಾತ!

[ಐತಿಹಾಸಿಕ ಕಾದಂಬರಿ.]



ಲೇಖಕ:—

ಭಿ. ಪ. ಕಾಳೆ

ಮ್ಯಾನೇಜರ,

ಶ್ರೀ ಶೇಷಾಚಲ ಪ್ರೆಸ್ಸ ಮತ್ತು ಶ್ರೀ ಶೇಷಾಚಲ ಗ್ರಂಥಮಾಲೆ,

ಆನಂದವನ.



ಪ್ರಕಾಶಕ:—

ಯ. ಗು. ಕುಲಕರ್ಣಿ

ಸಂಪಾದಕ, ಸ. ಚ. ಆನಂದವನ.



೧೯೩೦

೧. ೪ ಆಣೆ

ಬೆಲೆ ೧ ರೂಪಾಯಿ

# ಮುನ್ನುಡಿ.

—(೦)—

ಇದೊಂದು ಅತ್ಯುತ್ತಮ ಬಂಗಾಲೀ ಕಾದಂಬರಿಯ ಅನುವಾದವಾಗಿದೆ. "ಹಿಂದೂ ಧರ್ಮದವರಲ್ಲಿ ಐಕ್ಯವಿಲ್ಲ; ಇವರು ಒಬ್ಬರನ್ನೊಬ್ಬರು ದೂಷಿಸುತ್ತಾರೆ; ಇವರಲ್ಲಿಯ ಧಾರ್ಮಿಕ ಒಳಪಂಗಡಗಳು ಬಹು ಘೋರತರವಾಗಿವೆ; ಅವುಗಳ ಮೂಲಕ ಪ್ರಸಂಗದಲ್ಲಿ ಇವರು ಪರಸ್ಪರರಲ್ಲಿ ಜಗಳಾಡುತ್ತಾರೆ" ಇತ್ಯಾದಿ ವಿಚಾರಗಳನ್ನು ಹೊರಗೆಡಹಿ, ಪಾಶ್ಚಾತ್ಯರು-ವಿಶೇಷವಾಗಿ ಅವರಲ್ಲಿಯ ಕ್ರಿಸ್ತೀ ಪಾದ್ರಿಗಳು-ಹಿಂದೂ ಜನರನ್ನು ಹಲವು ಬಗೆಯಿಂದ ನಿಂದಿಸುತ್ತಿರುತ್ತಾರೆ; ಅಲ್ಲದ ಅವರು ತಾವೆಲ್ಲರೂ ಒಂದೇ ವರ್ಣದವರೆಂದೂ, ಒಬ್ಬ ಕ್ರಿಸ್ತನ ಅನುಯಾಯಿಗಳೆಂದೂ, ತಮ್ಮಲ್ಲಿ ಜಾತಿ-ಮತಗಳ ಪಂಗಡಗಳಿಲ್ಲವೆಂದೂ, ಹಿಂದೂ ಧರ್ಮವನ್ನು ತ್ಯಜಿಸಿ ತಮ್ಮ ಧರ್ಮವನ್ನು ಸ್ವೀಕರಿಸಿ ಮುಕ್ತರಾಗಬೇಕೆಂದೂ ಅಜ್ಞರಾದ ನಮ್ಮ ಹಿಂದೂ ಪ್ರಜೆಗಳಿಗೆ ಬೋಧಿಸುತ್ತಿರುತ್ತಾರೆ; ಆದರೆ ೧೭ನೇ ಶತಮಾನದಲ್ಲಿ ಈ ಫಿರಂಗಿ ಪಾದ್ರಿಗಳ ಪರಮ ಗುರುಗಳು-ಆಗಿನ ಪೋರ್ತುಗೀಜ ಫಿರಂಗಿ ಪಾದ್ರಿಗಳು-ನಮ್ಮ ಜನರನ್ನು ಎಷ್ಟು ಪೀಡಿಸುತ್ತಿದ್ದರೆಂಬದಿಷ್ಟೇ ಅಲ್ಲ, ತಮ್ಮ ನೆರೆಹೊರೆಯ ದೇಶಗಳ, ತಮ್ಮ ಜಾತಿಯ, ತಮ್ಮ ರಕ್ತದ ಸ್ಪೇನ, ಇಂಗ್ಲಂಡ ಮುಂತಾದ ದೇಶದ ಜನರನ್ನೂ ಎಷ್ಟು ಪರಿಯಿಂದ ಹಿಂಸಿಸುತ್ತಿದ್ದರೆಂಬದೂ, ಕಡೆಗೆ ದಿಲ್ಲಿಯ ಮೊಗಲ ಸಾಮ್ರಾಟನಾದ ಶಹಾಜಹಾನ ಬಾದಶಹನು ಆ ಪೋರ್ತುಗೀಜ ಫಿರಂಗಿಗಳನ್ನು ಈ ದೇಶದಿಂದ ಹೊಡೆದೋಡಿಸಿ, ನಮ್ಮ ದೇಶದೊಳಗಿನ ಫಿರಂಗಿಗಳ ಉತ್ಪಾತವನ್ನು ಹೇಗೆ ನಿಲ್ಲಿಸಿದನೆಂಬದೂ ಇದರೊಳಗಿನ ಕಥಾನಕದ ವಾಚನದಿಂದ ಚೆನ್ನಾಗಿ ಮನದಟ್ಟಾಗುವಂತಿದೆ.

—ಲೇಖಕ.

# ಅನುಕ್ರಮಣಿಕೆ.



# ಫಿರಂಗಿಗಳ ಉತ್ಪಾತ.

[ ಐ ತಿ ಹಾ ಸಿ ಕ—ಕಾ ದ ಂ ಬ ರಿ ]

೧ನೇ ತರಂಗ

೦೦೦

## ಲಲಿತಾ-ಹರಣ.




ರತ್ಕಾಲದ ಮಧ್ಯಾಹ್ನ; ಭಾಗೀರಥೀ ನದಿಯ ಪಶ್ಚಿಮ ತೀರದ ಒಂದು ಪುರಾತನ ಘಾಟು; ಘಾಟಿನ ಮೇ-ಲೊಂದು ವಿಶಾಲವಾದ ಮಾವಿನ ಮರ, ಆ ಮಾವಿನ ಮರವು ಹೇಗೆ ಬಲವಾಗಿ ಬೆಳೆಯಹತ್ತಿತ್ತೋ, ಹಾಗೆಯೆ ಇಟ್ಟಂಗಿಗಳಿಂದ ಕಟ್ಟಲ್ಪಟ್ಟದ್ದ ಆ ಪ್ರಾಚೀನ ಘಾಟಿನ ಅಳಿಗಾಲವು ಒತ್ತರದಿಂದ ಸಾಗಿತ್ತು. ಆ ಮಾವಿನಮರದ ಕೆಳಗೆ ಆಗ ಒಂದು ಚಿಕ್ಕ ಡೋಣಿಯು ಇದ್ದಿತು. ಅದರಲ್ಲಿ ಕುಳಿತಿದ್ದ ಯಾವನೋ ಒಬ್ಬ ತರುಣನು ಗುಣು-ಗುಣು ಹಾಡುತ್ತಿದ್ದನು. ಅವನ ಹಿಂದೆ ಬಾಣ-ಬತ್ತಳಿಕೆಗಳೂ, ಆಗತಾನೆ ಸಂಹರಿಸಲ್ಪಟ್ಟ ಎರಡು-ಮೂರು ಪಕ್ಷಿಗಳೂ ಡೋಣಿಯಲ್ಲಿ ಬಿದ್ದುಕೊಂಡಿದ್ದವು. ಆ ಡೋಣಿಯ ಆಚೇಬದಿಗೆ ಪ್ರೌಢ ವಯಸ್ಸಿನ ಒಬ್ಬ ಅಂಬಿಗನು ಡೋಣಿಯನ್ನು ಅಲ್ಲಿಯ ಗೂಟಕ್ಕೆ ಕಟ್ಟಿ, ನಿಶ್ಚಿಂತ ಮನಸ್ಸಿನಿಂದ ಗಾಢನಿದ್ರಾಸಕ್ತನಾಗಿದ್ದನು. ಭಾದ್ರಪದಮಾಸವು; ಭಾಗೀರಥಿಯು ಪಾತ್ರವನ್ನು ಹೊರಸೂಸಿ ಹರಿಯುತ್ತಿದ್ದಳು. ಆ ಘಾಟಿನ ೩-೪ ಮೆಟ್ಟಲುಗಳು ಮಾತ್ರ ಇನ್ನೂ ಕಾಣಿಸುತ್ತಿದ್ದವು. ಘಾಟಿನ ಪಕ್ಕದಲ್ಲಿಯೇ ಒಂದು ಬಹು ಸುಂದರವಾದ ಆಕಳು ಅಲ್ಲಿ ಬಿದ್ದಿದ್ದ ಎಂಜಲ ಬಾಳಿಯ ಎಲೆಗಳನ್ನು ಹರ್ಷದಿಂದ ತಿನ್ನುತ್ತಿತ್ತು. ಆಗ ಸುತ್ತಲೆಲ್ಲ ಕಡೆಗೂ ಶಾಂತತೆಯ ಸಾಮ್ರಾಜ್ಯವು ನೆಲೆಗೊಂಡಂತಾಗಿತ್ತು.

ಅಷ್ಟರಲ್ಲಿ ಯಾವಳೋ ಒಬ್ಬ ಲಲನೆಯು ದೂರದಿಂದಲೇ “ಘಾಟನ ಮೇಲಿನ ಡೋಣಿ ಯಾರದದು? ಅದನ್ನು ಬೇಗನೆ ಬೇರೆ ಕಡೆಗೆ ತಕ್ಕೊಂಡು ನಡೆಯಿರಿ” ಎಂದು ಕೂಗಿದಳು. ಆ ಕೂಗುವಿಕೆಯಿಂದ ಆ ಅಂಬಿಗನ ನಿದ್ರಾಭಂಗವಾಯಿತು. ಆಗ ಅವನು ತಿರಸ್ಕಾರದಿಂದಲೇ:—ಯಾರವರು ಕೂಗುವವರು? ಎಂದು ಗದ್ದರಿಸಲು, ಡೋಣಿಯನ್ನು ಬೇರೆ ಕಡೆಗೆ ಒಯ್ಯಿ ರೆಂದವಳು ಮತ್ತೆ:—“ಎಂಥ ಮನುಷ್ಯರಯ್ಯಾ ನೀವು! ಡೋಣಿಯನ್ನು ಬೇರೆ ಕಡೆಗೆ ಒಯ್ಯದೆ, ಅಲ್ಲಿಂದಲೇ ಪ್ರಶ್ನ ಮಾಡುತ್ತಿರುವಿರಿ? ನೀವು ಅಲ್ಲಿ ರುವ ವರೆಗೆ ಬ್ರಾಹ್ಮಣರ ಹೆಂಗಸರು ನೀರಿಗೆ ಬರುವ ಬಗೆ ಹೇಗೆ?” ಎಂದಂ ದಳು. ಆ ನುಡಿಯನ್ನು ಕೇಳಿ ಅಂಬಿಗನ ಸಿಟ್ಟು ಅನಿವಾರವಾಯಿತು; ಅದರಿಂದ ಅವನು:—ಇಲ್ಲಿಂದ ಡೋಣಿಯನ್ನು ಸರಿಸುವದಿಲ್ಲ. ಬ್ರಾಹ್ಮಣರ ಹೆಂಗಸರು ಇಲ್ಲಿಗೇ ನೀರಿಗೆ ಬರಬೇಕೆಂಬ ನಿರ್ಬಂಧವಿಲ್ಲ. ಬೇರೆ ಘಾಟಿಗೆ ಹೋಗಬಹುದು, ಎಂದು ಅಂದನು.

ಆಗ ಆ ಡೋಣಿಯೊಳಗಿನ ನವತರುಣನು ಆ ಅಂಬಿಗನನ್ನು ಕುರಿತು: ಭುವನ, ಹೀಗೇಕೆ ಮಾಡುತ್ತೀ? ಮಾನವಂತರಾದ ಹೆಣ್ಣುಮಕ್ಕಳು ನೀರಿಗೆ ಬರುವ ಈ ಘಾಟನಲ್ಲಿ ಡೋಣಿಯನ್ನು ನಿಲ್ಲಿಸಿ, ಮತ್ತೆ ಅವರ ಮೇಲೆಯೇ ಹರಿಹಾಯಬೇಕೇನು? ಛೀ-ಹುಚ್ಚಾ, ಬಿಚ್ಚು ಡೋಣಿಯನ್ನು, ನಡ ತಕ್ಕೊಂಡು ಅತ್ತ, ಎಂದು ಅಧಿಕಾರಯುಕ್ತವಾಣಿಯಿಂದ ಹೇಳಿದನು.

“ಮಹಾರಾಜ! ಆ ಹೆಂಗಸರು ತಮಗಿಂತಲೂ ಹೆಚ್ಚು ಮಾನವಂತ ರೇನು? ಅಂಥ ಬಡಿವಾರದವರೇ ಇದ್ದರೆ ಅವರು ಬೇರೆ ಕಡೆಗೇಕೆ ಹೋಗ ಬಾರದು?” ಎಂದು ಗುಣು-ಗುಟ್ಟುತ್ತ ಭುವನನು ಆ ಡೋಣಿಯನ್ನು ಗೂಟದಿಂದ ಬಿಚ್ಚಿ, ಅತ್ತ ಕಡೆಯ ಒಂದು ಬಿದುರು ಪಳಿಗೆ ಒಯ್ದು ಕಟ್ಟಿ ದನು. ಕೂಡಲೆ ಆ ಡೋಣಿಯೊಳಗಿನ ತರುಣನು ಗಟ್ಟಿಯಾಗಿ:-“ತಾವು ಘಾಟಿಗೆ ಬರಬಹುದು; ಡೋಣಿಯನ್ನು ಒಯ್ದಿದೆ” ಎಂದು ಕೂಗಿದನು. ಭುವನನು ಡೋಣಿಯನ್ನು ಅಲ್ಲಿ ಕಟ್ಟಿದಬಳಿಕ ಪುನಃ ಮಲಗುವ ಉದ್ಯೋ ಗಕ್ಕೆ ಹತ್ತಿದ್ದನು. ಅಷ್ಟರಲ್ಲಿ ಆ ಯುವಕನು ಅವನನ್ನುದ್ದೇಶಿಸಿ:-ಭುವನ, ನೀನು ಇನ್ನು ಮೇಲೆ ನನಗೆ ಮಹಾರಾಜನೆಂದು ಕರೆಯಬೇಡ, ಎಂದು ಹೇಳಲು, ಅಂಬಿಗನು ವಿಸ್ಮಯ-ವಿಸ್ಫೂರಿತ ನೇತ್ರಗಳಿಂದ ತರುಣನ ಕಡೆಗೆ ನೋಡುತ್ತ:—ಮಹಾರಾಜ, ಅದೇಕೆ?

"ನೀನು ನನಗೆ ಮಹಾರಾಜನೆಂದೇಕೆ ಸಂಬೋಧಿಸುತ್ತೀ?"

"ಹುಜೂರ, ತಮ್ಮ ತಂದೆ, ಅಜ್ಜ, ಮುತ್ತಜ್ಜ ಮುಂತಾದವರು ಎಷ್ಟೋ ತಲೆಗಳಿಂದ ಮಹಾರಾಜರಿದ್ದರು; ಆದ್ದರಿಂದಲೇ ತಮ್ಮ ವಂಶದವರೆಲ್ಲರಿಗೂ ನಾವು ಮಹಾರಾಜರೆಂದೇ ಸಂಬೋಧಿಸತಕ್ಕವರು"

"ಅದು ಹೇಗೆಯೇ ಇರಲಿ; ಆದರೆ ನಾನಂತೂ ಈಗ ಮಹಾರಾಜನಿಲ್ಲವಷ್ಟೆ?"

"ಪ್ರಸ್ತುತದಲ್ಲಿರದಿದ್ದರೂ ಬೇಗನೆ ಆಗುವಿರಿ. ಈಗಿನ ಚಿಕ್ಕ ಅರಸರು ಸತ್ತ ಬಳಿಕ ತಾವೇ ಮಹಾರಾಜರಾಗತಕ್ಕವರು"

"ಛೇ-ಛೇ ಭುವನ, ಇದೆಲ್ಲ ನಿಮ್ಮ ತಪ್ಪುತಿಳುವಳಿಕೆಯು. ಸದ್ಯದ ಮಹಾರಾಜರ ನಂತರ ಕೇಶವನು ಮಹಾರಾಜನಾಗುವನು. ನಾನು ಈಗ ಹೇಗೆ ತಿರುಕನಾಗಿರುವೆನೋ ಹಾಗೆಯೇ ಮುಂದಾದರೂ ಇರತಕ್ಕವನು; ಆದರೆ ನೀನು ಪ್ರಸ್ತುತದ ಮಹಾರಾಜನಿಗೆ ಚಿಕ್ಕ ಅರಸನೆಂದೂ, ನನ್ನನ್ನು ಮಹಾರಾಜನೆಂದೂ ಸಂಬೋಧಿಸುತ್ತ ನನ್ನ ಅನಿಷ್ಟವನ್ನೇಕೆ ಬಗೆಯುತ್ತೀ"

"ಮಹಾರಾಜ, ನಿಮ್ಮ ತಂದೆಯ ರಾಜ್ಯವು ನಿಮಗೆ ಸಿಗಬಾರದೇನು?"

"ಸದ್ಯದ ಮಹಾರಾಜನಾದ ನಮ್ಮ ಕಕ್ಕನು ಆ ಬಗ್ಗೆ ದಿಲ್ಲೀ ಬಾದಶಹನಿಂದ ಸನದು ಪಡಕೊಂಡಿರುತ್ತಾನೆ. ನಾನು ಹುಡುಗನಿರುವಾಗ ನನ್ನ ತಂದೆಯು ತೀರಿಕೊಂಡನು. ಆಗ ನಮ್ಮಿಂದ ದಿಲ್ಲೀ ಬಾದಶಹನಿಗೆ ತಲುಪುವ ಕಪ್ಪ-ಕಾಣಿಕೆಗಳು ಬಾಕಿ ನಿಂತಿದ್ದವು; ಅದರಿಂದ ಕಕ್ಕನು ಆಗ ದಿಲ್ಲಿಗೆ ಹೋಗಿ ಆ ಬಾಕಿಯನ್ನು ತಲುಪಿಸಿ, ಬಾದಶಹನಿಂದ ತನ್ನ ಹೆಸರಿಗೇ ಸನದು ತಂದಿರುತ್ತಾನೆ"

"ಒಂದೆರಡು ವರ್ಷಗಳ ಕಪ್ಪ-ಕಾಣಿಕೆಗಳು ಬಾಕಿ ಉಳಿದಮಾತ್ರಕ್ಕೆ ಎಷ್ಟೋ ತಲೆಗಳಿಂದ ನಡೆದು ಬಂದ ನಿಮ್ಮ ಹಕ್ಕಿನ ರಾಜ್ಯವು ಅನ್ಯರದಾಗಬಹುದೇ?"

"ದಿಲ್ಲೀಶ್ವರರ ಹುಕುಮನ್ನು ಅಮಾನ್ಯ ಮಾಡುವವರಾರು?"

"ಮಹಾರಾಜ, ಹಾಗೆಂದಿಗೂ ಆಗಲಾರದು. ತಮ್ಮ ತಂದೆಯ ರಾಜ್ಯವು ತಮ್ಮದೇ ಆಗುವದು ಖಂಡಿತ-ಖಂಡಿತ......................"

ಎಂದೆನ್ನುವಷ್ಟರಲ್ಲಿ ಆ ಬಿದಿರು ಮೆಳೆಯ ಮರೆಗೆ ನಿಂತಿದ್ದವರಾರೋ:- "ಮಯೂಖ, ಖಂಡಿತವು-ಖಂಡಿತವಾಗಿ ನಿನ್ನ ಪಿತೃರಾಜ್ಯವು ನಿನಗೆ ಪುನಃ

ಪ್ರಾಪ್ತವಾಗುತ್ತದೆ'' ಎಂದು ನುಡಿದರು.

ಕೂಡಲೆ ಆ ಯುವಕನೂ, ಭುವನನೂ ಧ್ವನಿಬಂದ ಕಡೆಗೆ ಹೊರಳಿ ನಿಂತರು. ಒಬ್ಬ ದೀರ್ಘಕಾಯದ ಗೌರವರ್ಣದ ಸಂನ್ಯಾಸಿಯು ಕೆಂಪು ಬಣ್ಣದ ಶಾಟಿಯನ್ನು ಹೊತ್ತುಕೊಂಡು ಆ ಬಿದಿರುಪೆಳೆಯ ಕೆಳಗೆ ನಿಂತಿದ್ದನು. ಆ ಆಗಂತುಕ ವ್ಯಕ್ತಿಯನ್ನು ನೋಡಿಯಂತೂ ಯುವಕನು ಬೆದರಿದನು. ಅವನು ಭಕ್ತಿಭಾವದಿಂದ ಪೊಡವಟ್ಟು ಸಂನ್ಯಾಸಿಯನ್ನು ಕುರಿತು:—''ಸ್ವಾಮಿ, ತಾವು ಏನು ಅನ್ನುತ್ತೀರಿ?''

''ಮುಯೂಖ, ನಾನನ್ನುವದು ಸತ್ಯವು. ಇನ್ನು ತುಸ ದಿವಸಗಳಲ್ಲಿ ನೀನು ನಿನ್ನ ತಂದೆಯ ರಾಜ್ಯಕ್ಕೆ ಅಧೀಶ್ವರನಾಗುತ್ತೀ''

ತರುಣನು ನಿಶ್ವಾಸಬಿಡುತ್ತ:-''ಸ್ವಾಮಿ, ಅದು ಕೇವಲ ಅಸಂಭವ''

''ತಮ್ಮಾ, ಲೋಕದಲ್ಲಿ ಅಸಂಭವವಾದದ್ದಾವದೂ ಇಲ್ಲ. ಧರ್ಮದಿಂದ ನಡೆ, ಸತ್ಯದಿಂದ ಪರಾವೃತ್ತನಾಗಬೇಡ; ದೇವರು-ಬ್ರಾಹ್ಮಣರು-ಹೆಣ್ಣುಮಕ್ಕಳು-ಹುಡುಗರು ಇವರನ್ನು ರಕ್ಷಿಸು; ಅನಾಥರಿಗೂ, ಅಸಹಾಯಕರಿಗೂ ಸಹಾಯ ಮಾಡು; ಅಂದರೆ ಒಂದಿಲ್ಲೊಂದುದಿನ ದೇವರು ನಿನ್ನ ಕಡೆಗೆ ಹೊರಳಿ ನೋಡಬಹುದು. ಇನ್ನು ತುಸ ಹೊತ್ತಿನಲ್ಲಿಯೇ ನಿನ್ನ ಪರೀಕ್ಷೆಯ ಕಾಲವು ಒದಗುವದು. ಆ ಸಮಯದಲ್ಲಿ ಅಂಜಬೇಡ'' ಎಂದು ಆ ಸಂನ್ಯಾಸಿಯು ನುಡಿಯುತ್ತಿರಲು, ಯುವಕನು ಡೋಣಿಯೊಳಗಿಂದಲೇ ಅವರಿಗೆ ಪ್ರಣಿಪಾತವಂಗೈದು, ಏನೋ ಕೇಳಬೇಕೆಂದು ಅವರ ಕಡೆಗೆ ನೋಡಿದನು; ಆದರೆ ಆಗ ಅಲ್ಲಿ ಆ ಸಂನ್ಯಾಸಿಯು ಇರಲಿಲ್ಲ, ಸುತ್ತಲೂ ನೋಡಿದನು, ಎಲ್ಲಿಯೂ ದೃಷ್ಟಿಗೋಚರವಾಗಲಿಲ್ಲ. ಆಗ ಆ ತರುಣನು ವಿಸ್ಮಯಭರದಿಂದ ಅಂಬಿಗನ ಮುಖವನ್ನು ನೋಡಿದನು. ಅಂಬಿಗನೂ ತರುಣನ ಕಡೆಗೆ ಟಕಮಕ ನೋಡಲಾರಂಭಿಸಿದನು.

ಆಗ ಯುವಕನೇ:—ಭುವನ, ಸಂನ್ಯಾಸಿಗಳು ಯಾವ ಕಡೆಗೆ ಹೋದರು? ಎಂದು ಪ್ರಶ್ನಮಾಡಲು,

''ನಾನೂ ತಮಗೆ ಅದನ್ನೇ ಕೇಳಬೇಕೆಂದಿದ್ದೆನು''

''ನೀನು ನೋಡಲಿಲ್ಲವೆ?'' ''ಮಹಾರಾಜ ಇಲ್ಲ; ನಾನು ಆಗ ಕಣ್ಣು ಮುಚ್ಚಿಕೊಂಡಿದ್ದೆನು'' ''ಅದೇಕೆ?'' ''ಮಹಾರಾಜ........................''

''ಮತ್ತೆ ಮಹಾರಾಜನೆನ್ನುವಿಯಾ?'' ''ಹುಜೂರ, ನೆಮ್ಮ ವಂಶ

ದವರೆಷ್ಟೋ ತಲೆಗಳಿಂದ ತಮ್ಮವರಿಗೆ ಹಾಗೆ ಅನ್ನುತ್ತ ಬಂದಿರುವರಾದ್ದರಿಂದ ನಾನೂ ಅದರಂತೆ ಅನ್ನತಕ್ಕವನೇ'' ''ಅದಿರಲಿ, ನೀನು ಆಗ ಕಣ್ಣು ಮುಚ್ಚಿಕೊಂಡದ್ದೇಕೆ?''

''ಮಹಾರಾಜ, ನಾನು ಯಾವ ಮನುಷ್ಯರಿಗೂ, ಎಂಥ ಪಶು-ಮೃಗಗಳಿಗೂ ಅಂಜುವದಿಲ್ಲ; ಆದರೆ ಆಗಲೆ ಬಂದಿದ್ದ ಆ ಸಂನ್ಯಾಸಿಯನ್ನು ಕಂಡ ಕೂಡಲೆ ನನ್ನ ಎದೆಯು ನಡುಗಹತ್ತುತ್ತದೆ, ಬಾಯಿಯು ಒಣಗಹತ್ತುತ್ತದೆ; ಆದರಿಂದಲೇ ನಾನು ಅವರನ್ನು ನೋಡಿದಾಗೆಲ್ಲ ಗಟ್ಟಿಯಾಗಿ ಕಣ್ಣು ಮುಚ್ಚಿಕೊಂಡುಬಿಡುತ್ತೇನೆ''

''ಅಹುದು ಭುವನ, ನೀನಂದಂತೆ ಆವರನ್ನು ನೋಡಿದ ಕೂಡಲೆ ನನಗೂ ಅಂತರಂಗದಲ್ಲಿ ಒಂದು ಬಗೆಯ ಭಯವುಂಟಾಗುತ್ತದೆ; ಯಾಕಂದರೆ ಸಂನ್ಯಾಸಿಗಳು ಸ್ವಭಾವತಃ ಸಿಟ್ಟಿನವರು''

ಹೀಗೆ ಅವರಿಬ್ಬರಲ್ಲಿ ಆ ಸಂನ್ಯಾಸಿಯ ವಿಷಯವಾಗಿ ಸಂಭಾಷಣವು ನಡೆದಿರಲು, ದೂರದಲ್ಲಿ ನದೀಪ್ರವಾಹದಲ್ಲಿ ಬರುತ್ತಿರುವ ಒಂದು ಫತ್ತೇಮಾರಿ-ನಾವು-ಭುವನನಿಗೆ ಕಾಣಿಸಿತು. ಅವನು ಅದನ್ನು ಒಳ್ಳೇ ದಿಟ್ಟಿಸಿ ನೋಡತೊಡಗಿದನು. ತರುಣನ ಲಕ್ಷ್ಯವು ಅತ್ತಕಡೆಗಿರಲಿಲ್ಲ; ಆದರಿಂದ ಅವನು ಭುವನನ್ನು ಕುರಿತು:—ಭುವನ, ನೀನು ಅತ್ತ ಅಷ್ಟು ದಿಟ್ಟಿಸಿ ನೋಡುವದೇನು? ಎಂದು ಪ್ರಶ್ನ ಮಾಡಲು,

''ಮಹಾರಾಜ, ಅಗೋ ಅತ್ತಕಡೆಯಿಂದ ಒಂದು ನಾವು ಬಹು ಒತ್ತರದಿಂದ ಬರುತ್ತದೆ'' ಎಂದು ಭುವನನು ನುಡಿದನು.

''ಆ ಡೋಣಿಯು ಫೌಜದಾರರದೆಂಬಂತೆ ಕಾಣುವದಲ್ಲವೆ?''

''ಮಹಾರಾಜ, ಅದು ಡೋಣಿಯಲ್ಲ; ಅದೊಂದು ದೊಡ್ಡ ನಾವು. ಅದು ಫೌಜದಾರರದೆಂಬಂತೆ ಕಾಣುವದಿಲ್ಲ''

''ಛೀ-ಹುಚ್ಚಾ! ನಾವುಗಳೆಲ್ಲಾದರೂ ಇಷ್ಟು ಒತ್ತರದಿಂದ ಸಾಗಬಹುದೆ?''

''ಪೋರ್ತುಗೀಜ-ಫಿರಂಗಿಗಳ ನಾವುಗಳು ಒಳ್ಳೇ ವೇಗದಿಂದ ಸಾಗುತ್ತಿರುತ್ತವೆ''

''ಫಿರಂಗಿಗಳ ನಾವು ಇಲ್ಲೆಲ್ಲಿಂದ ಬರಬೇಕು? ಅವರ ಠಾಣ್ಯವಾದ ಸಪ್ತಗ್ರಾಮವಂತೂ ಇಲ್ಲಿಗೆ ಬಹು ದೂರವಿದೆ''

"ನಾನೂ ಆ ಬಗ್ಗೆಯೇ ಆಲೋಚಿಸುತ್ತಿರುವೆನು"

"ಮಕಸೂಸಾಬಾದದಲ್ಲಿಯ ನಮ್ಮ ಬಾದಶಹರ ಹಡಗುಪಡೆಯೊಳಗಿನ ನಾವು ಇದಾಗಿರಲಿಕ್ಕಿಲ್ಲವಷ್ಟೆ? ಅಥವಾ ಇದು ಡಾಕಾದ ಕಡೆಯಿಂದ ಬಂದಿರುವದೊ?"

"ಹುಜೂರ, ಈ ನಾವು ಬಹು ದೊಡ್ಡದು. ಇದರಲ್ಲಿ ಏನಿಲ್ಲೆಂದರೂ ೫೦-೬೦ ಜನರು ಕುಳಿತಿರುವರು......."ಎಂದವನೇ ಭುವನನು ನಡುಗಹತ್ತಿದನು. ತರುಣನು "ಏನಾಯಿತು-ಏನಾಯಿತು" ಎಂದು ಉತ್ಸುಕತೆಯಿಂದ ಕೇಳಲಾರಂಭಿಸಿದನು. ಉತ್ತರವನ್ನು ಕೊಡದೆ ಭುವನನು ಡೋಣಿಯೊಣಗಿನ ತನ್ನ ಬಾಣವನ್ನೂ, ಬತ್ತಳಿಕೆಯನ್ನೂ ತಕ್ಕೊಂಡನು. ಅದನ್ನು ನೋಡಿ ತರುಣನೂ ತನ್ನ ಬಾಣ-ಬತ್ತಳಿಕೆಗಳನ್ನು ಹಿಡಿದು ಸಜ್ಜಾದನು. ನೋಡ-ನೋಡುವಷ್ಟರಲ್ಲಿ ಒಂದು ಬಹು ದೊಡ್ಡನಾವು ಭಾಗೀರಥೀನದಿಯ ಮಧ್ಯ ಪ್ರವಾಹಕ್ಕೆ ಬಂದುಬಿಟ್ಟಿತು. ಅದೇ ಕಾಲಕ್ಕೆ ವಿರುದ್ಧ ದಿಕ್ಕಿನಿಂದ ಬರುತ್ತಿರುವ ೨-೩ ದೊಡ್ಡ ವ್ಯಾಪಾರೀಹಡಗಗಳು ಅದಕ್ಕೆ ಸಮೀಪಿಸಿದವು. ಆ ಕೂಡಲೆ ಆ ನಾವಿನೊಳಗಿಂದ ಬಂದೂಕಗಳು ಹಾರಹತ್ತಿದವು. ಅಲ್ಪಾವಕಾಶದಲ್ಲಿಯೇ ಆ ಮೂರೂ ಹಡಗಗಳು ಒಂದರ ಹಿಂದೊಂದರಂತೆ ಭಾಗೀರಥಿಯಲ್ಲಿ ಮುಳುಗಿ ಹೋದವು! ಅವುಗಳೊಳಗಿನ ಎದೆಗಾರರಾದ ನಾವಿಕರು ಹೊಳೆಯಲ್ಲಿ ಈಸಬೀಳಲು, ಆ ಆಗಂತುಕ ನಾವಿನೊಳಗಿನ ಬಂದೂಕಧಾರಿಗಳು ಗುಂಡುಹಾಕಿ ಅವರನ್ನೂ ನದಿಯಲ್ಲಿ ಮುಳುಗಿಸಿಬಿಟ್ಟರು!!

ಆ ನಾವಿನೊಳಗಿನ ಬಂದೂಕಗಳ ಸಪ್ಪಳವನ್ನು ೨-೩ ಸಾರೆ ಕೇಳಿದ ನಂತರ ಭುವನನು ಗಟ್ಟಿಯಾಗಿ:—ಮಹಾರಾಜ, ನಾನು ತರ್ಕಿಸಿದಂತೆ ಅದು ಫಿರಂಗಿಗಳ ನಾವೇ ಅಹುದು. ಅಗೋ ನೋಡಿರಿ, ಆ ಮೂರು ಹಡಗಗಳನ್ನೂ ಮುಳುಗಿಸಿಬಿಟ್ಟರು! ಎಂದನು. ಇಷ್ಟರಲ್ಲಿ ಆ ನಾವು ತೀರವೇಗದಿಂದ ಬಂದು ಇವರ ಹತ್ತಿರವೇ ಇದ್ದ ಆ ಇಟ್ಟಂಗಿಗಳಿಂದ ನಿರ್ಮಿತವಾದ ಘಾಟಿಗೆ ತಲುಪಿತು. ಕೂಡಲೆ ಘಾಟಿನಲ್ಲಿ ಸ್ನಾನಕ್ಕಿಳಿದಿದ್ದ ಲಲನೆಯು ಚಿಟ್ಟನೆ ಚೀರಿದಳು. ಆ ದನಿಯನ್ನು ಕೇಳಿ ಯುವಕನು:—ಭುವನ, ನಮ್ಮ ಡೋಣಿಯನ್ನು ಬಿಚ್ಚಿ ನದಿಯಲ್ಲಿ ದೂಡು, ಎಂದನು.

"ಮಹಾರಾಜ, ಹಾಗೆ ಮಾಡುವದು ಸರಿಯಲ್ಲ ನಾವು ಇಬ್ಬರೇ-ಇಬ್ಬರು; ಆ ನಾವೆಯೊಳಗೆ ೫೦-೬೦ ಜನರಿದ್ದಾರೆ; ನಮ್ಮಿಬ್ಬರ ಕೈಯಲ್ಲಿ

ಬರೇ ಬಾಣಗಳು, ಅವರೆಲ್ಲರೂ ಬಂದೂಕಧಾರಿಗಳು; ಇಂಥ ಸ್ಥಿತಿಯಲ್ಲಿ ನಾವು ಈಗ ನಮ್ಮ ಡೋಣಿಯನ್ನು ಪ್ರವಾಹದಲ್ಲಿ ದೂಡುವದೆಂದರೆ ಬೇಕಂತ ಹೋಗಿ ಮರಣವನ್ನು ಆಲಿಂಗಿಸಿದಂತೆಯೇ ಆದೀತು"

ಆ ತರುಣಿಯ ಚೀತ್ಕಾರವನ್ನು ಮತ್ತೆ ಕೇಳಿ ತರುಣನು ಹೆಚ್ಚಿನ ರಭಸದಿಂದ:-ಭುವನೆ, ಡೋಣಿಯನ್ನು ಒಮ್ಮೆಲೆ ಬಿಚ್ಚಿಬಿಡು, ತಡಮಾಡಿದೆಯೆಂದರೆ ನಾನು ಡೋಣಿಯಿಂದಿಳಿದು, ದಂಡೆಯ ಮೇಲಿಂದಲೇ ಅತ್ತ ಹೋಗುವೆನು, ಎಂದನು.

"ಮಹಾರಾಜ, ನಾನು ಈಗ ಬಿಚ್ಚುವದಿಲ್ಲ; ಆದರೆ ಈ ಡೋಣಿಯನ್ನು ಇಲ್ಲಿಯೇ ಈ ಬಿದಿರುಮೆಳೆಯ ಮರೆಗೆ ಜಗ್ಗಿ ಇಲ್ಲಿಂದಲೇ ಏನು ಮಾಡಬೇಕಾದ್ದನ್ನು ಮಾಡೋಣ" ಎಂದು ಹೇಳಿ, ಭುವನನು ಆ ನೌಕೆಯನ್ನು ಅತ್ತ ಜಗ್ಗಿದನು; ಹಾಗು ಅವರಿಬ್ಬರೂ ತಮ್ಮ-ತಮ್ಮ ಬಾಣ-ಬತ್ತಳಿಕೆಗಳನ್ನು ತಕ್ಕೊಂಡು ಆ ಬಿದಿರುಮೆಳೆಯನ್ನು ಏರಿದರು. ಆಗ ಫಿರಂಗಿಗಳು ಆ ಘಾಟನ ಮೇಲೆ ನಡೆಸಿದ ಅತ್ಯಾಚಾರವೆಲ್ಲ ಅವರಿಗೆ ಸ್ಪಷ್ಟವಾಗಿ ತೋರಹತ್ತಿತು.

ಒಬ್ಬ ಪೋರ್ತುಗೀಜ ಪಾದ್ರಿಯು ನಾವೆಯಿಂದಿಳಿದು, ಘಾಟನಲ್ಲಿ ಸ್ನಾನಕ್ಕಿಳಿದಿದ್ದ ಒಬ್ಬ ನವಯುವತಿಯನ್ನು ಬಲಪೂರ್ವಕವಾಗಿ ತಮ್ಮ ನಾವಿನಲ್ಲಿ ಹತ್ತಿಸಬೇಕೆಂದು ಪ್ರಯತ್ನಿಸುತ್ತಿದ್ದನು. ಆ ರಮಣಿಯು ಅವನಿಗೆ ಅಸುಗೊಳ್ಳದೆ ಆ ಘಾಟನ ಮೆಟ್ಟಲವನ್ನು ಗಟ್ಟಿಯಾಗಿ ಹಿಡಕೊಂಡು ಕುಳಿತು, "ಈ ನೀಚನಿಂದ ಯಾರಾದರೂ ಬಿಡಿಸ ಬನ್ನಿರೆ"ಂದು ಚೀರುತ್ತಿದ್ದಳು. ಅಷ್ಟರಲ್ಲಿ ಬಿದಿರುಮೆಳೆಯಿಂದ ಬಂದ ಎರಡು ಹದನಾದ ಬಾಣಗಳು ಆ ಪಾದ್ರಿಯ ಕಣ್ಣಲ್ಲಿಯೂ, ಹೃದಯದಲ್ಲಿಯೂ ಬಲವಾಗಿ ನಡಲು, ಆ ನೀಚನು ಘಾಟನಿಂದ ನೀರೊಳಗೆ ಉರುಳಿಬಿದ್ದು ಗುಟುಕು ನೀರು ಕುಡಿಯಹತ್ತಿದನು. ದಂಡೆಯಲ್ಲಿಳಿದು ನಾವನ್ನು ಸರಿಪಡಿಸುತ್ತಿದ್ದ ೨-೩ ಜನ ನಾವಿಕರು ಅದನ್ನು ನೋಡಿ ಕೂಡಲೆ ಅವನನ್ನೆತ್ತಿ ನಾವಿನಲ್ಲಿ ಹಾಕಿದರು. ಇತ್ತ ಬಿದಿರುಮೆಳೆಯಿಂದ ಆ ನಾವಿನ ಮೇಲೆ ವರ್ಷಾಕಾಲದ ಮೇಘದಂತೆ ಒಂದೇಸವನೇ ಬಾಣಗಳು ಮಳೆಗರೆಯುತ್ತಿದ್ದವು. ಆ ಶರವರ್ಷಣದಿಂದ ಆ ನಾವಿನೊಳಗಿನ ೧೦-೧೫ ಜನರು ಗಾಯ ಹೊಂದಿದರು. ನಾವಿನೊಳಗಿನ ಉಳಿದ ಜನರು ಆ ಘಾಟನ ಮರೆಗೆ

ಬಂದು ತಮ್ಮ ಬಂದೂಕಗಳನ್ನು ಬಿದಿರುಪೆಳೆಯ ಕಡೆಗೆ ಗುರಿಯಿಟ್ಟು ಹಾರಿಸಲಾರಂಭಿಸಿದರು. ೩೦-೪೦ ಜನ ಬಂದೂಕಧಾರಿಗಳಿಗೆ ಧನುರ್ಧಾರಿಗಳಾದ ಇಬ್ಬರೇ ಇಬ್ಬರು ಎಷ್ಟೊತ್ತಿನವರೆಗೆ ಎದಿರಾದಾರು? ತುಸ ಹೊತ್ತಿನಲ್ಲಿಯೇ ಅವರದೊಂದು ಗುಂಡು ಬಂದು ಆ ತರುಣನ ಕಿವಿಯ ಹತ್ತರ ಬಡಿಯಿತು. ಕೂಡಲೆ ಅವನು ಮೂರ್ಛಾಗತನಾಗಿ ಕೆಳಗಿನ ಡೋಣಿಯಲ್ಲಿ ಬಿದ್ದನು. ಭುವನನಿಗೂ ೩-೪ ಕಡೆಗೆ ಸಣ್ಣಪುಟ್ಟ ಗಾಯಗಳಾಗಿದ್ದವು. ಆದರೂ ಅವನು ಅತ್ತ ಲಕ್ಷ್ಯಗೊಡದೆ ಶತ್ರುಪಕ್ಷದವರ ಮೇಲೆ ಬಾಣಗಳನ್ನು ಬಿಡುತ್ತಲೇ ಇದ್ದನು. ಬರಬರುತ್ತ ಅವನ ಬತ್ತಳಿಕೆಯೊಳಗಿನ ಬಾಣಗಳು ತೀರಿದವು. ಅಷ್ಟರಲ್ಲಿ ಮೇಲೆ ಹೇಳಿದಂತೆ ಆ ತರುಣನೂ ಗಾಯಹೊಂದಿ ಬಿದ್ದನು. ಆದರಿಂದ ಭುವನನು ಮುಂದು ಗಾಣದೆ, ಸರಗ್ಗನೆ ಆ ಪೆಳೆಯಿಂದಿಳಿದು, ಡೋಣಿಯನ್ನು ಗೂಟದಿಂದ ಬಿಚ್ಚಿ ನೀರಲ್ಲಿ ಈಸಬಿದ್ದನು; ಹಾಗು ಅದರ ಹಗ್ಗವನ್ನು ತನ್ನ ಬಾಯಲ್ಲಿ ಕಚ್ಚಿಕೊಂಡು ಪ್ರವಾಹದ ಗುಂಟ ನಡೆದನು. ಇತ್ತ ಆ ಫಿರಂಗಿಗಳು ತಮ್ಮ ಎದುರಾಳಿಗಳ ಕಾಟವು ಹಿಮ್ಮೆಟ್ಟಲು, ಮೂರ್ಛಾಗತಳಾದ ಆ ರಮಣಿಯನ್ನು ತಮ್ಮ ನಾವಿನಲ್ಲಿ ಹಾಕಿಕೊಂಡು ದಕ್ಷಿಣಾಭಿಮುಖವಾಗಿ ಹಿತ್ತರದಿಂದ ಸಾಗಿ ಹೋದರು.

ಫಿರಂಗಿಗಳ ನಾವೆಯು ಕಣ್ಣಿಗೆ ಕಾಣದಷ್ಟು ದೂರ ಹೋದನಂತರ, ಈ ಮೊದಲಿನ ಆ ಸಂನ್ಯಾಸಿಯು ಘಾಟನ ಮೇಲೆ ಬಂದು ನಿಂತುಕೊಂಡು:- "ಇಂದಿನಿಂದಲೇ ಈ ಫಿರಂಗಿ-ಪಾದ್ರಿಗಳ ಸೇಡುತೀರಿಸಲಿಕ್ಕೆ ಪ್ರಾರಂಭಿಸುತ್ತೇನೆ; ಈ ಬಂಗಾಲ ಪ್ರಾಂತವನ್ನು ಈ ಪೋರ್ತುಗೀಜರ ಅತ್ಯಾಚಾರದಿಂದ ತೀವ್ರವೇ ಮುಕ್ತಮಾಡುತ್ತೇನೆ" ಎಂದು ಸಂಕಲ್ಪಮಾಡಿ, ಹಿಮ್ಮಲೆ ಭಾಗೀರಥಿಯಲ್ಲಿ ಹಾರಿದನು; ಹಾಗು ದಕ್ಷಿಣಾಭಿಮುಖವಾಗಿ ಹಿತ್ತರದಿಂದ ಈಸುತ್ತ ನಡೆದನು.

ಫಿರಂಗಿ-ಪಾದ್ರಿಗಳು ಯಾವ ರಮಣಿಯನ್ನು ಹರಣಮಾಡಿಕೊಂಡೊಯ್ದರೋ ಅವಳೇ ಲಲಿತೆಯು.

೨ನೇ ತರಂಗ

-[-೦-]-

# ಸಮಾಜ-ಶಾಸನ.

==೦೦(៖೦៖)೦೦==

"ಇನ್ನು ಆ ಗೋಸ್ವಾಮಿಯನ್ನು ನೋಡಿಕೊಳ್ಳುತ್ತೇನೆ. ಈ ಬ್ರಾಹ್ಮಣನನ್ನು ಗೋಳಾಡಿಸಿದ್ದರ ಸೇಡು ಇಂದು ತೀರಿಸಿಕೊಳ್ಳುತ್ತೇನೆ. ಗರ್ವಹಾರಕನಾದ ಮಧುಸೂದನಾ, ನೀನೇ ಸತ್ಯವಂತನು-ಧರ್ಮವೇ ಶ್ರೇಷ್ಠವು. ಹೇಳಿ ಕೇಳಿ ನಾನು ವಿಷ್ಣುಭಕ್ತನು-ವೈಷ್ಣವನು, ನನ್ನನ್ನು ಅವನು ಗೋಳಾಡಿಸಿದ್ದನಲ್ಲವೆ?...." ಎಂದು ದ್ವೇಷದಿಂದ ಗುಣುಗುಟ್ಟುತ್ತ ಒಂದು ವ್ಯಕ್ತಿಯು ದಾರೀಹಿಡಿದು ಸಾಗಿತ್ತು. ಭಾಗೀರಥೀ ಹೊಳೆಯ ಪಶ್ಚಿಮ ತಟಾಕದ ಒಂದು ಚಿಕ್ಕಹಳ್ಳಿಯ ಒಂದು ವಿಶಾಲವಾದ ಅರಳೀ ಗಿಡದ ಕೆಳಗಿನ ಪ್ರಶಸ್ತವಾದ ಕಟ್ಟೆಯ ಮೇಲೆ ಎಷ್ಟೋ ಜನರು ಕುಳಿತು ಏನೇನೋ ಮಾತಾಡುತ್ತಿದ್ದರು. ಅಲ್ಲಿ ಕುಳಿತ ಗಂಡಸರಲ್ಲಿ ವೃದ್ಧರು, ಪ್ರೌಢರು, ತರುಣರು ಮುಂತಾದ ಎಲ್ಲ ವಯಸ್ಸಿನವರೂ ಇದ್ದರು. ಹೆಂಗಸ ರಾಗಲಿ, ಹುಡುಗರಾಗಲಿ ಅಲ್ಲಿ ಇರಲಿಲ್ಲ. ಅವರಲ್ಲಿಯ ಒಬ್ಬನು ಮೇಲೆ ಹೇಳಿ ದಂತೆ ಗುಣುಗುಟ್ಟುತ್ತ ಬಂದ ವ್ಯಕ್ತಿಯನ್ನು ಕುರಿತು:—ಏನರೀ ಹರಿನಾಥ ಬಾಬುಗಳೇ, ಇನ್ನೇನು ಮಾಡಬೇಕೆಂಬದನ್ನು ಹೇಳಿರಿ ನೋಡೋಣ, ಎನ್ನಲು; ಹರಿನಾಥನು:—

"ಇನ್ನು ಮಾಡತಕ್ಕದ್ದೇನಿದೆ? ಗೋಸ್ವಾಮಿಯು ಒಂದಕ್ಕೆ ನಮಗೆ ಹೇಗೆ ಮಾಡಿದ್ದನೋ ಹಾಗೆಯೇ ಈಗ ನಾವೂ ಅವನಿಗೆ ಮಾಡತಕ್ಕದ್ದು, ನಾವು ಇಂದಿನಿಂದ ಆ ರಾಧಾಮೋಹನ ಗೋಸ್ವಾಮಿಗೆ ಬಹಿಷ್ಕಾರ ಹಾಕ ತಕ್ಕದ್ದು, ಅವನೊಡನೆ ಊಟ-ಬಳಿಕೆಗಳನ್ನಾರೂ ಮಾಡಲಾಗದು; ಅವನ ಮನೆಗೆ ಕೆಲಸಿಗಳೂ, ಅಗಸರೂ ಸಹ ಹೋಗಕೂಡದು. ಗೋಸ್ವಾಮಿಯು ತನ್ನ ಪರಿವಾರದೊಡನೆ ಬೈರಾಗಿಯಾಗಲೊಲ್ಲನೇಕೆ, ಇಲ್ಲವೆ ಈ ಊರು ಬಿಟ್ಟುಹೋಗಿ ಮಣ್ಣು ಹುಯಿದುಕೊಳ್ಳಲೊಲ್ಲನೇಕೆ. ಮಾಧೂಕಕ್ಕಾ, ನನ್ನ ಈ ಮಾತು ನಿಮಗೆ ಸಮ್ಮತವಷ್ಟೆ?" ಎಂದು ನುಡಿದನು.

ಸಮೀಪದಲ್ಲಿಯೇ ಕುಳಿತು ನಶ್ಯವನ್ನೇರಿಸುತ್ತಿದ್ದ ಮಾಧವ ಗಂಗೋ

ಪಾಧ್ಯಾಯನು ಮತ್ತೊಂದು ಭಾರೀ ಚಿಮುಟಿಗೆ ನಶ್ಯವನ್ನು ನಾಸಾರಂಧ್ರ ದಲ್ಲಿ ತುಂಬಿ ಮೂಗಿನ ಹೊರಳೆಗಳನ್ನು ಬಡಿಯುತ್ತ:—

"ಹೀಗೆ ಮಾಡುವದೇ ಯೋಗ್ಯವು, ರಾಧಾಮೋಹನ ಗೋಸ್ವಾಮಿಯ ಅವಿವಾಹಿತಳಾದ ಉಪವರ ಕನ್ಯೆಯನ್ನು ಫಿರಂಗಿಗಳು ಹರಣಮಾಡಿ ಕೊಂಡೊಯ್ದಿರುವದರಿಂದ, ಆ ದೋಷವು ಪಿತೃಕುಲಕ್ಕೇ ಸಲ್ಲತಕ್ಕದ್ದಾಗಿದೆ"

ಆಗ ಮತ್ತೊಬ್ಬನು:—"ಉಪಾಧ್ಯಾಯರೇ, ಇದೇ ಸಿದ್ಧಾಂತ ವೇನು? ಈ ನಿಮ್ಮ ನಿರ್ಣಯದಿಂದ ಆ ಬಡವೃದ್ಧನಿಗೆ ಬಲು ಕಷ್ಟ ವಾದೀತಲ್ಲವೇ?"

"ಕಷ್ಟವೇತರದು? ಇಂಥ ಮಹದಪರಾಧಕ್ಕೆ ಈ ರೀತಿ ತಕ್ಕಶಾಸನೆ ಮಾಡದಿದ್ದರೆ, ಕೆಲದಿನಗಳ ನಂತರ ಆ ರಾಧಾಮೋಹನನು ನಮ್ಮ ಬ್ರಾಹ್ಮಣ ಸಮಾಜವನ್ನು ಕಾಲಿಲೊದ್ದು, ಆ ಫಿರಂಗೀ ಅಳಿಯನನ್ನು ತನ್ನ ಮನೆ ಯಲ್ಲಿ ತಂದಿಟ್ಟುಕೊಳ್ಳಲಿಕ್ಕಿಲ್ಲವೆ ಮಾಧೂ ಕಕ್ಕಾ?" ಎಂದಂದು ಹರಿನಾಥ ಗಂಗೋಪಾಧ್ಯಾಯನು ಗಹಗಹಿಸಿ ನಕ್ಕನು.

ಆಗ ಮಾಧವನು:—"ಈ ಬಗ್ಗೆ ನಿಮ್ಮ ಅಭಿಪ್ರಾಯವೇನು?" ಎಂದು ಸಮೀಪದಲ್ಲೇ ಕುಳಿತಿದ್ದ ಸಂಧ್ಯೋಪಾಧ್ಯಾಯ ನಾರಾಯಣ ಶಾಸ್ತ್ರಿಗೆ ಪ್ರಶ್ನಮಾಡಲು,

ತನ್ನ ಒಂಟೆಯಂಥ ಗೋಣನ್ನು ಮತ್ತಷ್ಟು ಎತ್ತಿ, ಕಾಡಿಗೆಯಂತಹ ಕಪ್ಪುಬಣ್ಣದ ತುಟಿಗಳೊಳಗಿಂದ ಶುಭ್ರವಾದ ಒಂದೆರಡು ಹಲ್ಲುಗಳನ್ನು ಕಿಸಿದು, ಹ್ಹ-ಹ್ಹ-ಹ್ಹ ಎಂದು ನಗುತ್ತ ಸಂ. ನಾರಾಯಣಶಾಸ್ತ್ರಿಯು:— ಶಾಸ್ತ್ರದಲ್ಲಿ ಇದಕ್ಕೂ ಕಠಿಣಶಾಸನವನ್ನು ಹೇಳಿದೆ; ಆದರೆ ತಾವೆಲ್ಲರೂ ರಾಧಾಮೋಹನನಿಗೆ ಬಹಿಷ್ಕಾರವನ್ನಷ್ಟೇ ಹಾಕಬೇಕೆಂದು ಅನ್ನುತ್ತಿರು ವದರಿಂದ ನಾನಾದರೂ ನಿಮಗೆ ವಿರುದ್ಧವೇಕೆ ನಡೆಯಲಿ? ಎಂಬ ಮುಕ್ತಾ ಫಲಗಳನ್ನುದುರಿಸಿ, ಮತ್ತೆ ಇಷ್ಟುದ್ದ ಡೂಗು ಹಾಯಿಸಿಕೊಂಡು ಕುಳಿತನು.

ನಾರಾಯಣ ಶಾಸ್ತ್ರಿಯ ಈ ನುಡಿಗಳಿಂದ ಮೊದಲೇ ಈರ್ಷಾಸಕ್ತ ನಾಗಿದ್ದ ಹರಿನಾಥನಿಗೆ ಮತ್ತಿಷ್ಟು ರೋಷವೆದ್ದಿತು. ಕೂಡಲೆ ಅವನು ಒಳ್ಳೇ ಆವೇಶದಿಂದ:—"ಉಪಾಧ್ಯಾಯರೇ, ನೀವು ರಾಧಾಮೋಹನನಿಗೆ ತಕ್ಕ ಶಾಸನ ಮಾಡಿ ಈಗಲೆ ಅವನನ್ನು ನಮ್ಮ ಸಮಾಜದಿಂದ ಚ್ಯುತಿ ಗೊಳಿಸದಿದ್ದರೆ, ನಾನು ಆತ್ಮಹತ್ಯೆ ಮಾಡಿಕೊಳ್ಳುತ್ತೇನೆ. ಅದರಿಂದ ಇಲ್ಲಿ

ಸೇರಿದ ನಿಮ್ಮೆಲ್ಲರಿಗೂ ಬ್ರಹ್ಮಹತ್ಯಾ ದೋಷ ಪ್ರಾಪ್ತವಾಗುವದು-ಬ್ರಹ್ಮ ಹತ್ಯಾದೋಷ...........!''

ಮಾಧವಗಂಗೋಪಾಧ್ಯಾಯನು ಅವನನ್ನು ಮತ್ತೆ ಮಾತಾಡ ಗೊಡದೆ:—ಹರಿ, ಹೀಗೇಕನ್ನುತ್ತೀ? ನೀನು ನಮಗೆ ಹತ್ತು ದಿನದವನು. ನಿನ್ನ ಮಾತನ್ನು ನಡಿಸದೆ, ಆ ಸುವರ್ಣವಣಿಕಪುರದ ರಾಧಾಮೋಹನ-ಗೋಸ್ವಾಮಿಯ ಪಕ್ಷವನ್ನು ವಹಿಸುವೆನೇ?

ಮಾಧೂಕಕ್ಕನ ಈ ಮಾತಿನಿಂದ ಹರಿನಾಥನಿಗೆ ಒಳ್ಳೇ ಆನಂದ ವಾಗಲು, ಆ ಸಂತೋಷದ ಭರದಲ್ಲಿ ಅವನು ಬಹು ಗಟ್ಟಿಯಾಗಿ ಕೂಗಿ:—ಇಲ್ಲಿ ಕುಳಿತವರೆಲ್ಲರಿಗೂ ಈ ಮಾತು ಮಾನ್ಯವಷ್ಟೆ? ಇಂದಿನಿಂದ ಗೋಸ್ವಾಮಿಯು ಬಹಿಷ್ಕೃತನಾದನೇ? ಇದಕ್ಕೆ ಸಮ್ಮತವಿದ್ದವರೆಲ್ಲರೂ ''ಒಪ್ಪಿಗೆ'' ಎಂದು ಹೇಳಿರಿ, ಎಂದನು.

ಕೂಡಲೆ ''ಒಪ್ಪಿಗೆ-ಒಪ್ಪಿಗೆ'' ಎಂಬ ಕರ್ಣಕಠೋರ ಶಬ್ದವು ಆ ಅರಳೀಮರದ ಕಟ್ಟೆಯಿಂದ ಹೊರಹೊರಟಿತು.

ಅದೇ ಕಾಲಕ್ಕೆ ಯಾವನೋ ಒಬ್ಬ ಶ್ಯಾಮವರ್ಣದ ಆಜಾನಬಾಹು ಬ್ರಾಹ್ಮಣನು ಆ ಕಟ್ಟೆಗೆ ಬಂದನು. ಅವನನ್ನು ಕಂಡು ಅಲ್ಲಿದ್ದವರೆಲ್ಲರೂ ಸನ್ಮಾನಿಸಿ ಮೇಲಕ್ಕೆ ಕರೆದರು. ಆ ಆಗಂತುಕನು ಆ ಬ್ರಾಹ್ಮಣರ ನಡುವೆ ಹೋಗಿ ಕುಳಿತು:—ಮಾಧವ, ಇದೇನು ನಡೆದಿದೆ? ಎಂದು ಪ್ರಶ್ನೆ ಮಾಡಿದನು.

ಅದಕ್ಕೆ ಮಾಧವಗಂಗೋಪಾಧ್ಯಾಯನು:—ತರ್ಕರತ್ನಮುಖೋಪಾಧ್ಯಾಯ ಮಹಾಶಯರೇ, ರಾಧಾಮೋಹನ ಗೋಸ್ವಾಮಿಯ ಉಪವರ ಕನ್ಯೆಯನ್ನು ಫಿರಂಗಿಗಳು ಅಪಹರಿಸಿದರೆಂದು ಕೇಳಿಕೆಯಿದೆ.

''ನೀವು ಅನ್ನುವದಾದರೂ ಏನು? ಯಾವಾಗ ಅಪಹರಿಸಿದರು?'' ''ಎರಡು ತಾಸುಗಳಾದವು.'' ''ಇದು ರಾಧಾಮೋಹನನಿಗೆ ಗೊತ್ತಾಗಿ ದೆಯೋ?'' ''ಎಲ್ಲವೂ ಗೊತ್ತಾಗಿದೆ. ನಾನೇ ಬೇಕಂತ ಹೋಗಿ ಅವನಿಗೆ ತಿಳಿಸಿ ಬಂದಿರುತ್ತೇನೆ'' ಎಂದು ಒಳ್ಳೇ ಆಢ್ಯತೆಯಿಂದ ಹರಿನಾಥನು ಮುಂದೆ ಬಂದು ಹೇಳಿದನು.

''ನೀವು ಪಂಡಿತರೆಲ್ಲ ಕಲೆತು ಇಲ್ಲಿ ಈಗೇನು ಮಾಡುತ್ತಿರುವಿರಿ?''

“ಇನ್ನೇನು ಮಾಡುವದು? ಸಮಾಜ ರಕ್ಷಣೆಯ ಉದ್ಯೋಗಕ್ಕೆ ಹತ್ತಿರುತ್ತೇವೆ”

“ನೀವೇನು ಮೊಸೆಹೊತ್ತ ಗಂಡಸರೋ-ಬಳೆಯಿಟ್ಟ ಹೆಂಗಸರೋ? ಶತ್ರುಗಳಾದ ಫಿರಂಗಿಗಳು ಒಬ್ಬ ಬ್ರಾಹ್ಮಣ ಕುವರಿಯನ್ನು ಹರಣಮಾಡಿಕೊಂಡು ಹೋಗಿರುವರೆಂದರೇನು?-ಅವಳ ಉದ್ಧಾರದ ಯತ್ನಮಾಡದೆ, ನೀವೆಲ್ಲರೂ ಇಲ್ಲಿ ಕುಳಿತು ಗೊಡ್ಡುಹರಟೆ ಕೊಚ್ಚುತ್ತಿರುವಿರೆಂದರೇನು? ನೀವೆಲ್ಲರೂ ಕುಲೀನ ಬ್ರಾಹ್ಮಣರಲ್ಲವೆ? ನೀವು ಪಶ್ಚಿಮ ಬಂಗಾಲೀ ಬ್ರಾಹ್ಮಣರ ಮುಕುಟಮಣಿಗಳಲ್ಲವೆ? ಮಾಧವಾ, ನಮ್ಮ ಸಮಾಜ ರಕ್ಷಣೆಯ ಅದಾವ ಕೆಲಸವನ್ನು ನೀವು ಈಗ ಮಾಡಿದಿರಿ?”

“ಗೋಸ್ವಾಮಿಗೆ ಬಹಿಷ್ಕಾರಹಾಕಿ, ಅವನ ಮನೆಗೆ ಕೆಲಸಿ-ಅಗಸರು ಕೂಡ ಹೋಗದಂತೆ ಕಟ್ಟಳೆ ಮಾಡಿರುತ್ತೇವೆ”

“ಇದರಲ್ಲಿ ಗೋಸ್ವಾಮಿಯ ಅಪರಾಧವೇನು?”

“ತರ್ಕರತ್ನ ಮುಖೋಪಾಧ್ಯಾಯರೇ, ನೀವು ಅನ್ನುವದಾದರೂ ಏನು? ಗೋಸ್ವಾಮಿಯ ಅವಿವಾಹಿತಳಾದ ಉಪವರ ಕನ್ಯೆಯನ್ನು ಫಿರಂಗಿಗಳು ಹರಣಮಾಡಿಲ್ಲವೆ? ನಮ್ಮ ಬ್ರಾಹ್ಮಣ ಸಮಾಜವು ಆ ಕೃತಿಯ ಬಗ್ಗೆ ಒಂದಿಷ್ಟೂ ಶಾಸನವನ್ನು ಮಾಡಬಾರದೆ? ಈಗ ಕಠಿಣವಾದ ಶಾಸನವನ್ನು ಮಾಡದಿದ್ದರೆ, ಸಮಾಜದ ಅಧಃಪಾತವಾಗಲಾರದೆ? ಹೀಗೆಯೇ ಬಿಟ್ಟರೆ ಇನ್ನೆರಡು ದಿನಗಳಿಗೆ ಆ ರಾಧಾಮೋಹನ ಗೋಸ್ವಾಮಿಯು ತನ್ನ ಆ ಫಿರಂಗೀ ಅಳಿಯನನ್ನು ಮನೆಗೆ ಕರೆತಂದು ನಮ್ಮೆಲ್ಲರಿಗೂ ಊಟಕ್ಕೆ ಕರೆದರೆ ಆಗ ನಾವೆಲ್ಲರೂ ಹೋಗಬೇಕೇ ಹೇಗೆ?” ಎಂದಂದ ಹರಿನಾಥ ಗಂಗೋಪಾಧ್ಯಾಯನನ್ನು ಕುರಿತು ತರ್ಕರತ್ನನು: —“ಹರಿ, ಗೋಸ್ವಾಮಿಯು ಆ ಫಿರಂಗಿಯನ್ನು ಆಮಂತ್ರಣಕೊಟ್ಟು ಕರೆಸಿ, ಅವನಿಗೆ ತನ್ನ ಮಗಳನ್ನು ಕೊಟ್ಟರುವನೇನು?” ಎಂದು ಕೇಳಲು, ಕೂಡಿದವರೆಲ್ಲರೂ:-“ಇಲ್ಲ-ಇಲ್ಲ” ಎಂದರು. “ಹಾಗಾದರೇನು?” ಎಂಬ ತರ್ಕರತ್ನನ ಪ್ರಶ್ನೆಗೆ, “ಗೋಸ್ವಾಮಿಯ ಮಗಳು ಗಂಗಾಸ್ನಾನಕ್ಕಾಗಿ ಘಾಟಗೆ ಹೋಗಿದ್ದಳು. ಫಿರಂಗಿಗಳು ಅವಳನ್ನು ಅಲ್ಲಿಂದಲೇ ಅಪಹರಿಸಿಕೊಂಡೊಯ್ದಿರುವರು” “ಫಿರಂಗಿಗಳ ಈ ಅತ್ಯಾಚಾರದಲ್ಲಿ ರಾಧಾಮೋಹನ ಗೋಸ್ವಾಮಿಯ ಅಪರಾಧವೇನು”

“ಅವಿವಾಹಿತಳಾದ ಕನ್ಯೆಯನ್ನು ಮ್ಲೇಂಛ-ಫಿರಂಗಿಗಳು ಕೊಂಡೊ

ಯ್ದಿರುವರು. ಅದರಿಂದ ಪಿತೃಕುಲಕ್ಕೆ ದೋಷವುಂಟಾಗುವದಿಲ್ಲವೆ?'' ಎಂದು ಹಳ್ಳೀ ಶಾಸ್ತ್ರದಿಂದ ಸಂ. ನಾರಾಯಣಶಾಸ್ತ್ರಿಯು ನುಡಿಯಲು, ''ಇದರಲ್ಲಿ ಪಿತೃಕುಲದ ಅಪರಾಧವೇನು?'' ಎಂದಂದು, ತರ್ಕರತ್ನನು ಪುನಃ:-''ಆ ಕನ್ಯೆಯು ಒಬ್ಬಳೇ ಗಂಗಾ ಸ್ನಾನಕ್ಕೆ ಹೋದಳೇಕೆಂದು ನೀವು ಇದರಲ್ಲಿ ಶ್ಲೇಷ ಹೊರಡಿಸಬಹುದು; ಆದರೆ ನಾನು ಆ ಬಗ್ಗೆ ಇಷ್ಟೇ ತಿಳಿಸುತ್ತೇನೆ. ನಮ್ಮ ಸಮಾಜದ ಕೆಲವೊಬ್ಬನ ತಾಯಿ, ಮತ್ತೊಬ್ಬನ ಹೆಂಡತಿ, ಇನ್ನೊಬ್ಬನ ತಂಗಿ ಹೀಗೆ ಯಾರಾದರೂ ಒಬ್ಬೊಬ್ಬರೇ ಗಂಗಾ ಸ್ನಾನಕ್ಕೆ ಹೋಗೇ ಹೋಗುತ್ತಿರುತ್ತಾರೆ. ಅದರಂತೆಯೇ ರಾಧಾಮೋಹನನ ಮಗಳಾದ ಲಲಿತೆಯೂ ಹೋಗಿರಬಹುದು. ಅದರಲ್ಲಿ ಯಾರ ತಪ್ಪೇನಿದೆ? ಎಂದು ಪ್ರಶ್ನ ಮಾಡಲು,

ತರ್ಕರತ್ನನ ಆ ಪ್ರಶ್ನೆಗೆ ಅಲ್ಲಿ ನೆರೆದವರೆಲ್ಲರೂ ಉತ್ತರ ಕೊಡದಾದರು. ಕೆಲಕ್ಷಣಗಳ ತರುವಾಯ ತಮ್ಮ ಆಟವೇನೂ ನಡೆಯದ್ದನ್ನು ಕಂಡು ರೇಗಿಗೆದ್ದ ಹರಿನಾಥಗಂಗೋಪಾಧ್ಯಾಯನೂ, ಸಂಧ್ಯೋಪಾಧ್ಯಾಯ ನಾರಾಯಣಶಾಸ್ತ್ರಿಯೂ ತರ್ಕರತ್ನನನ್ನು ಕುರಿತು:—''ಹಾಗಾದರೆ ನಮ್ಮ ಸಮಾಜ ರಕ್ಷಣೆಯ ಯತ್ನವನ್ನೇ ಇನ್ನು ಮಾಡಕೂಡದೇನು?'' ಎಂದು ಪ್ರಶ್ನಮಾಡಿದರು

ಆಗ ತರ್ಕರತ್ನನು ಒಳ್ಳೇ ಗಂಭೀರವಾಣಿಯಿಂದ:— ''ಪ್ರಿಯ ಬ್ರಹ್ಮವೃಂದವೇ, ಈಗಿನ ಲಲಿತಾಹರಣದಿಂದ ನಮ್ಮ ಬ್ರಾಹ್ಮಣ ಸಮಾಜದ ಧಾರ್ಮಿಕ ಅವನತಿಯೇನೂ ಆಗಿಲ್ಲ; ಆದರೆ ನಮ್ಮ ಕ್ಷಾತ್ರೀಯ ಅವನತಿಯು ಮಾತ್ರ ಹೇಳಕೂಡದಷ್ಟು ಆಗಿದೆ. ಇಂಥ ಪ್ರಸಂಗದಲ್ಲಿ ನಾವೆಲ್ಲರೂ ಆ ಫಿರಂಗಿಗಳಿಂದ ಲಲಿತೆಯನ್ನು ಹೇಗೆ ಬಿಡಿಸಬೇಕೆಂದು ಆಲೋಚಿಸಿ, ಕಾರ್ಯತತ್ಪರರಾಗುವದೇ ನಿಜವಾದ ಸಮಾಜರಕ್ಷಣೆಯ ಕಾರ್ಯವಾಗಿದೆ. ಅದನ್ನು ಬಿಟ್ಟು ಈ ಮುತ್ಸಾಳಿ ಹರಿ ಮತ್ತು ನಾರಾಯಣರ ಉಪದ್ವ್ಯಾಪಿತನಕ್ಕೆ ಬಲಿಬಿದ್ದು, ನೀವೆಲ್ಲರೂ ನಿಮ್ಮ ಬ್ರಾಹ್ಮಣ್ಯ-ಶೀಲವನ್ನು ಕಳಕೊಳ್ಳಬೇಡಿರಿ. ಹರಿ, ನಿಮ್ಮ ಅಕ್ಕನು ತಾನಾಗಿಯೇ ಮುಸಲ್ಮಾನನೊಡನೆ ಓಡಿಹೋಗಿರುವಾಗ, ನೀನು ಅವಳನ್ನು ಮತ್ತೆ ನಮ್ಮ ಸಮಾಜದಲ್ಲಿ ಸೇರಿಸಲಿಚ್ಛಿಸಿದ್ದರಿಂದ, ನಿನಗೆ ಆಗ ಗೋಸ್ವಾಮಿಯು ಕೆಲ ದಿನಗಳ ಮಟ್ಟಿಗೆ ಬಹಿಷ್ಕಾರ ಹಾಕಿರಬಹುದು. ನಾರಾಯಣಾ, ನಿಮ್ಮ

ಅಣ್ಣನ ಹೆಂಡತಿಯು ವ್ಯಕ್ತ ವ್ಯಭಿಚಾರಿಣಿಯಾಗಿ ಜಾತಿ ಕುಲಗಳನ್ನೆಣಿಸದೆ ನಡೆದುದರಿಂದ ಅವಳನ್ನು ಮನೆಯಿಂದ ಹೊರಗೆ ಹಾಕಬೇಕೆಂದು ಸಮಾಜದವರು ಬಿನ್ನವಿಸಿದರೂ ನೀನು ಕೇಳದ್ದರಿಂದ, ನಿನಗೂ ಕೆಲ ದಿನಗಳ ವರೆಗೆ ಬಹಿಷ್ಕಾರ ಹಾಕಿರಬಹುದು. ಆ ಸೇಡು ತೀರಿಸಿಕೊಳ್ಳುವದಕ್ಕಾಗಿ ನೀವು ಈಗ ಆ ವೃದ್ಧ ಗೋಸ್ವಾಮಿಗೆ ಬಹಿಷ್ಕಾರ ಹಾಕುವ ಹೇಡಿ ಉಪಾಯವನ್ನು ಹೂಡಿರುವಿರೇನು? ಸಮಾಜವು ನಿಮ್ಮ ಕುಹಕತನವನ್ನು ಎಂದೂ ನಡೆಯಗೊಡಲಾರದು" ಎಂದು ಗದ್ದರಿಸಲು, ಆ ಅಶ್ವತ್ಥಕಟ್ಟೆಯ ಮೇಲೆ ಕುಳಿತಿದ್ದ ಸಮಂಜಸರಾದ ವೃದ್ಧ ಜನರೆಲ್ಲರೂ ತರ್ಕರತ್ನನ ಮಾತಿಗೆ ಒಪ್ಪಿ:—"ಇದರಲ್ಲಿ ಗೋಸ್ವಾಮಿಯ ತಪ್ಪು ಎಳ್ಳಷ್ಟೂ ಇಲ್ಲ. ಆದರಿಂದ ಅವನಿಗೆ ಬಹಿಷ್ಕಾರದ ಕಾರಣವಿಲ್ಲ" ಎಂದೆನ್ನುತ್ತ ತಮ್ಮ ತಮ್ಮ ಮನೆಯ ದಾರಿ ಹಿಡಿದರು. ಉಳಿದ ಪ್ರೌಢ ಹಾಗು ತರುಣರು ತರ್ಕರತ್ನನು ಮತ್ತೇನು ಹೇಳುವನೋ ಕೇಳಬೇಕೆಂಬ ಆತುರದಿಂದ ಅಲ್ಲಿಯೇ ಕುಳಿತರು.

ಆಗ ತರ್ಕರತ್ನನು ಪುನಃ:-ಮಹಾನುಭಾವರೇ, ಈ ನಮ್ಮ ಬಂಗಾಲ ಪ್ರಾಂತದಲ್ಲಿ ಈಗ ಫಿರಂಗಿಗಳ ಅತ್ಯಾಚಾರವು ಹೆಚ್ಚಾಗಿದೆಯಷ್ಟೇ? ಇದರ ನಿವಾರಣೋಪಾಯವನ್ನು ನಾವೀಗ ಕೈಕೊಳ್ಳಬೇಕಾಗಿದೆ. ಇಂಥ ಪ್ರಸಂಗದಲ್ಲಿ ನಾವು ನಮ್ಮ ನಮ್ಮ ವ್ಯಕ್ತಿ ವಿಷಯಕ ದ್ವೇಷ-ಈರ್ಷೆ-ಅಸೂಯೆಗಳನ್ನು ಬದಿಗಿಟ್ಟು, ಕಾರ್ಯತತ್ಪರರಾದರೇ ನಮ್ಮಿಂದ ನಮ್ಮ ಸಮಾಜ ರಕ್ಷಣೆಯು ಅಲ್ಪಸ್ವಲ್ಪಾದರೂ ಆದೀತು. ಅದನ್ನು ತೊರೆದು, ಫಿರಂಗಿಗಳ ಅತ್ಯಾಚಾರಕ್ಕಾಗಿ ಆ ಗೋಸ್ವಾಮಿಗೆ ಬಹಿಷ್ಕಾರ ಹಾಕುವದೆಂದರೆ ನಮ್ಮ ಬ್ರಾಹ್ಮಣ ಸಮಾಜಕ್ಕೆ ಕುಂದು ಉಂಟಾಗಲಿಕ್ಕಿಲ್ಲವೆ?

ಹೀಗೆ ನುಡಿಯುತ್ತಿರುವಾಗ, "ಬ್ರಾಹ್ಮಣ ಸಮಾಜವು ಎಂದೋ ಗೋರಿಗಂಡಿದೆ. ಈಗ ತೋರುತ್ತಿರುವ ಬ್ರಾಹ್ಮಣ ಸಮಾಜವು ನಿಜವಾದದ್ದಲ್ಲ. ಇದು ಅದರ ಪ್ರಾಣವಿಹೀನ ಕಲೇವರವು ಮಾತ್ರ!" ಎಂದು ತರ್ಕರತ್ನನ ಹಿಂದಿನಿಂದ ಯಾರೋ ಗಟ್ಟಿಯಾಗಿ ನುಡಿದರು. ಅಲ್ಲಿ ಕಲೆತಿದ್ದವರೆಲ್ಲರೂ ಆ ಆಗಂತುಕ ವ್ಯಕ್ತಿಯ ಕಡೆಗೆ ಹೊರಳಿ ನೋಡಿದರು. ಒಬ್ಬ ಗೌರವರ್ಣದ-ದೀರ್ಘಕಾಯದ ಸಂನ್ಯಾಸಿಯು ತೊಯ್ದು ತೊಪ್ಪಡೆಯಾದ ಕ್ಷಾವಿಯ ಪಾಟಿಯನ್ನು ಹೊತ್ತುಕೊಂಡು ಅತ್ತ ಕಡೆಯಿಂದ ಬರುತ್ತಿದ್ದನು. ಅವನೊಡನೆ ವೃದ್ಧಾಪ್ಯದಿಂದ ತಲೆನಡುಗುತ್ತಿದ್ದ ರಾಧಾಮೋಹನ

ಗೋಸ್ವಾಮಿಯೂ ಬರುತ್ತಿದ್ದನು. ಕೂಡಲೆ ತರ್ಕರತ್ನನು ಕಟ್ಟೆಯಿಂದಿಳಿದು ಹೋಗಿ ಆ ಸಂನ್ಯಾಸಿಗೆ ನಮಸ್ಕರಿಸಿ, ರಾಧಾಮೋಹನನನ್ನು ಬಿಗಿಯಾಗಿ ಅಪ್ಪಿಕೊಂಡನು ಆಗ ಆ ಮುದುಕನ ಕಂಠವು ಬಿಗಿದು ಬಂದದ್ದರಿಂದ ಅವನು ಬಿಕ್ಕಿ-ಬಿಕ್ಕಿ ಅಳಹತ್ತಿದನು. ನಡೆದ ಪ್ರಕಾರವನ್ನೆಲ್ಲ ಕಂಡು ಸಂ. ನಾರಾಯಣಶಾಸ್ತ್ರಿಯೂ, ಗಂ. ಹರಿನಾಥಬಾಬುವೂ ಹಿಂದಿನಿಂದಲೇ ತಮ್ಮ ಕಾಲಿಗೆ ಬುದ್ಧೀ ಕಲಿಸಿದರು.

ದುಃಖದ ವೇಗವು ತುಸ ಕಡಿಮೆಯಾದ ಬಳಿಕ ಗೋಸ್ವಾಮಿಯು:- ತರ್ಕರತ್ನರೇ, ನನ್ನ ಲಲಿತೆಯು ನಿನ್ನೆಯ ದಿವಸ ಏಕಾದಶಿಯ ಉಪವಾಸ ಮಾಡಿದ್ದಳು; ಇಂದು ಹರಿವಾಸವು ತೀರಿದ ಬಳಿಕ ಅವಳು ಗಂಗಾ ಸ್ನಾನಕ್ಕಾಗಿ ಘಾಟಿಗೆ ಹೋಗಿದ್ದಳು. ದುರಾತ್ಮರಾದ ಫಿರಂಗಿಗಳು ಅಲ್ಲಿಂದಲೇ ಅವಳನ್ನು ಅಪಹರಿಸಿಕೊಂಡೊಯ್ದಿರುವರು. ಅಯ್ಯೋ ಲಲಿತೆ! ಈ ವೃದ್ಧನನ್ನು ತೊರೆದು ಹೋದೆಯಾ? ತರ್ಕರತ್ನರೇ, ಆ ನನ್ನ ಕಂದಮ್ಮನನ್ನು ಆ ದಸ್ಯುಗಳಿಂದ ಬಿಡಿಸಿತಂದು ನನಗೆ ಭೆಟ್ಟಿಮಾಡಿಸುವ ಆದಾವ ಶೂರನು ಈ ಲೋಕದಲ್ಲಿರುವನು? ಎಂದು ದುಃಖಿಸುತ್ತಿರಲು,

"ಹಾಗೆನ್ನಬೇಡಿರಿ, ಗೋಸ್ವಾಮಿಗಳೇ; ಅಂಥ ಪುಣ್ಯಾತ್ಮರು ಇದ್ದೇ ಇರುವರು. ಈ ನಮ್ಮ ಪ್ರಾಂತದ ಪ್ರಕೃತದ ಬಾಲಮಹಾರಾಜನು ನಿಮ್ಮ ಲಲಿತೆಯನ್ನು ಬಿಡಿಸುವ ಯತ್ನಕ್ಕೆ ತೊಡಗಿರುತ್ತಾನೆ. ಗೋಸ್ವಾಮೀ, ನೀನಿನ್ನು ದುಃಖಿಸಬೇಡ. ನಿನ್ನ ಮಗಳು ತೀವ್ರವೇ ಬರುವಳು. ನೀನು ಮನೆಗೆ ಹೋಗಿ ಅವನಿಗೆ ಯಶಸ್ಸುಂಟಾಗುವಂತೆ ದೇವರನ್ನು ಪ್ರಾರ್ಥಿಸುತ್ತ ಸ್ವಸ್ಥವಾಗಿರು" ಎಂದು ಹೇಳಿ, ನೆರೆದ ಜನರಿಂದ ಉತ್ತರದ ಅಪೇಕ್ಷೆ ಕೂಡ ಮಾಡದೆ ಆ ಸಂನ್ಯಾಸಿಯು ಎತ್ತೋ ಹೊರಟುಹೋದನು. ಸಂನ್ಯಾಸಿಯ ಆ ನುಡಿಗಳನ್ನು ಕೇಳಿ ಗ್ರಾಮವಾಸಿಗಳೆಲ್ಲರೂ ವಿಸ್ಮಯಗೊಂಡರು.

ಕೆಲಕ್ಷಣಗಳ ನಂತರ ಶರೀರಕ್ಕೆ ಅಲ್ಲಲ್ಲಿ ಗಾಯಗಳಾಗಿ ನೆತ್ತರವು ಚಿಮ್ಮುತ್ತಿದ್ದಂಥ ಅಂಬಿಗರ ಭುವನನು ಅಲ್ಲಿಗೆ ಬಂದು ಅವಸರದಿಂದಲೇ:- "ಭೂದೇವರೇ, ನಮ್ಮ ಮಹಾರಾಜರನ್ನು ಕಂಡಿರೇನು?" ಎಂದು ಪ್ರಶ್ನೆ ಮಾಡಿದನು. ಅದಕ್ಕೆ ಇಲ್ಲೆಂದು ಹೇಳಿ ತರ್ಕರತ್ನನು:—"ಭುವನ, ನಿನ್ನನ್ನು ಗಾಯಗೊಳಿಸಿದವರಾರು?" "ಫಿರಂಗಿಗಳ ಕೂಡ ಕಾದಾಡುವಾಗ ನನಗೆ ಅಲ್ಪಸ್ವಲ್ಪ ಗಾಯಗಳಾದವು" "ಯಾವಾಗ?" "ಎರಡು ಗಂಟೆಗಳ

ಪೂರ್ವದಲ್ಲಿ ಗೋಸ್ವಾಮಿಗಳ ಮಗಳನ್ನು ಆ ಫಿರಂಗಿಗಳು ಅಪಹರಿಸುವಾಗ'' ''ಆಗ ಮಹಾರಾಜರೆಲ್ಲಿದ್ದರು?'' ''ಅವರೂ ನನ್ನೊಡನೆಯೇ ಇದ್ದರು. ಅವರಿಗೂ ಬಲವಾದ ಗಾಯಗಳಾಗಿವೆ'' ಎಂದಂದು ಭುವನನು ಫಿರಂಗಿಗಳ ನಾವೆಯನ್ನು ಕಂಡಾಗಿನಿಂದ ತಾನು ಹಲ್ಲುಗಳಲ್ಲಿ ಡೋಣಿಯ ಹಗ್ಗವನ್ನು ಕಚ್ಚಿ ಈಸು ಬಿದ್ದು ಆ ದಸ್ಯುಗಳ ಅತ್ಯಾಚಾರದಿಂದ ಪಾರಾದವರೆಗಿನ ಸಮಸ್ತ ಸಂಗತಿಯನ್ನೂ ತರ್ಕರತ್ನನಿಗೆ ತಿಳಿಸಿದನು.

ಬಳಿಕ ತರ್ಕರತ್ನನು:—''ಈಗ ಮಹಾರಾಜರೆಲ್ಲಿರುವರು?''

ಭುವನ:-''ಅವರಿಗೆ ಡೋಣಿಯಲ್ಲೇ ತುಸ ದೇಹಭಾನವುಂಟಾದ ಬಳಿಕ ಊರೊಳಗೆ ಹೋಗಿ ಕೆಲ ಜನರನ್ನು ಕರೆತರುವೆನೆಂದು ಹೇಳಿ, ನಾನು ಅಲ್ಲಿಂದ ಗ್ರಾಮಕ್ಕೆ ಬಂದೆನು. ಇಲ್ಲಿಂದ ತುಸಹೊತ್ತಿನಲ್ಲಿಯೇ ಕೆಲ ಜನರನ್ನು ಕರೆಕೊಂಡು ಮರಳಿ ಡೋಣಿ ಬಿಟ್ಟಲ್ಲಿಗೆ ಹೋಗಿ ನೋಡುತ್ತೇನೆ; ಅಲ್ಲಿ ಡೋಣಿಯೂ ಇಲ್ಲ-ಮಹಾರಾಜರೂ ಇಲ್ಲ. ಆದರಿಂದ ಗಾಬರಿಯುಂಟಾಗಿ ಅವರನ್ನು ಹುಡುಕುವ ಸಲುವಾಗಿ ಇಲ್ಲಿಗೆ ಬಂದೆನು''

ಅದಕ್ಕೆ ತರ್ಕರತ್ನನು:—ಭುವನ, ನಾವು ಮಹಾರಾಜರನ್ನು ಕಂಡೇ ಇಲ್ಲ. ಆ ಸಾಹಸಿಯು ನಿನ್ನ ಆ ಚಿಕ್ಕ ಡೋಣಿಯನ್ನು ತಕ್ಕೊಂಡೇ ಆ ಫಿರಂಗಿಗಳನ್ನು ಬೆನ್ನಟ್ಟಿಕೊಂಡು ನಡೆದಿರಬಹುದಾಗಿದೆ; ಸಂದೇಹವಿಲ್ಲ. ಆದ್ದರಿಂದ ಭುವನ, ಇನ್ನು ಸ್ವಲ್ಪವೂ ತಡಮಾಡದೆ ನೀನು ನಿನ್ನ ದೊಡ್ಡ ಡೋಣಿಯನ್ನು ಸಿದ್ಧಪಡಿಸು. ಮಹಾರಾಜ ದೇವೇಂದ್ರನಾರಾಯಣನ ಅನ್ನದ ಋಣವನ್ನು ಕೊಂಚಮಟ್ಟಿಗಾದರೂ ತೀರಿಸಬೇಕೆಂಬ ಇಚ್ಛೆಯುಳ್ಳಂಥ ಸಾಹಸಿಗಳನ್ನು ನಾನು ಈಗಲೆ ಹೊರಡಿಸಿಕೊಂಡು ಬರುತ್ತೇನೆ. ಮಯೂಖನು ಒಬ್ಬನೇ ಹೋಗಿರುವನು; ದಾರಿಯಲ್ಲಿ ಏನಾದೀತೆಂಬದನ್ನು ಹೇಳಲಿಕ್ಕೆ ಸಾಧ್ಯವಿಲ್ಲ. ನಾವು ತಡಮಾಡಿದರೆ, ದೇವೇಂದ್ರನಾರಾಯಣನ ವಂಶಲೋಪವಾಗುವ ಪ್ರಸಂಗವೇ ಬಂದೀತು. ತೀವ್ರವೇ ನಾವೆಲ್ಲರೂ ಸಪ್ತಗ್ರಾಮದ ಕಡೆಗೆ ತೆರಳೋಣ, ಎಂದವನೇ ತರ್ಕರತ್ನನು ಲಗುಬಗೆಯಿಂದ ಊರೊಳಗೆ ನಡೆದನು. ಭುವನನು ತನ್ನ ದೊಡ್ಡ ಡೋಣಿಯನ್ನು ಸಿದ್ಧಪಡಿಸಿದನು. ಅಲ್ಪಾವಕಾಶದಲ್ಲಿಯೇ ಭಾಗೀರಥೀ ನದಿಯಲ್ಲಿ ಒಂದು ದೊಡ್ಡ ಡೋಣಿಯು 15-20 ಜನ ಅಂಬಿಗರೂ, 25-30 ಜನ ಸಾಹಸಿಗರಾದ ತರುಣ ಬ್ರಾಹ್ಮಣರೂ ಇವರೊಡನೆ ತೀರಗತಿಯಿಂದ ದಕ್ಷಿಣಕ್ಕೆ ಸಾಗಿತು.

೩ನೇ ತರಂಗ.

—(೦)—

# ಆಶ್ರಯದಾತೃ.

ಕ್ರಿಸ್ತಶಕದ ೧೭೫೫ನೇ ಇಸವಿ. ಭಾದ್ರಪದಮಾಸ. ಪ್ರಶಸ್ತವಾದ ಗಂಗಾ ಪಾತ್ರದಲ್ಲಿ ಒಂದು ದೀರ್ಘವಾದ ಡೋಣಿಯು ದಕ್ಷಿಣಾಭಿಮುಖ ವಾಗಿ ಒತ್ತರದಿಂದ ಸಾಗಿತ್ತು. ಮೂರೂಸಂಜೆಯಾಗಿತ್ತು. ಭಾಗೀರಥಿಯ ಎರಡೂ ದಂಡೆಗಳ ಪ್ರದೇಶವು ಹೊಗೆಯಂತಹ ಮಂಜಿನಿಂದ ಕಾಣದಂತಾಗೆ ಹತ್ತಿತ್ತು. ಇಂಥ ಮುಚ್ಚಂಜೆಯ ಸಮಯದಲ್ಲಿ ಆ ಡೋಣಿಯವರಿಗೆ ಎದುರಿನಿಂದ ಬರುತ್ತಿರುವ ಒಂದು ಚಿಕ್ಕಡೋಣಿಯು ಕಾಣಿಸಿಕೊಂಡಿತು. ಕೂಡಲೆ ಇವರು ಗಟ್ಟಿದನಿಯಿಂದ "ನಿಮ್ಮ ಡೋಣಿಯನ್ನು ತುಸ ಅಡ್ಡ ಸರಿಸಿರಿ" ಎಂದು ಕೂಗಿದರು. ಆದರೂ ಆ ಚಿಕ್ಕ ಡೋಣಿಯು ಸರಿಯದೆ ನೆಟ್ಟಗೆ ಬರುತ್ತಲೇ ಇದ್ದಿತು. ಅಷ್ಟರಲ್ಲಿ ಆ ದೊಡ್ಡ ಡೋಣಿಯು ಚಿಕ್ಕ ಡೋಣಿಯ ಪಕ್ಕದಲ್ಲಿಯೇ ಬಂದಿತು. ದೊಡ್ಡ ಡೋಣಿಯವರು ಅತ್ತ ನೋಡುತ್ತಾರೆ, ಚಿಕ್ಕ ಡೋಣಿಯಲ್ಲಿ ಅಂಬಿಗರಾಗಲಿ, ಆರೋಹಿಗಳಾಗಲಿ ಯಾರೂ ಇರಲಿಲ್ಲ. ಒಂದು ವ್ಯಕ್ತಿಯು ಡೋಣಿಯಲ್ಲಿ ಪ್ರಜ್ಞಾವಿಹೀನ ವಾಗಿ ಬಿದ್ದುಕೊಂಡಿದ್ದು, ಡೋಣಿಯು ಭಾಗೀರಥಿಯ ಪ್ರವಾಹಗುಂಟ ಸಾಗಿದೆ. ಕೂಡಲೆ ಆ ದೊಡ್ಡ ಡೋಣಿಯವನು ತನ್ನ ಡೋಣಿಯ ಗತಿ ಯನ್ನು ಬದಲಿಸಿ, ಆ ಚಿಕ್ಕ ಡೋಣಿಯ ಹಿಂದಿನಿಂದ ಹೋಗಿ ಅದನ್ನು ಹಿಡಿದನು. ಎರಡು-ಮೂರು ಜನ ನಾವಿಕರು ಅದರಲ್ಲಿಳಿದು ಹೋಗಿ ಆ ಚೇತನಾವಿಹೀನ ವ್ಯಕ್ತಿಯ ಮೈಮುಟ್ಟಿ ಪರೀಕ್ಷಿಸಿದರು. ಅವನಿಗೆ ಹೆಚ್ಚಾಗಿ ಗಾಯಗಳಾಗಿ ರಕ್ತಶ್ರಾವದಿಂದ ಅಶಕ್ತತೆಯುಂಟಾಗಿದ್ದರೂ, ಇನ್ನೂ ಉಸಿ ರಾಡುತ್ತಿತ್ತು. ಆಗ ಅವರು ಅವನನ್ನು ತಮ್ಮ ಡೋಣಿಯಲ್ಲಿ ಎತ್ತಿಕೊಂ ಡೊಯ್ದರು; ಹಾಗು ಆ ಚಿಕ್ಕ ಡೋಣಿಯನ್ನು ಬಿಟ್ಟುಬಿಟ್ಟರು. ಅದು ಪ್ರವಾಹದಗುಂಟ ನಡೆಯಿತು. ದೊಡ್ಡ ಡೋಣಿಯು ಪುನಃ ದಕ್ಷಿಣ ದಿಕ್ಕಿಗೆ-ತನ್ನ ಗಂತವ್ಯ ಮಾರ್ಗದ ಕಡೆಗೆ ಹೊರಳಿ ಸಾಗಲಾರಂಭಿಸಿತು.

ಅಂಬಿಗರ ಶುಶ್ರೂಷೆಯಿಂದ ಗಾಯಪಟ್ಟವನಿಗೆ ಚೇತನೆಯುಂಟಾ ಯಿತು. ಆಗ ಅವರು "ನೀನಾರೆ"ಂದು ಅವನಿಗೆ ಕೇಳಿದರು. ಅವನು

ತನ್ನ ಗುರುತು ಕೊಡದೆ:—"ನೀವು ಎಲ್ಲಿಗೆ ಹೊರಟಿರುವಿರಿ?" ಎಂದು ಕೇಳಲು, ಅಂಬಿಗರು:—"ನಾವು ಸಪ್ತಗ್ರಾಮಕ್ಕೆ ಸಾಗಿರುವೆವು." "ನೀವು ದಾರಿಯಲ್ಲಿ ಮತ್ತಾವ ನಾವೆಯನ್ನಾದರೂ ಕಂಡಿರಾ?" "ಇಲ್ಲ, ನೀನು ಗಾಯಪಟ್ಟದ್ದೇಕೆ?" "ಫಿರಂಗಿಗಳೊಡನೆ ಕಾದುವಾಗ" "ಫಿರಂಗಿಗಳೊಡನೆ ಕಾಳಗವೇ? ಎಲ್ಲಿ?" "ಮಕಸೂಸಾಬಾದದ ಬಳಿಯ ಗೌರೀಪುರದ ಹತ್ತರ" "ಫಿರಂಗಿಗಳು ನಿಮ್ಮ ಹಡಗವನ್ನು ಸುಲಿದರೇನು?" "ಇಲ್ಲ, ಅವರು ನನ್ನ ಆಪ್ತಳೊಬ್ಬಳನ್ನು ಹರಣ ಮಾಡಿರುವರು."

ಆ ವ್ಯಕ್ತಿಯ ನುಡಿಯನ್ನು ಕೇಳಿ, ಒಬ್ಬ ಅಂಬಿಗನು ಆ ದೀರ್ಘ ಡೋಣಿಯ ಮಧ್ಯಸ್ಥಳದೊಳಗಿನ ಕೋಣೆಯನ್ನು ಪ್ರವೇಶಿಸಿದನು; ಹಾಗು ತುಸ ಹೊತ್ತಿನಲ್ಲಿಯೇ ಒಬ್ಬ ಪ್ರೌಢ ಮನುಷ್ಯನೊಡನೆ ಆ ವ್ಯಕ್ತಿಯ ಬಳಿಗೆ ಬಂದನು. ಗಾಯಪಟ್ಟದ್ದವನು ನವತರುಣನು. ಬಟ್ಟಮೊಗದವನು. ಬಲಿಷ್ಠಕಾಯನು. ಬಂದ ಪ್ರೌಢನು ಆ ತರುಣನನ್ನು ಕುರಿತು;-"ನೀವು ಯಾರು, ಎಲ್ಲಿಯವರು?" ಮುಂತಾದವುಗಳನ್ನು ತಿಳಿಸುವ ಸಲುವಾಗಿ ಅರಿಕೆ ಮಾಡಿಕೊಂಡನು; ಆದರೆ ತರುಣನು ತನ್ನ ಪರಿಚಯವನ್ನು ತಿಳಿಸಲಿಕ್ಕೆ ಸಮ್ಮತಿಸಲಿಲ್ಲ. ಆಗ ಆ ಪ್ರೌಢನು ಆ ಬಗ್ಗೆ ಪುನಃ ಕೇಳದೆ:—ಯುವಕಾ, ನೀನು ಶೂರ-ವೀರನಂತೆ ತೋರುತ್ತೀ. ನೀನು ಅಸ್ತ್ರವಿದ್ಯೆಯನ್ನು ಬಲ್ಲೆಯಾ? ಬಂದೂಕಿನಿಂದ ಗುರಿ ಹೊಡೆಯುವೆಯಾ?" "ನನಗೆ ಗೊತ್ತಿಲ್ಲದಂತಹ ಹಾಗು ಗತಿಯಿಲ್ಲದಂತಹ ಯಾವ ಶಸ್ತ್ರಾಸ್ತ್ರವೂ ಇಲ್ಲ." "ನಿನ್ನ ಜಾತಿ ಯಾವದು?" "ನಾನು ಬಂಗಾಲೀ ಬ್ರಾಹ್ಮಣನು. ಇದರ ಹೊರತು ನನ್ನ ಸಂಬಂಧದ ಯಾವ ಪ್ರಶ್ನೆಯನ್ನೂ ಸದ್ಯಕ್ಕೆ ಮಾಡಬೇಡಿರಿ. ತಾವು ನನಗೀಗ ಜೀವದಾತೃಗಳು. ತಮ್ಮ ಆಜ್ಞೋಲ್ಲಂಘನೆ ಮಾಡುವದೆಂದರೆ ನನ್ನ ಜೀವಕ್ಕೆ ಸಂಕಟವಾಗುತ್ತಿದೆ."

ಆ ತರುಣನು ಬ್ರಾಹ್ಮಣನೆಂಬದನ್ನು ತಿಳಿದು ಆ ಪ್ರೌಢನು ಅವನಿಗೆ ನಮಸ್ಕಾರ ಮಾಡಿ ಅವನ ಪಾದ ಧೂಲಿಯನ್ನು ಶಿರಸಾವಹಿಸಿ:—ಠಾಕೂರ, ತಾವು ಒಳಗೆ ಬನ್ನಿರಿ, ಎಂದೆಂದು ಅವನನ್ನು ಆ ಡೋಣಿಯೊಳಗಿನ ತಮ್ಮ ಕೋಣೆಗೆ ಕರೆದೊಯ್ದನು. ಆ ಡೋಣಿಗೆ ಒಂದೇ ಒಂದು ಚಿಕ್ಕ ಕೊಠಡಿಯಿದ್ದಿತು. ಆದರಲ್ಲಿ ಮೃದುವಾದ ಹಾಸಿಗೆಯ ಮೇಲೆ ಒಬ್ಬ ಸುಂದರ ತರುಣನು ಬಿದ್ದುಕೊಂಡಿದ್ದನು. ಪ್ರೌಢನು ಒಳಗೆ ಬಂದು ಆ ಬಿದ್ದು

ಕೊಂಡವನನ್ನುದ್ದೇಶಿಸಿ:—ಗೋಷ್ಠ, ಈ ನಮ್ಮ ಅತಿಥಿಯು ಬ್ರಾಹ್ಮಣನು, ಇವರಿಗೆ ನಮಸ್ಕಾರ ಮಾಡೇಳು, ಎಂದನು. ಕೂಡಲೆ ಆ ತರುಣನು ಬ್ರಾಹ್ಮಣನಿಗೆ ನಮಸ್ಕರಿಸಿದನು.

ಬಳಿಕ ಆ ಪ್ರೌಢನು ಪುನ:—ಗೋಷ್ಠ, ನಮ್ಮ ಸ್ವಂತದ ಬಂದೂಕ ಗಳನ್ನೆಲ್ಲ ಹೊರಹೊರಡಿಸು, ಎನಲು, ಗೋಷ್ಠನು ಆ ಕೋಣೆಯ ನೆಲ ಮನೆಯಿಂದ ೮-೧೦ ಬಹುಮೂಲ್ಯ ಬಂದೂಕಗಳನ್ನು ತಂದನು. ಆಗ ಪ್ರೌಢನು ಬ್ರಾಹ್ಮಣನನ್ನುದ್ದೇಶಿಸಿ:—ಠಾಕೂರ, ಇವುಗಳೊಳಗಿನ ತಮ್ಮ ಮನಸ್ಸಿಗೆ ಬರುವ ಯಾವುದೊಂದು ಬಂದೂಕನ್ನು ತಕ್ಕೊಳ್ಳಿರಿ. ಕೂಡಲೆ ತರುಣನು ಅವುಗಳೊಳಗಿನ ಹಿಂದು ಎಲ್ಲಕ್ಕೂ ಕ್ಷುದ್ರವಾದ ಆದರೆ ಸಾಮರ್ಥ್ಯದಲ್ಲಿ ಹಿಳ್ಳೀ ಬಲವಾದ ಬಂದೂಕನ್ನು ತಕ್ಕೊಂಡನು. ಅಷ್ಟರಲ್ಲಿ ಗೋಷ್ಠನು ಆ ಕೋಣೆಯ ಮಾಳಿಗೆಯ ಮೇಲಿದ್ದ ಮದ್ದು-ಗುಂಡುಗಳನ್ನು ತಂದು ಅವನ ಮುಂದಿಟ್ಟನು. ತರುಣನು ಅವನ್ನೆಲ್ಲ ತನ್ನ ವಶದಲ್ಲಿಟ್ಟು ಕೊಂಡು ಸಜ್ಜಾದನು. ನಂತರ ಪ್ರೌಢನು:—ಠಾಕೂರ, ನೀವು ವಿಶೇಷ ಆಯಾಸಪಟ್ಟಿರುವಿರಿ; ಆದ್ದರಿಂದ ತುಸ ವಿಶ್ರಾಂತಿ ಹೊಂದಿರಿ, ಎನಲು, "ಛೇ ಛೇ, ನನಗೆ ಎಳ್ಳಷ್ಟೂ ಆಯಾಸವೆನಿಸುವದಿಲ್ಲ." "ಹಾಗಾದರೆ ಇತ್ತ ಬನ್ನಿರಿ; ರಾತ್ರಿಯಲ್ಲಿ ಮಾಡಬೇಕಾದ ಯುದ್ಧದ ಸಿದ್ಧತೆ ಮಾಡೋಣ" "ನಿಮ್ಮ ನಾವಿಕರೆಲ್ಲರೂ ಬಂದೂಕಗಳನ್ನು ಹಿಡಿಯ ಬಲ್ಲರೇ?" ಎಂಬ ತರುಣನ ಪ್ರಶ್ನೆಗೆ ಪ್ರೌಢನು:—ಠಾಕೂರ, ನಮ್ಮ ಅಂಬಿಗರು ಜಾತಿಯ ಗಂಗಾಪುತ್ರರಲ್ಲ; ಇವರೆಲ್ಲರೂ ಶಸ್ತ್ರಾಸ್ತ್ರಗಳ ಶಿಕ್ಷಣ ಪಡೆದಂತಹ ಶಿಪಾಯಿಗಳು. ಇವರು ಪ್ರಸಂಗದಲ್ಲಿ ಯುದ್ಧವನ್ನೂ, ಆದಿಲ್ಲದಾಗ ಅಂಬಿಗರ ಕೆಲಸವನ್ನೂ ಮಾಡುತ್ತಿರುತ್ತಾರೆ.

"ನಿಮ್ಮ ಬಳಿಯಲ್ಲಿ ಎಷ್ಟು ಜನ ಶಿಪಾಯಿಗಳಿರುತ್ತಾರೆ?" "ನೂರೈವತ್ತುಮಂದಿ. ಎಲ್ಲರ ಬಳಿಯಲ್ಲೂ ಬಂದೂಕುಗಳಿರುತ್ತವೆ." "ಅವರು ಅವಕ್ಕೆಲ್ಲ ಮದ್ದು-ಗುಂಡುಗಳನ್ನು ತುಂಬಿರುವರೊ?" "ಆ ವಿಷಯವನ್ನು ಕೇಳಿ ತಿಳಿಯುವಾ, ಬನ್ನಿರಿ" ಎಂದೆಂದು ಪ್ರೌಢನು ಆ ತರುಣನೊಡನೆ ಆ ಕೋಣೆಯಿಂದ ಹೊರಗೆ ಬಂದನು.

ಆ ಮೂವರೂ ಕೋಣೆಬಿಟ್ಟು ಹೊರಗೆ ಬಂದಾಗ ಶುಕ್ಲಪಕ್ಷದ ನವಮಿಯ ಚಂದ್ರಜ್ಯೋತಿಯು ಎಲ್ಲೆಡೆಯಲ್ಲಿಯೂ ಚೆನ್ನಾಗಿ ಬೆಳಗುತ್ತಿತ್ತು.

ಅಂಧಕಾರವು ಇದ್ದಿಲ್ಲವೆಂತಲ್ಲ, ಅದು ದೊಡ್ಡ ದೊಡ್ಡ ತರುಗಳ ಮತ್ತು ಗಿರಿ-ಗಂಹ್ವರಗಳ ಆಶ್ರಯದಲ್ಲಿ ಸೇರಿತ್ತು.

ಪ್ರೌಢನು ಮುಖ್ಯ ಅಂಬಿಗನನ್ನು ಕರೆಯಲು, ಅವನು ಡೋಣಿಯ ಕರ್ಣಧಾರವನ್ನು ಮತ್ತೊಬ್ಬನ ಕೈಗೆ ಕೊಟ್ಟು ಬಂದನು. ಆಗ ಪ್ರೌಢನು:- ಕೇನಾರಾಮ, ಇಂದು ರಾತ್ರಿಯಲ್ಲಿ ಕಾಳಗವಾಗಬಹುದಾಗಿದೆಯಾದ್ದರಿಂದ ಸಿದ್ಧವಾಗಿರ್ರಿ. ಕೇನಾರಾಮನು ಒಡೆಯನ ಈ ಅಪ್ಪಣೆಯಿಂದ ಕೊಂಚವೂ ವಿಸ್ಮಿತನಾಗದೆ:-ಯಾರೊಡನೆ ಕಾದುವದು ಧಣಿಯರೇ? "ಫಿರಂಗಿದಸ್ಯುಗಳೊಡನೆ" "ಇಲ್ಲಿಯೂ ಫಿರಂಗಿಗಳೇ? ಬರೇ ನಮ್ಮ ಸಪ್ತಗ್ರಾಮದಲ್ಲಿ ಅವರ ಉಪಟಳವಿದ್ದಿರಬಹುದೆಂದು ನಾನು ತಿಳಿದಿದ್ದೆನು; ಆದರೆ ಅವರು ಇಡಿ ಬಂಗಾಲದೇಶವನ್ನೇ ನುಗ್ಗಿರುವರಲ್ಲವೆ? ಹಾಗಾದರೆ ೨-೩ ತೋಫುಗಳನ್ನು ತೆಗೆದು ಸಿದ್ಧಪಡಿಸಲೊ?" "ಅವಶ್ಯವಾಗಿ ಮಾಡು. ಮದ್ದುಗುಂಡುಗಳ ಕೊರತೆಯಿಲ್ಲವಷ್ಟೆ?" "ಒಡೆಯರೇ, ನಮ್ಮಲ್ಲಿ ಬೇಕಾದಷ್ಟು ಮದ್ದು-ಗುಂಡಿದೆ; ಆದರೆ ಕಾದಾಳುಗಳೇ ಕಡಿಮೆ. ನಮ್ಮ ಇಷ್ಟು ದೊಡ್ಡ ಯುದ್ಧದ ಡೋಣಿಗೆ ತೀರ ಕಡಿಮೆಯೆಂದರೆ ಮುನ್ನೂರು ಜನ ಶಿಪಾಯಿಗಳಾದರೂ ಬೇಕು." "ಅದಿರಲಿ, ನಿಮ್ಮ ಬಂದೂಕಗಳೆಲ್ಲವೂ ತುಂಬಿ ಸಜ್ಜಾಗಿವೆಯೊ?" "ಎಲ್ಲವೂ ಸಜ್ಜಾಗಿವೆ. ತೋಫುಗಳನ್ನಷ್ಟು ಮಾತ್ರ ಈಗ ಸಿದ್ಧಪಡಿಸುವೆವು" ಎಂದೆಂದು ಕೇನಾರಾಮನು ತನ್ನ ಸ್ಥಳಕ್ಕೆ ಹೋಗಿ, ಡೋಣಿಯ ನೆಲಮನೆಯೊಳಗಿನ ೨-೩ ತೋಫುಗಳನ್ನು ತೆಗೆದು ಮೇಲೆ ಹೂಡಲಿಕ್ಕೆ ತನ್ನ ಕೈಕೆಳಗಿನವರಿಗೆ ಹೇಳಿದನು. ಆ ಪ್ರಕಾರ ಅಲ್ಪಾವಧಿಯಲ್ಲಿಯೇ ತೋಫುಗಳು ಸಿದ್ಧವಾದವು.

ಬಳಿಕ ಆ ಡೋಣಿಯು ನಕ್ಷತ್ರಗತಿಯಿಂದ ಶೀಘ್ರವಾಗಿ ಸಾಗಿಸಲ್ಪಡಹತ್ತಿತು. ಆ ರಾತ್ರಿಯ ೨ನೇ ಪ್ರಹರವು ಸಂದುಹೋಯಿತು. ಅಷ್ಟರಲ್ಲಿ ಭಾಗೀರಥಿಯ ಪಶ್ಚಿಮ ತಟಾಕದ ಕಡೆಗೆ ದೊಡ್ಡ ಉರಿಯು ಕಾಣಿಸತೊಡಗಿತು. ಅದನ್ನು ಕಂಡು ಪ್ರೌಢನು ಕೇನಾರಾಮನನ್ನುದ್ದೇಶಿಸಿ:—ಈ ಬೆಂಕಿಯಾತರದು? "ಯಾವುದೋ ಒಂದು ಊರಿಗೆ ಬೆಂಕಿಹತ್ತಿದಂತೆ ತೋರುತ್ತದೆ" ನೋಡನೋಡುವಷ್ಟರಲ್ಲಿ ಡೋಣಿಯು ಆ ಬೆಂಕಿಹತ್ತಿದ ಕಡೆಗೇ ಬಂದು ಬಿಟ್ಟಿತು. ಒಂದು ದೊಡ್ಡ ಊರಿಗೆ ಬೆಂಕಿಹತ್ತಿದೆಂಬದು ಡೋಣಿಯೊಳಗಿನವರಿಗೆಲ್ಲರಿಗೂ ತಿಳಿಯಿತು. "ಇಷ್ಟು ದೊಡ್ಡ ಊರು

ಒಮ್ಮೆಲೆ ಎಲ್ಲ ಕಡೆಯಿಂದಲೂ ಉರಿಯುತ್ತಿರುವದೇಕೆ? ಈ ಗ್ರಾಮಕ್ಕೆ ಬೇಕಂತ ಯಾರಾದರೂ ಬೆಂಕಿ ಹಚ್ಚಿರಬಹುದಾಗಿದೆ'' ಎಂದು ಎಲ್ಲರೂ ತರ್ಕಿಸಿದರು. ಅವರೊಳಗಿನವನೊಬ್ಬನು:—''ಫಿರಂಗಿಗಳ ಕೃತ್ಯವಿದಲ್ಲವಷ್ಟೆ?'' ಎಂದು ನುಡಿಯಲು, ಕೇನಾರಾಮನು:-ಭಗವಂತನಿಗೆ ಗೊತ್ತು. ಹುಜೂರ, ಅಪ್ಪಣೆಯಾದರೆ ನಮ್ಮ ಡೋಣಿಯನ್ನು ಆ ದಂಡೆಗುಂಟ ಬಿಡುತ್ತೇನೆ. ಅಂದರೆ ನಿಜಸ್ಥಿತಿಯು ಗೊತ್ತಾಗುವದಲ್ಲದೆ, ಅತ್ತಣ ಗಿಡಮರಗಳ ಕವಿನೆಳಲಲ್ಲಿ ಸಾಗುವದರಿಂದ ಇದು ಹೆರವರಿಗೆ ಒಮ್ಮೆಲೆ ಗೋಚರವಾಗಲಿಕ್ಕಿಲ್ಲ; ಹಾಗು ನಮ್ಮ ಮೇಲೆ ಒಮ್ಮೆಲೆ ಸಂಕಟವೂ ಪ್ರಾಪ್ತವಾಗಲಿಕ್ಕಿಲ್ಲ, ಎಂದೆನ್ನಲು, ಪ್ರೌಢನು:-ಹಾಗೆಯೇ ಆಗಲೆಂದನು.

ಇಷ್ಟರಲ್ಲಿ ಎದುರಿನಿಂದ ಬರುತ್ತಿರುವ ಒಂದು ಬಹು ದೊಡ್ಡ ಯುದ್ಧದ ಹಡಗವನ್ನು ಕಂಡು, ಕೇನಾರಾಮನು ತನ್ನ ಡೋಣಿಯನ್ನು ಭಾಗೀರಥಿಯ ಪಶ್ಚಿಮದಂಡೆಯ ಒಂದು ಕ್ಷುದ್ರಒತ್ತಿನಲ್ಲಿ ಸರಿಸಿ ಒಂದು ಗಿಡದ ಕವಿನೆಳಲಲ್ಲಿ ನಿಲ್ಲಿಸಿ ಕಟ್ಟಿದನು; ಹಾಗು ೨೦-೨೫ ಜನ ಅಂಬಿಗರನ್ನು ಆ ಡೋಣಿಯನ್ನು ಕಾಯಹಚ್ಚಿ ಉಳಿದವರೆಲ್ಲರೂ ದಂಡೆಯ ಮೇಲಿಳಿದರು. ದಂಡೆಯ ಮೇಲಿಳಿದ ಕೂಡಲೆ ಬ್ರಾಹ್ಮಣತರುಣನನ್ನು-ಮಯೂಖನನ್ನು ಕುರಿತು ಪ್ರೌಢನು:—''ಠಾಕೂರ, ಈ ಗ್ರಾಮವು ತಮಗೆ ಪರಿಚಯುದ್ದಷ್ಟೇ'' ''ಇಲ್ಲ. ನಾವು ಈಗ ನೆಟ್ಟಗೆ ಊರೊಳಗೆ ಹೋಗದೆ ನದಿಯ ದಂಡೆಗುಂಟ ಸಾಗಬೇಕು. ಅಂದರೆ ನಾವು ನಮ್ಮ ಡೋಣಿ ಹಾಗು ಎದುರಿನಿಂದ ಬರಬಹುದಾದ ಶತ್ರುಗಳ ಗುಂಪು ಇವರ ನಡುವೆ ಹೋದಂತಾಗುವದು. ಹೀಗೆ ಮಾಡುವದರಿಂದ ಬೇಕಾದಾಗ ನಾವು ನಮ್ಮ ಡೋಣಿಯನ್ನು ಸೇರಬಹುದು.'' ಮಯೂಖನ ಈ ಯುಕ್ತಿಸಮ್ಮತ ನುಡಿಯನ್ನು ಕೇಳಿ ಪ್ರೌಢನು:—ಇದು ಒಳ್ಳೇ ಹಂಚಿಕೆಯು! ಮಯೂಖ, ನೀನು ಸಂಗ್ರಾಮಶಾಸ್ತ್ರದಲ್ಲಿ ಪಾರಂಗತನಿದ್ದಂತೆ ತೋರುತ್ತದೆ.

ಆ ಡೋಣಿಯ ಒಡೆಯನಾದ ಆ ಪ್ರೌಢನ ಹೆಸರು ಗೋಕುಲವಿಹಾರಿಯು. ಆತನ ಆ ತರುಣ ಮಗನೇ ಗೋಷ್ಠವಿಹಾರಿಯು. ಇವರು ಸಪ್ತಗ್ರಾಮದ ಸುಪ್ರಸಿದ್ಧ ವಣಿಕರು. ಬಳಿಕ ಗೋಕುಲ, ಗೋಷ್ಠ ಮತ್ತು ಮಯೂಖರು ಅಂಬಿಗರ ಮುಂದೆ ಮುಂದೆ ನಡೆದರು. ಕೆಲದಾರಿ ಕ್ರಮಿಸಿದ ಬಳಿಕ ಮಯೂಖನು:—ಗೋಕುಲವಿಹಾರಿಶ್ರೇಷ್ಠಿಗಳೇ, ನಾವೀಗ

ಎಲ್ಲರೂ ಒತ್ತಟ್ಟಿಗೇ ಹೋಗುವದುಚಿತವಲ್ಲ. ನಾವಿಕಗಣದಲ್ಲಿ ಎರಡು ತಂಡಗಳನ್ನು ಮಾಡಿ ಒಬ್ಬರು ಒಂದು ಭಾಗದೊಡನೆ ಊರೊಳಗೆ ಹೋಗಿ ಊರವರಿಗೆ ಸಹಾಯ ಮಾಡಬೇಕು. ಇನ್ನೊಬ್ಬರು ಉಳಿದ ನಾವಿಕರೊಡನೆ ಈ ನದೀ ತಟಾಕದಲ್ಲಿಯೇ ಇದ್ದು ವೈರಿಗಳ ದಾರಿಕಾಯು ತ್ತಿರಬೇಕು. ಮಯೂಖನ ವಿಚಾರವು ಸೆಟ್ಟಿಗೆ ಸಮ್ಮತವಾಯಿತು. ೭೦-೭೦ ಜನ ಅಂಬಿಗರ ೨ ಗುಂಪುಗಳನ್ನು ಮಾಡಿ, ಒಂದನ್ನು ತಕ್ಕೊಂಡು ಗೋಕುಲನು ತನ್ನ ಮಗನೊಡನೆ ನದೀತಟಾಕದಲ್ಲಿ ನಿಂತನು. ಮತ್ತೊಂದು ಗುಂಪಿನೊಡನೆ ಮಯೂಖನು ಊರವರಿಗೆ ನೆರವಾಗುವದಕ್ಕಾಗಿ ಸಾಗಿದನು.

ಅಲ್ಪಾವಧಿಯಲ್ಲಿಯೇ ಊರೊಳಗೆ ಬಂದೂಕಿನ ಸಪ್ಪಳವಾಗತೊಡಗಿತು; ಹಾಗು ಕ್ಷಣಾರ್ಧದಲ್ಲಿ ಒಬ್ಬ ಶಿಪಾಯಿಯು ಧಾವಿಸುತ್ತ ಬಂದು, "ನಮ್ಮನ್ನು ನೋಡಿ ವೈರಿಗಳು ಓಡತೊಡಗಿರುವರು. ಅವರ ಹಡಗು ಪಡೆಯು ಈಗೆಲ್ಲಿದೆ?" ಎಂದು ಗೋಕುಲನಿಗೆ ಪ್ರಶ್ನಮಾಡಲು, "ಅವರ ಹಡಗವು ಎಲ್ಲಿದೆಯೋ ತಿಳಿಯದು. ಶತ್ರುಗಳು ಫಿರಂಗಿಗಳೇ ಏನು?" "ಫಿರಂಗಿಗಳಲ್ಲದೆ ಅನ್ಯರಾರು ಇಂಥ ನೀಚ-ಊರೊಳಗಿನವರೆಲ್ಲರೂ ಮಲಗಿದ ಹೊತ್ತಿನಲ್ಲಿ ಎಲ್ಲ ಕಡೆಯಿಂದಲೂ ಇಡೀ ಊರಿಗೇ ಬೆಂಕಿ ಹಚ್ಚುವ— ಉದ್ಯೋಗ ಮಾಡುವವರು?"

ಇದೇ ಕಾಲಕ್ಕೆ ಫಿರಂಗಿಗಳ ಹಡಗಿನಂತಹ ಒಂದು ವಿಶಾಲವಾದ ಹಡಗವು ಭಾಗೀರಥಿಯ ಇನ್ನೊಂದು ಒತ್ತಿನೊಳಗಿಂದ ಗಂಗೆಯನ್ನು ಪ್ರವೇಶಿಸಿತು. ಅದನ್ನು ಕಂಡು ಗೋಕುಲನು ಆ ಶಿಪಾಯಿಯನ್ನುದ್ದೇಶಿಸಿ:— ಇಗೋ ಈ ನಾವು ಫಿರಂಗಿಗಳದೆಂದು ತೋರುತ್ತಿದೆ. ನೀನು ಬಂದದಾರಿಯಿಂದ ಓಡುತ್ತ ಹೋಗಿ ಇನ್ನು ಊರೊಳಗೆ ನಿಲ್ಲುವದರಿಂದ ಉಪಯೋಗವಿಲ್ಲೆಂದೂ ಶತ್ರುಗಳು ನಾವೆಯನ್ನೇರಿ ಓಡಿದರೆಂದೂ ಮಯೂಖನಿಗೆ ತಿಳಿಸಿ, ಅವನೊಡನೆ ಎಲ್ಲರೂ ಅತಿತೀವ್ರವಾಗಿ ಡೋಣಿಗೆ ಬರ್ರಿ, ಎಂದು ಹೇಳಿದನು.

ಶಿಪಾಯಿಯು ಹೊರಟು ಹೋದನು. ಗೋಕುಲನು ಡೋಣಿಗೆ ಬಂದನು. ತುಸಹೊತ್ತಿನಲ್ಲಿಯೇ ಮಯೂಖನೂ, ಅವನ ಜೊತೆಯ ಅಂಬಿಗರೂ ಡೋಣಿಗೆ ಬಂದರು. ಅವರ ಡೋಣಿಯು ಕೂಡಲೆ ದಕ್ಷಿಣಾಭಿಮುಖವಾಗಿ ತೀರವೇಗದಿಂದ ನಡೆಯಹತ್ತಿತು. ಬಳಿಕ ಕೋಣೆ

ಯಲ್ಲಿ ಕುಳಿತುಕೊಂಡು ಗೋಕುಲನು ಮಯೂಖನಿಗೆ ಅನ್ನುತ್ತಾನೆ:—
“ಠಾಕೂರ, ಇನ್ನು ಎರಡು ದಿನಗಳಿಗೆ ನಾವು ಸಪ್ತಗ್ರಾಮಕ್ಕೆ ತಲುಪುವೆವು. ತಾವು ಅಲ್ಲಿ ಯಾರಲ್ಲಿ ಉಳಿದುಕೊಳ್ಳುತ್ತೀರಿ?” “ಫೌಜದಾರ ಕಲಿಮುಲ್ಲಾ ಖಾನರಲ್ಲಿ” “ಹೋದ ಕೂಡಲೆ ನೆಟ್ಟಗೆ ನೀವು ಫೌಜದಾರರ ಕಡೆಗೇ ಹೋಗುವಿರೇನು? ಸಪ್ತಗ್ರಾಮದಲ್ಲಿ ನಿಮ್ಮ ಗುರುತಿನ ಜನರು ಹೆಚ್ಚಾಗಿ ರುವರೇನು?” “ಅಲ್ಲಿ ನನ್ನ ಪರಿಚಯದವರಾರೂ ಇಲ್ಲ. ನನ್ನ ತಂದೆಯ ಋಣಾನುಬಂಧಿಕರಲ್ಲಿ ಒಬ್ಬಿಬ್ಬರಿರುತ್ತಾರೆ.” “ಅವರಿಗೆ ನಿಮ್ಮ ಪರಿಚಯ ವುಂಟೋ?” “ಛೀ-ಛೀ. ಬಹಳವಾದರೆ ಅವರು ನನ್ನ ಹೆಸರನ್ನು ಮಾತ್ರ ಕೇಳಿರಬಹುದು” “ಹಾಗಾದರೆ ನೀವು ಹೋದಕೂಡಲೆ ಉಳುಕೊಳ್ಳುವ ದೆಲ್ಲಿ?” “ಯಾರೂ ನನ್ನನ್ನು ಗುರ್ತಿಸದಿದ್ದರೆ ನಾನು ಧರ್ಮಸಾಲೆಯಲ್ಲಿ ರಬೇಕೆಂದಿರುತ್ತೇನೆ.” ಠಾಕೂರ, ಹಾಗೆ ಮಾಡದೆ ದಯವಿಟ್ಟು ನೀವು ಸಪ್ತಗ್ರಾಮದೊಳಗಿನ ನನ್ನ ವಖಾರಿನಲ್ಲಿ ವಾಸಿಸಬೇಕು. ಅಲ್ಲಿ ನಿಮ ಗಾವ ತರದ ಅಭಾವವೂ ಆಗದಂತೆ ನೋಡಿಕೊಳ್ಳುತ್ತೇನೆ” “ಗೋಕುಲ ವಿಹಾರಿಶ್ರೇಷ್ಠಿಗಳೇ, ನೀವು ನನ್ನ ಜೀವದಾತೃಗಳು. ನೀವು ನಿಮ್ಮ ನಾವಿಕರಿಂದ ಇಂದು ನನ್ನನ್ನು ಉಪಚರಿಸದಿದ್ದರೆ, ನಾನು ಈ ಗಂಗಾನದಿ ಯಲ್ಲಿಯ ಅದಾವ ಮೊಸಳೆ-ಮೀನಿನ ಪಾಲಾಗುತ್ತಿದ್ದೆನೋ ಯಾರು ಹೇಳ ಬೇಕು? ನೀವು ನನ್ನ ಏಕಮಾತ್ರ ಆಶ್ರಯದಾತೃಗಳಾದುದರಿಂದ, ನೀವು ಹೇಳುವಂತೆ ಕೇಳಲಿಕ್ಕೆ ನಾನು ಸಾನಂದದಿಂದ ಸಿದ್ಧವಾಗಿರುತ್ತೇನೆ. ಸಪ್ತ ಗ್ರಾಮಕ್ಕೆ ನಾನು ಅಪರಿಚಿತನು; ಕೈಯಲ್ಲಿ ಕಾಸಿಲ್ಲದ ತಿರುಕನು. ತಾವು ದಯೆಯಿಟ್ಟು ನನಗೆ ಮತ್ತೆ ತಮ್ಮಲ್ಲಿಯೇ ಆಶ್ರಯ ಕೊಡಬಯಸಿದ್ದನ್ನು ಕೇಳಿ ನನ್ನ ಪ್ರಾಚೀನ ಸುಕೃತವೇ ಬಂದು ನಿಂತಿತೆಂದು ಈಗ ನಾನು ತಿಳಿಯುತ್ತೇನೆ

ಹೀಗೆ ಅವರಲ್ಲಿ ಸಂಭಾಷಣವು ನಡೆದಿರಲು, ಒಮ್ಮೆಲೆ “ಧಡಲ್” ಎಂಬ ಕರ್ಣಕಠೋರವಾದ ತೋಫಿನ ಸಪ್ಪಳವು ಇವರ ಡೋಣಿಯ ಹಿಂದು ಗಡೆಯಲ್ಲಿ ಆಯಿತು ಆ ಘನಘೋರ ನಾದದಿಂದ ಗಾಳಿಗೆ ಸಿಕ್ಕ ಒಣಗಿದ ಲತಾಪತ್ರದಂತೆ ಇವರ ಡೋಣಿಯು ನಡುಗಹತ್ತಿತು. ಕೂಡಲೆ ಗೋಕುಲ ವಿಹಾರಿಯು ಕೋಣೆಯೊಳಗಿನ ದೀಪವನ್ನು ನಂದಿಸಿ, ಹೊರಗೆ ಬಂದು ನೋಡಹತ್ತಿದನು. ದೂರದ ಕತ್ತಲು ಪ್ರದೇಶದಲ್ಲಿ ಯುದ್ಧದ ಹಡಗಿ

ನಂತಹ ಒಂದು ವಿಸ್ತೃತವಾದ ನಾವೆಯು ನಿಂತುಕೊಂಡಿತ್ತು. ಅಷ್ಟರಲ್ಲಿ ಮುಖ್ಯ ಕರ್ಣಧಾರನು ಸೆಟ್ಟಿಯ ಬಳಿಗೆ ಬಂದು:—ಒಡೆಯರೇ, ಫಿರಂಗಿಗಳ ನಾವು ಆಗ ನಮ್ಮ ಮುಂದೆ ಹೊರಟದ್ದೇನೋ ನಿಜ; ಆದರೆ ಈಗ ಅದು ನಮ್ಮ ಹಿಂದೆ ಬರುತ್ತಿದ್ದು, ಅದರೊಳಗಿಂದ ಹಾರಿಸಲ್ಪಟ್ಟ ತೋಫಿನ ಗುಂಡು ನಮ್ಮ ಡೋಣಿಗೆ ಬಡಿಯಿತು. ಅದರಿಂದ ನಮಗೆ ವಿಶೇಷ ಹಾನಿಯಾಗದಿದ್ದರೂ, ನಮ್ಮ ಒಬ್ಬ ಶಿಪಾಯಿಯು ಪ್ರಾಣಕ್ಕೆರವಾದನು!

"ನಮ್ಮ ತೋಫು ಸಿದ್ಧವಿದೆಯಷ್ಟೇ?" "ಇದೆ; ಆದರೆ ನಮ್ಮ ಗುಂಡುಗಳು ಅಷ್ಟು ದೂರ ಹಾರುವದಿಲ್ಲ." "ಹಾಗಾದರೆ ಬೇಗನೆ ನಮ್ಮ ಡೋಣಿಯನ್ನು ಹಿಂದಿರುಗಿಸು." ಗೋಕುಲವಿಹಾರಿಯ ಆಜ್ಞೆಯಾದ ಕೂಡಲೆ ಡೋಣಿಯು ಹಿಂದಿರುಗಿ ಉತ್ತರ ದಿಕ್ಕನ್ನು ಹಿಡಿದು ಸಾಗಿತು. ಆಗ ಗೋಕುಲನು "ಠಾಕೂರ, ಈ ಅತ್ಯಾಚಾರವನ್ನು ತಡೆಯಲಾರೆನು. ಇನ್ನು ನಾನೇ ಮುಂದಾಗಿ ಅವರೊಡನೆ ಕಾದುವೆನು" ಎಂದು ಮಯೂಖನಿಗೆ ತಿಳಿಸಲು, "ನಿಮ್ಮ ಮೇಲೆ ಹೀಗೆ ಅತ್ಯಾಚಾರ ಮಾಡುವವರಾರು?" "ಮತ್ತೆ ಯಾರು ಮಾಡುವವರು? ಆ ನೀಚ ಪೋರ್ತುಗೀಜ ವಣಿಕರು ಅಥವಾ ಫಿರಂಗಿ ದಸ್ಯುಗಳು." "ಪೋರ್ತುಗೀಜ ವ್ಯಾಪಾರಸ್ಥರೇ ದಸ್ಯುಗಳೇನು?" "ಅಹುದು. ಬಿಗುವು ಕಂಡಲ್ಲಿ ಅವರು ವ್ಯಾಪಾರ ಮಾಡುತ್ತಾರೆ; ಪೊಳ್ಳು ತೋರಿದಲ್ಲಿ ಕೊಲೆ-ಸುಲಿಗೆ ಮಾಡುತ್ತಾರೆ." "ಇತ್ತ ಕಡೆಯ ಫೌಜದಾರನು ಇವರನ್ನು ಶಿಕ್ಷಿಸುವದಿಲ್ಲೇಕೆ?" "ಅಸಾಧ್ಯವೆಂದು ಅವನು ಅವರ ಗೊಡವೆಗೆ ಹೋಗುವದಿಲ್ಲ." "ಸುಭೇದಾರನೂ ಇತ್ತ ಲಕ್ಷ್ಯಗೊಡುವದಿಲ್ಲೇನು?" "ಠಾಕೂರ, ಒಳಗೆ ಬನ್ನಿರಿ; ಅದೆಲ್ಲವನ್ನೂ ತಿಳಿಸುತ್ತೇನೆ" ಎಂದಂದು ಗೋಕುಲವಿಹಾರಿಯು ಮಯೂಖ ಹಾಗು ಗೋಪ್ಮರೊಡನೆ ಆ ಡೋಣಿಯೊಳಗಿನ ಕೋಣೆಯನ್ನು ಪ್ರವೇಶಿಸಿದನು



೪ನೇ ತರಂಗ.

—(೦)—

## ಅತಿಥಿ-ಪರಿಚಯ.

"ಠಾಕೂರ, ನಾವು ಈಗ ಢಾಕಾದಿಂದ ಬರುತ್ತಲಿದ್ದೇವೆ. ಬಂಗಾಲದ ಪ್ರಸ್ತುತ ಸುಭೇದಾರನು ಫಿರಂಗಿಗಳ ಅತ್ಯಾಚಾರದಿಂದ ತನ್ನ ದರಿದ್ರ ಪ್ರಜೆಗಳನ್ನು ರಕ್ಷಿಸಲಿಕ್ಕೆ ಅಸಮರ್ಥನಾಗಿರುತ್ತಾನೆ; ಅದರಿಂದ ನಾವೇ ಈ ಫಿರಂಗಿ ದಸ್ಯುಗಳ ಕೂಡ ಹೋರಾಡಬೇಕಾಗಿದೆ" ಎಂದು ಗೋಕುಲ ವಿಹಾರಿಯು ನುಡಿಯಲು, ಮಯೂಖನು:—ಹಾಗಾದರೆ ದಿಲ್ಲೀ ಬಾದಶಹನ ಬಳಿಯಲ್ಲಿ ಫಿರ್ಯಾದು ಮಾಡಬಾರದೇಕೆ? "ಠಾಕೂರ, ನಾವು ಬಡ ವ್ಯಾಪಾರಿಗಳು. ಫಿರಂಗಿಗಳ ಉಪಟಳದಿಂದ ಈ ವರೆಗೆ ನಮ್ಮ ಸರ್ವಸ್ವವೂ ನಾಶವಾಗಿ ಹೋಗಿದೆ. ಏನು ಅಲ್ಪಸ್ವಲ್ಪ ಉಳಿದಿದೆಯೋ ದಿಲ್ಲಿಗೆ ಹೋದರೆ ಅದೂ ಹೋಗುವದು." "ಅದೇಕೆ, ಸ್ವತಃ ಬಾದಶಹನು ಅದನ್ನು ಕಸಗೊಳ್ಳುವನೇನು?" "ಇಲ್ಲ; ಆದರೆ ನಾನು ಇಲ್ಲಿಂದ ಬಾದಶಹನ ದರ್ಬಾರಿಗೆ ಹೋಗಿ ತಲುಪುವಷ್ಟರಲ್ಲಿ ಈ ಫಿರಂಗಿ ವಣಿಕರೂ ಕ್ರಿಶ್ಚನ್ ಪಾದ್ರಿಗಳೂ ಸೇರಿ, ನನ್ನ ಉಳಿದ ಸಂಪತ್ತನ್ನು ಎತ್ತಿ ಹಾಕುವರಿಷ್ಟೇ ಅಲ್ಲ, ನನ್ನ ಹೆಂಡಿರು-ಮಕ್ಕಳನ್ನು ಕೂಡ ಹರಣ ಮಾಡಿ ಬಿಡುವರು."

ಇದನ್ನು ಕೇಳಿ ಮಯೂಖನು ವಿಸ್ಮಿತನಾಗಿ ಗೋಕುಲನ ಮುಖದ ಕಡೆಗೆ ಟಕಮಕ ನೋಡಹತ್ತಿದನು ಕ್ಷಣಕಾಲದ ನಂತರ ಅವನು:— "ಮಹಾಶಯರೇ, ತಾವು ಯಾರು, ಯಾವ ವ್ಯಾಪಾರವನ್ನು ಮಾಡುತ್ತಿರುವಿರಿ?"

ಗೋಕುಲನು ಮುಗುಳುನಗೆಯಿಂದ:—ಠಾಕೂರ ಮಹಾಶಯರೇ, ನೀವು ನಿಮ್ಮ ಪರಿಚಯುವನ್ನು ಮಾಡಿಕೊಡದ ಮಾತ್ರಕ್ಕೆ ನಾವು ಹಾಗೆ ಮಾಡಲಾರೆವು. ನಾವು ಸಪ್ತಗ್ರಾಮ ವಾಸಿಗಳು. ನಮ್ಮ ಬೆಳ್ಳಿ-ಬಂಗಾರದ ಸರಾಫೀ ಅಂಗಡಿಗಳು ಹೇರಳವಾಗಿರುವವು. ನನ್ನ ಹೆಸರು **ಗೋಕುಲವಿಹಾರಿ** ಸೇನ ಎಂದು. **ಸಪ್ತಗ್ರಾಮ**, ಗೌಡ, **ಸುವರ್ಣ**

ಗ್ರಾಮ ಮತ್ತು ಡಾಕಾಗಳಲ್ಲಿ ನಮ್ಮ ವಖಾರಗಳಿವೆ. ಮೊದಲು ನಮ್ಮ ಸ್ವಂತದ ೧೦-೧೨ ಹಡಗಗಳಿದ್ದವು; ಆದರೆ ಒಂದೊಂದಾಗಿ ಅವೆಲ್ಲ ಈಗ ಕೈಬಿಟ್ಟು ಹೋಗಿವೆ. ಗೌಡ ಮತ್ತು ಡಾಕಾದೊಳಗಿನ ನಮ್ಮ ವ್ಯವಸಾಯವು ಅವನತ ಸ್ಥಿತಿಯಲ್ಲಿದೆ. ಸಪ್ತಗ್ರಾಮದಲ್ಲಂತೂ ಅದು ಕೇವಲ ಅಸಂಭವವಾಗಿ ಬಿಟ್ಟದೆ.

"ನನ್ನ ಹೆಸರು ಮಯೂಖನೆಂದು. ನನ್ನ ತಂದೆಯು ಉತ್ತರ ಬಂಗಾಲದಲ್ಲಿ ಒಬ್ಬ ಪ್ರಸಿದ್ಧ ಜಮೀನದಾರನಿದ್ದನು. ನನ್ನ ಬಾಲ್ಯಾವಸ್ಥೆಯಲ್ಲಿ ಬಾದಶಹನ ಅಪ್ಪಣೆಯ ಮೇರೆಗೆ ಆ ಹಕ್ಕು ನನ್ನ ಕಕ್ಕನಿಗೆ ಪ್ರಾಪ್ತವಾಯಿತು. ಈಗ ನಾನು ಕೇವಲ ದರಿದ್ರ ಭಿಕ್ಷುಕನು. ನನ್ನ ಚರಿತ್ರವು ಇದಕ್ಕೂ ಹೆಚ್ಚಿಲ್ಲ. ಗೋಕುಲಸೆಟ್ಟಿಗಳೇ, ನಿಮ್ಮ ೧೦-೧೨ ಹಡಗಗಳನ್ನು ನೀವು ಕಳಕೊಂಡ ಕಾರಣವೇನು?" ಎಂದು ಆ ಬ್ರಾಹ್ಮಣ ತರುಣನು ಪ್ರಶ್ನಮಾಡಲು, "ಪೋರ್ತುಗೀಜ ವ್ಯಾಪಾರಿಗಳು ಅವುಗಳಲ್ಲಿಯ ಕೆಲವನ್ನು ಮುಳುಗಿಸಿಬಿಟ್ಟರು; ಉಳಿದವುಗಳನ್ನು ಕಸಿದುಕೊಂಡರು" "ಅವರ ಆ ಕೃತಿಗೆ ಪ್ರತೀಕಾರವೇ ಇಲ್ಲವೇನು?" "ಹಲವು ಬಗೆಯಿಂದ ಪ್ರಯತ್ನಪಟ್ಟದ್ದಾಯಿತು. ಎಲ್ಲ ಕಡೆಯಿಂದಲೂ ನಿರಾಶೆಯು." "ಇನ್ನು ಮುಂದೆ ಏನು ಮಾಡಬೇಕೆಂದಿರುವಿರಿ?" "ಆತ್ಮರಕ್ಷಣೆಯ ಉದ್ಯೋಗವನ್ನು ಕೈಕೊಳ್ಳುವೆನು." "ಫೌಜದಾರ-ಸುಭೇದಾರರ ಸಹಾಯವಿಲ್ಲದೆ ನೀವೊಬ್ಬರೇ ಅವರೊಡನೆ ಕಾದುವ ಬಗೆ ಹೇಗೆ?" "ನನ್ನಲ್ಲಿ ಸ್ವಲ್ಪ ಸೈನ್ಯವಿದೆ; ಅಲ್ಲದೆ ಅನ್ಯ ಫಿರಂಗಿಗಳೂ ನನಗೆ ಸಹಾಯಕರಾಗಿರುತ್ತಾರೆ." "ಫಿರಂಗಿ ಜನರಲ್ಲಿ ಪ್ರಭೇದಗಳುಂಟೇ?"

"ಠಾಕೂರ, ನಿಮಗೆ ಆ ಸಂಗತಿಯೇ ಗೊತ್ತಿಲ್ಲವೇನು? ಈ ಪ್ರಾಂತದಲ್ಲಿ ಯಾರು ಬಲಿಷ್ಠರಾಗಿರುವರೋ ಅವರೇ ಪೋರ್ತುಗೀಜ ಫಿರಂಗಿಗಳು. ಇವರಲ್ಲಿಯೂ ಒಂದು ಪಾದ್ರಿಜನರ ತಂಡವು; ಇನ್ನೊಂದು ವಾಣಿಜ್ಯ ವ್ಯವಸಾಯ, ಭೂಸ್ವಾಮಿತ್ವದ ಆಡಳಿತೆ ಮುಂತಾದವುಗಳನ್ನು ನೀಗಿಸುವ ತಂಡವು. ಪೋರ್ತುಗೀಜ ಆಡಳಿತಗಾರರು ಅಷ್ಟೊಂದು ಕ್ರೂರರೂ ಅಲ್ಲ; ನೀಚರೂ ಅಲ್ಲ; ಆದರೆ ಆ ದೇಶದ ಪದ್ಧತಿಯ ಮೇರೆಗೆ ಅವರು ಪಾದ್ರಿಗಳ ಅಪ್ಪಣೆಯನ್ನು ಮನ್ನಿಸಿ, ಅವರಿಗೆ ಸಹಾಯಕರಾಗಬೇಕಾದುದರಿಂದ ನಮ್ಮ ಈ ಬಂಗಾಲ ದೇಶದಲ್ಲಿ ಆ ಪಾದ್ರಿಗಳ ಉಪಟಳವು ಹೆಚ್ಚಾಗಿದೆ.

ಉಳಿದ ದೇಶದ ಫಿರಂಗಿಗಳು ಇವರಷ್ಟು ಉದ್ಧಟರಲ್ಲ. ಎಲ್ಲ ಫಿರಂಗಿಗಳಲ್ಲಿ ಡಚ್ಚರೇ ಹೆಚ್ಚೀ ಪರಾಕ್ರಮಿಶಾಲಿಗಳು. ಇಂಗ್ಲಿಷ ಮತ್ತು ಫ್ರೆಂಚ ಜನರು ಈ ದೇಶದಲ್ಲಿ ತಮ್ಮ ವ್ಯಾಪಾರವನ್ನು ಬೆಳಿಸುತ್ತಿರುವರು. ಫ್ರೆಂಚರು ಇಂಗ್ಲಿಷರಿಗಿಂತಲೂ ಹೆಚ್ಚು ಪರಾಕ್ರಮಿಗಳೆಂದು ವಾರ್ತೆಯಿದೆ; ಆದರೆ ಈ ದೇಶದಲ್ಲಿ ಅವರ ಪರಾಕ್ರಮದ ಚಿಹ್ನವೇನೂ ಗೋಚರವಾಗುವದಿಲ್ಲ ನಾನು ಮಿಕ್ಕ ಫಿರಂಗಿ ವ್ಯಾಪಾರಿಗಳೊಡನೆ ವ್ಯವಹಾರ ಮಾಡುವೆನೆಂದು ಪೋರ್ತುಗೀಜ ಫಿರಂಗಿಗಳು ನನ್ನನ್ನು ದ್ವೇಷಿಸುತ್ತಿರುತ್ತಾರೆ; ಮತ್ತು ಆದಕ್ಕಾಗಿಯೇ ಅವರು ನನ್ನ ಹಡಗಗಳನ್ನು ಮುಳುಗಿಸಿರುವರು; ನನ್ನ ಸಪ್ತಗ್ರಾಮದೊಳಗಿನ ವಖಾರಿಗೆ ಬೆಂಕಿಯಿಟ್ಟಿರುವರು; ಮತ್ತು ನಾನಾ ಬಗೆಯಿಂದ ನನ್ನನ್ನು ಹಿಂಸಿಸುತ್ತಿರುವರು.''

‟ಬೇರೆ ಫಿರಂಗಿಗಳ ವಖಾರುಗಳಿಲ್ಲಾದರೂ ಇವೆಯೋ?'' ‟ಈ ಬಂಗಾಲದಲ್ಲಿಲ್ಲ. ಕೆಲದಿನಗಳ ಹಿಂದೆ ಇಬ್ಬರು ಇಂಗ್ಲಿಷ ವ್ಯಾಪಾರಸ್ಥರು ಪಾಟಣಾದಲ್ಲಿ ತಮ್ಮದೊಂದು ವಖಾರನ್ನು ಸ್ಥಾಪಿಸಿದ್ದರು; ಆದರೆ ಅದು ಕ್ಷಿಪ್ರದಲ್ಲಿಯೇ ಇಲ್ಲದಂತಾಯಿತು. ಮಿಕ್ಕ ಫಿರಂಗಿಗಳೆಲ್ಲರೂ ಸಪ್ತಗ್ರಾಮದಲ್ಲಾಗಲಿ, ಆದರ ಸಮೀಪದಲ್ಲಾಗಲಿ ತಮ್ಮ ತಮ್ಮ ವಖಾರುಗಳನ್ನು ಸ್ಥಾಪಿಸಬೇಕೆಂದಿರುತ್ತಾರೆ; ಸಪ್ತಗ್ರಾಮದ ಪೇಟೆಯಲ್ಲಿ ಎಲ್ಲ ಫಿರಂಗಿಗಳ ಅಡತದಾರರೂ ಖರೀದಿ-ವಿಕ್ರಯಗಳನ್ನು ನಡಿಸಿರುತ್ತಾರೆ. ಇತ್ತೀಚೆಗೆ ಪೋರ್ತುಗೀಜರ ಕೂಡ ನಮ್ಮ ದೇಶದವರಾರೂ ವ್ಯವಹಾರ ಮಾಡುವದಿಲ್ಲ. ಡಚ್ಚರೂ, ಇಂಗ್ಲಿಷರೂ ಒಟ್ಟುಗೂಡಿದರೆ ಪೋರ್ತುಗೀಜರ ಇಲ್ಲಿಯ ಪ್ರಭಾವವು ಅಲ್ಪಾವಧಿಯಲ್ಲೇ ಲೋಪವಾಗಬಹುದು.''

‟ಈ ಬಗ್ಗೆ ಸುಭೇದಾರನ ಕೂಡ ಆಲೋಚಿಸುವದರಿಂದ ಉಪಯೋಗವೇನೂ ಆಗದೆ?''

‟ಇಲ್ಲ. ಇಲ್ಲಿಯ ಈಗಿನ ಸುಭೇದಾರನಾಗಿರುವ ಮೊಕರಂಖಾನನು ಮಹಾ ವಿಲಾಸಪ್ರಿಯನು ಪೋರ್ತುಗೀಜ ಫಿರಂಗಿಗಳು ನಾನಾ ಬಗೆಯ ಪ್ರಲೋಭದಿಂದ ಅವನನ್ನು ಸಂತೋಷಗೊಳಿಸುತ್ತಿರುವರು ಆದರಿಂದ ಅವನು ಇಲ್ಲಿಯ ಪ್ರಜೆಗಳ ಗೋಳನ್ನೂ, ಅನ್ಯ ಜಾತಿಯ ಫಿರಂಗಿಗಳ ಅರ್ಜಿಗಳನ್ನೂ ಬಾದಶಹನಿಗೆ ತೋರಗೊಡುವದಿಲ್ಲ ''

"ಪೋರ್ತುಗೀಜರೊಡನೆ ಯಾರಾದರೂ ಕಾದಹತ್ತಿದರೆ ಸುಭೇದಾರನು ಅಸಂತುಷ್ಟನಾಗುವನೇನು?" "ಆದರೆ ಆಗಬಹುದು; ಇನ್ನು ಸುಭೇದಾರನನ್ನು ಸಂತುಷ್ಟಗೊಳಿಸಿಕೊಳ್ಳುವದೆಂದರೆ ನಾನು ಸವಂಶ ಸಾಯಬೇಕಾಗುವದು." "ಸುಭೇದಾರನೇ, ಫಿರಂಗಿಗಳಿಗೆ ಸಹಾಯ ಮಾಡಹತ್ತಿದರೆ?" "ದೇವರ ಮೇಲೆ ಭಾರಹಾಕಿಯೇ ಈ ಕೆಲಸ ಮಾಡಬೇಕಾಗಿದೆ. ಠಾಕೂರ, ಈ ಪ್ರಸಂಗದಲ್ಲಿ ನೀವೇನು ಮಾಡಬೇಕೆಂದಿರುವಿರಿ?" "ಮಹಾಮಾಯಿಯು ನನ್ನನ್ನು ನಿಮ್ಮ ಆಶ್ರಯಕ್ಕೆ ಕಳಿಸಿರುತ್ತಾಳೆ. ನೀವು ಏನು ಮಾಡ ಹೇಳುವಿರೋ ಅದನ್ನು ಮಾಡುತ್ತೇನೆ." "ಪೋರ್ತುಗೀಜ ವಣಿಕರಿಗಿಂತಲೂ ಅವರ ಪಾದ್ರಿಗಳು ಮಹಾ ನೀಚರೆಂದು ಈ ಮೊದಲೇ ತಿಳಿಸಿರುವೆನಷ್ಟೇ? ನಿಮ್ಮ ಋಣಾನುಬಂಧಿಕಳು ಅವರ ಕೈಗೆ ಸಿಕ್ಕಿದ್ದರೆ ಮಾತ್ರ ಅವಳನ್ನು ಉದ್ಧರಿಸುವದು ಕಠಿಣವೇ ಸರಿ!" "ನಾವು ನಾಳೆಗೆ ಸಪ್ತಗ್ರಾಮಕ್ಕೆ ಮುಟ್ಟಬಹುದೋ?" "ಛೆ-ಛೆ, ಸರ್ವಸಾಮಾನ್ಯ ಡೋಣಿಗಳಿಗೆ ಇಲ್ಲಿಂದ ಸಪ್ತಗ್ರಾಮಕ್ಕೆ ಹೋಗಲಿಕ್ಕೆ ಏಳು ದಿನಗಳು ಬೇಕು. ನಮ್ಮ ಈ ಡೋಣಿಗೆ ಎರಡು ದಿನಗಳು ಸಾಕು." "ಹಾಗಾದರೆ, ಫಿರಂಗಿಗಳ ಹಡಗು ಎಷ್ಟೊತ್ತಿಗೆ ಹೋದೀತು?" "ಹಗಲೂ ರಾತ್ರಿ ಎಡಬಿಡದೆ ದಾರಿ ಕ್ರಮಿಸಿದರೆ ಅವರು ನಾಳೆ ಸಂಜೆಗೆ ಸಪ್ತಗ್ರಾಮವನ್ನು ಸೇರಬಹುದು." "ಹಾಗಾದರೆ ನಾವು ಅವರಿಗಿಂತ ಒಂದು ದಿನ ತಡವಾಗಿ ಮುಟ್ಟಬಹುದಷ್ಟೇ? ಇದರಿಂದ ವಿಶೇಷ ಹಾನಿಯಾಗಲಿಕ್ಕಿಲ್ಲವೇ?" "ಇಲ್ಲ-ಇಲ್ಲ. ಸಪ್ತಗ್ರಾಮದಲ್ಲಿ ನಿಮ್ಮ ಋಣಾನುಬಂಧಿಕರಾರಾದರೂ ಇರುವರೇ?"

ಅದಕ್ಕೆ ಮಯೂಖನು ಹೇಳುತ್ತಾನೆ:-ಬಂದರದ ಮುಖ್ಯ ಮನಸಿಯಾದ ಹಾಫೀಜ ಅಹಮ್ಮದಖಾನ, ಡೆಪೂಟಿ ಮೀರ ಆತೇಶ ಇನಾಯತ ಉಲ್ಲಾಖಾನ, ಹಡಗುಪಡೆಯ ಮುಖ್ಯ ದಿವಾಣನಾದ ಚಿಂತಾಮಣಿ ಮುಜುಮದಾರ ಮತ್ತು ಫೌಜದಾರರ ಖಜೀನದಾರನಾದ ಹರಿನಾರಾಯಣ ಶೀಲ ಮುಂತಾದವರು ನನ್ನ ಋಣಾನುಬಂಧಿಕರಿರುತ್ತಾರೆ. "ಚಿಂತಾಮಣಿ ಮುಜುಮದಾರರೂ, ಹರಿನಾಯಣ ಶೀಲರೂ ಇನ್ನೂ ಸಪ್ತಗ್ರಾಮದಲ್ಲಿರುತ್ತಾರೆ. ಎರಡು ವರ್ಷಗಳ ಹಿಂದೆ ಅಹಮ್ಮದಖಾನನು ಸತ್ತು ಹೋದನು ಇನಾಯತ ಉಲ್ಲಾಖಾನನು ಜಾಹಂಗೀರ ನಗ

ರಕ್ಕೆ ವರ್ಗಾಯಿಸಲ್ಪಟ್ಟನು. ಫೌಜದಾರರ ಗುರತು ನಿಮಗಿದೆಯೋ?" "ಇಲ್ಲ; ಆದರೆ ಸುಲ್ತಾನ ಶಹಾಜಹಾನನೊಡನೆ ಓಡಿಸಾದ ಡೆಪ್ಯೂಟೀ ಸುಭೇದಾರನಾಗಿದ್ದ ಅಹಮ್ಮದ ಬೇಗ ಖಾನನ ಕಾಳಗವಾದಾಗ ನನ್ನ ತಂದೆಯೂ, ಫೌಜದಾರ ಕಲಿಮುಲ್ಲಾಖಾನನೂ ಪಿಪಲಿಯಿಂದ ವರ್ಧಮಾನದ ವರೆಗೆ ಕೂಡಿ ಸಾಗಿದ್ದರು. ಅಕಬರ ನಗರ ಮತ್ತು ಜಹಾಂಗೀರ ನಗರಗಳ ಕಾಳಗಗಳಲ್ಲಿ ನನ್ನ ತಂದೆಯು ಅಹಮ್ಮದ ಬೇಗ ಖಾನನ ಒಲಗೈಯುತ್ತಿದ್ದನು. ಡೆಪ್ಯೂಟಿ ಅಮಲ್‌ದಾರರಾದರೂ ಈಗ ಸಪ್ತಗ್ರಾಮದಲ್ಲಿರುವರೇನು?" ಅಪೂರ ಉಲ್‌ಬಹರ ಅಸದಖಾನನು ಕೆಲ ದಿನಗಳ ಮುಂಚೆ ಅಲ್ಲಿಗೆ ಬಂದಿರುತ್ತಾನೆ "ಇದೊಂದು ಬಲು ಸುದೈವದ ಮಾತೇ ಸರಿ. ಯಾಕಂದರೆ ಅಸದಖಾನನು ನನ್ನ ತಂದೆಯ ಹಿತಚಿಂತಕನು; ಋಣಾನುಬಂಧಿಕನು; ಕೇವಲ ಸಹೋದರನಂತಿರುವನು ಮುಹಬತ್‌ಖಾನ ಮತ್ತು ಖಾನಾಜದ್‌ಖಾನರ ಸುಭೇದಾರಿಕೆಯ ಅಮಲಿನಲ್ಲಿ ನನ್ನ ತಂದೆಯೂ ಅಸದಖಾನನೂ ಬಹು ದಿವಸಗಳವರೆಗೆ ವಿದ್ರೋಹಿಗಳ ಬಂಡು ಮುರಿಯುವ ಕೆಲಸವನ್ನು ಮಾಡಿರುವರು" "ಸುಭೇದಾರನ ಕೈಕೆಳಗಿನವರಾರಾದರೂ ನಿಮಗೆ ಪರಿಚಯದವರುಂಟೆ?" "ಡೆಪ್ಯೂಟಿ ಅಮಲ್‌ದಾರ ಭಗವಾನರಾಯನು ನನ್ನ ತಂದೆಯ ಪರಿಚಿತನು. ಅವನ ಹೊರತು ಇನ್ನಾರ ಗುರುತೂ ಇರುವದಿಲ್ಲ" ಹೀಗೆ ಅವರು ಸಂಭಾಷಣದಲ್ಲಿ ಬಹಳ ಹೊತ್ತು ಕಳೆದರು. ರಾತ್ರಿಯ ಮೂರನೇ ಯಾಮವೂ ಕಳೆಯಿತು. ಆದರಿಂದ ಇನ್ನು ವಿಶ್ರಾಂತಿ ಹೊಂದಿರೆಂದು ಗೋಕುಲಸೆಟ್ಟಿಯು ಮಯೂಖನಿಗೆ ಹೇಳಿ, ತಾನೂ ಮಲಗಿದನು.

ಆ ಮೂವರೂ ಆ ಕೋಣೆಯಲ್ಲಿ ಮಲಗಿರಲು, ಬೆಳಗಿನ ಜಾವದಲ್ಲಿ ಅವರ ಡೋಣಿಯು ಒತ್ತಟ್ಟಗೆ ಒಮ್ಮೆಲೆ ನಿಂತಿತು. ಮುಖ್ಯ ಕರ್ಣಧಾರನಾದ ಕೇಸಾರಾಮನು ಕೋಣೆಯೊಳಗೆ ಬಂದು ಗೋಕುಲವಿಹಾರಿಯನ್ನೆಬ್ಬಿಸಿ:—ಒಡೆಯರೇ, ಸಮ್ಮುಖದಲ್ಲಿ ಅನೇಕ ನಾವೆಗಳು ಕಂಗೊಳಿಸುತ್ತಲಿವೆ. ಅವೆಲ್ಲವೂ ಯುದ್ಧದ ಹಡಗಗಳೇ ಆಗಿವೆ. ಹಿಂತೋಪುಗಳುಳ್ಳ ಹಿಂದು ಬಹು ದೊಡ್ಡ ಹಡಗವು ಅವೆಲ್ಲವುಗಳ ನಡುವೆ ಗಂಗೆಯ ಮಧ್ಯ ಪ್ರವಾಹದಲ್ಲಿ ಲಂಗರು ಬಿಟ್ಟು ನಿಂತಿದೆ. ಅವುಗಳೊಳಗಿಂದ ನಮ್ಮ ಡೋಣಿಯನ್ನು ಬಿಡುವ ಬಗೆ ಹೇಗೆ?

ಕೇನಾರಾಮನ ನುಡಿಯನ್ನು ಕೇಳಿ ಗೋಕುಲ, ಗೋಷ್ಠ ಮತ್ತು ಮಯೂಖರು ಕೋಣೆಯಿಂದ ಹೊರಗೆ ಬಂದು ನೋಡುತ್ತಾರೆ, ಆ ಎದುರಿಗಿನ ಹಡಗುಗಳ ಮೇಲಿನ ದೀಪಗಳ ಜ್ಯೋತಿಯಿಂದ ಅಂಧಕಾರಮಯವಾದ ಗಂಗಾಪ್ರವಾಹವು ಉಜ್ವಲಿತವಾಗಿದೆ. ಆಗ ಗೋಕುಲವಿಹಾರಿಯು: ಕೇನಾರಾಮ, ಇದು ಬಾದಶಹರ ಹಡಗುಪಡೆಯಾಗಿರುವಂತೆ ತೋರುತ್ತಿದೆ. ಆದುದರಿಂದ ನಮ್ಮ ಡೋಣಿಯನ್ನು ಸಾವಕಾಶವಾಗಿ ನಡಿಸುತ್ತ ಆ ಹಡಗುಗಳ ಬಳಿಗೆ ಸಾಗಿಸು, ಎಂದನು. ಕೂಡಲೆ ಡೋಣಿಯು ಮಂದಗತಿಯಿಂದ ಸಾಗಿತು. ಆ ಹಡಗವು ಇನ್ನೂ ನೂರು-ನೂರೈವತ್ತು ಮೊಳ ದೂರವಿರಬಹುದು. ಅಷ್ಟರಲ್ಲಿ ಆ ಹಡಗಿನಿಂದ:—"ಡೋಣಿಯನ್ನು ಅಲ್ಲಿಯೇ ನಿಲ್ಲಿಸು. ಈ ಡೋಣಿಯು ಯಾರದು? ಎಲ್ಲಿಗೆ ಸಾಗಿದೆ? ಎಲ್ಲಿಂದ ಬಂದಿದೆ?" ಎಂದು ಕೂಗಿದ ಧ್ವನಿಯಾಯಿತು ಡೋಣಿಯೊಳಗಿಂದಲೇ ಗೋಕುಲವಿಹಾರಿಯು ಅಷ್ಟೇ ಗಟ್ಟಿಯಾಗಿ:—"ಸಪ್ತಗ್ರಾಮದ ವಣಿಕನಾದ ಗೋಕುಲವಿಹಾರಿಸೇನನ ಡೋಣಿಯಿದು ಸಪ್ತಗ್ರಾಮಕ್ಕೆ ನಡೆದಿದೆ ಜಹಂಗೀರ ನಗರದಿಂದ ಬಂದಿದೆ" ಎಂದು ಹೇಳಿದನು. ಕೂಡಲೆ: "ಪ್ಯಾಸಪೋರ್ಟ ಇದೆಯೋ?" "ಇದೆ." "ತಡೆ, ನೋಡುವೆವು" ಎಂದಂದ ಕೂಡಲೆ ಆ ದೊಡ್ಡ ಹಡಗಿನಿಂದ ಹೊರಟ ಒಂದು ಸಣ್ಣ ನಾವು ಬಂದು ಈ ಡೋಣಿಗೆ ತಲುಪಿತು. ಅದರೊಳಗಿನ ಒಬ್ಬ ಹಡಗಿನ ಅಧಿಕಾರಿಯು (ಕ್ಯಾಪ್ಟನ್ನನು) ಬಂದು ಜಹಾಂಗೀರ ನಗರದ ಪ್ಯಾಸಪೋರ್ಟನ್ನು ನೋಡಿ ಅದಕ್ಕೆ ರುಜುಮಾಡಿ ಹೊರಟು ಹೋದನು.

ಕ್ಷಣ ಕಾಲದ ನಂತರ ಆ ದೊಡ್ಡ ಹಡಗದಿಂದ ಗಟ್ಟಿಯಾಗಿ:— "ಡೋಣಿಯನ್ನು ಸಾಗಿಸು; ಆದರೆ ಹುಷಾರ್! ಇದೇ ಮಾರ್ಗದಿಂದ ಫಿರಂಗಿಗಳ ಒಂದು ಹಡಗ ಹೋಗಿದೆ" ಎಂದು ಧ್ವನಿಯಾಯಿತು. "ಅದಕ್ಕಾಗಿ ಅಂಜುವದಿಲ್ಲ" ಎಂದು ಅಷ್ಟೇ ಗಟ್ಟಿಯಾಗಿ ಕೂಗಿ ಹೇಳಿ, ಗೋಕುಲವಿಹಾರಿಯು ತನ್ನ ಡೋಣಿಯನ್ನು ಬಿಡಹೇಳಿದನು.



## ೫ನೇ ತರಂಗ.

-[-o-]-

# ಆಷಕ-ಮಾಷುಕ.

ಗಂಗಾ-ಸರಸ್ವತಿಗಳ ಸಂಗಮ ಸ್ಥಳದಲ್ಲಿಯ ಹಳೇಹುಣಸೀಮರದ ಕೆಳಗೆ ಬೊಕ್ಕನೆತ್ತಿಯಿಂದ ಕುಳಿತಿದ್ದ ಒಬ್ಬ ಯುವಕನು ಗಂಗಾ ಪ್ರವಾಹದೊಳಗಿನ ಅಗಣಿತ ನೌಕೆಗಳ ಸಮ್ಮಿಲನವನ್ನು ನೋಡುತಲಿದ್ದನು. ಸರಸ್ವತೀ ನದಿಯು ಆಗಲೆ ತನ್ನ ಪ್ರಾಯವನ್ನು ಕಳಕೊಂಡಿದ್ದಳು; ಆದರೆ ಈಗಿನಷ್ಟು ಸೊರಗಿ-ಸೊರಗಿ ಸಾಯಲಾಗಿದ್ದಿಲ್ಲ. ಅದರಿಂದ ನಾಲ್ಕೈದು ಸಾವಿರ ಬಂಗಾಲೀ ಮಣಗಳ ತೂಕದ ಹಡಗಗಳು ಹಿಜಲಿಯಿಂದ ಸಪ್ತ-ಗ್ರಾಮದ ವರೆಗೆ ಹನ್ನೆರಡೂ ತಿಂಗಳುಗಳಲ್ಲಿ ಸಹಜವಾಗಿ ಓಡಾಡುತ್ತಿದ್ದವು. ಸರಸ್ವತಿಯ ಮುಖದಲ್ಲಿ ಸಣ್ಣ-ದೊಡ್ಡ ಅನೇಕ ಡೋಣಿಗಳು ಬಾಡಿಗೆಯ ಮಾಲಿನ ನಿರೀಕ್ಷಣಮಾಡುತಲಿದ್ದವು. ಅವುಗಳಲ್ಲಿ ಮನುಷ್ಯರು ಕೂಡ್ರತಕ್ಕ ನಾಲ್ಕೆಂಟು ನಾವೆಗಳೂ ಇದ್ದವು. ಅವುಗಳಲ್ಲಿಯ ಹಿಂದು ನಾವೆಯ ದೃಶ್ಯಭಾಗದಲ್ಲಿ ಇಬ್ಬರು ಮುಸಲ್ಮಾನ ಜಾತಿಯ ಹೆಂಗಸರು ಕುಳಿತುಕೊಂಡಿದ್ದರು ಅವರಲ್ಲಿಯ ಒಬ್ಬಳು ಯುವತಿಯಾಗಿದ್ದು, ರೂಪಸಂಪನ್ನಳಾಗಿದ್ದಳು. ಇನ್ನೊಬ್ಬಳು ಪ್ರೌಢಳಿದ್ದಂತೆ ಕುರೂಪಿಯೂ ಆಗಿದ್ದಳು. ಅವರುಗಳ ಉಡುಪು-ತೊಡಪುಗಳ ಮೇಲಿಂದ ಅವರೊಳ್ಳೇ ಮಾನವಂತ ಮನೆತನದವರಂತೆ ತೋರುತ್ತಿತ್ತಲ್ಲದೆ, ಅವರು ನರ್ತಕಿಯರಂಬಂತೆಯೂ ಗೋಚರವಾಗುತ್ತಿತ್ತು. ಯಾಕಂದರೆ ಮನೆತನಸ್ಥರಾದ ಯಾವ ಮುಸಲ್ಮಾನ ಹೆಣ್ಣುಮಕ್ಕಳೂ ನಡುಹಗಲಲ್ಲಿ ಜನಸಮೂಹದಲ್ಲಿ ಹೊರಗೆ ಬರುತ್ತಿರುವದಿಲ್ಲ.

ರೂಪಸಂಪನ್ನಳಾದ ಸುಂದರಿಯು ಕುರೂಪಿಗೆ ಅನ್ನುತ್ತಾಳೆ:— ಫತೇಮಾ, ಆ ಹುಣಸೀಗಿಡದ ಕೆಳಗೆ ಕುಳಿತಿರುವಂಥ ತರುಣ ಕಾಫರನು ಲಭಿಸಿದ್ದಾದರೆ ನಾನು ಅವನೊಡನೆ ಲಗ್ನವಾಗುವೆನು. ಈ ನುಡಿಯನ್ನು ಕೇಳಿ, ಪ್ರೌಢೆಯು ಪರಕ್ತಳಾಗಿ "ನಿನಗೆ ತಾರುಣ್ಯವೇನೋ ಪ್ರಾಪ್ತವಾಗಿದೆ; ಆದರೆ ವಯಸ್ಸಿಗೆ ತಕ್ಕದ್ದಾದ ಗಾಂಭೀರ್ಯವು ನಿನ್ನಲ್ಲಿ

ಳ್ಳಷ್ಟು ಪ್ರಾಪ್ತವಾಗಿಲ್ಲ. ಆ ಕಾಫರನನ್ನು ಲಗ್ನವಾಗಿ ನೀನು ಸಾಯ ಬೇಕೆಂದಿರುವೆಯಾ? ಮುಸಲ್ಮಾನ ಜಾತಿಯಲ್ಲಿ ನಿನಗೆ ತಕ್ಕ ವರನೇ ಇಲ್ಲವೆ?" "ಇದ್ದರೆ ಇರಬಹುದು; ಆದರೆ ನನ್ನ ಮನಸ್ಸಿಗೆ ತಕ್ಕವನು ಸಿಗುವ ನುಂಟೆ?" "ಎಷ್ಟೋ ದೇಶ ತಿರುಗಾಡಿದೆ; ಎಷ್ಟೋ ಜನರನ್ನು ನೋಡಿದೆ; ಅವರಲ್ಲಾರೂ ನಿನಗೆ ತಕ್ಕವರಿಲ್ಲವೆ?" "ನನ್ನ ಮನಸ್ಸಿಗೆ ತಕ್ಕವನು ಒಬ್ಬನೇ ಇರುವನು." "ಅವನಾರು?" "ಇಗೋ ಈ ಹುಣಸೀಮರದ ಕೆಳಗೆ ಕುಳಿತ ಕಾಫರನು," ಎಂದು ಆ ಸುಂದರಿಯು ಸರಸ್ವತೀ-ಭಾಗೀ ರಥಿಗಳ ಸಂಗಮ ಸ್ಥಳದಲ್ಲಿ ಬೊಕ್ಕತಲೆಯಿಂದ ಕುಳಿತಿದ್ದ ಆ ತರುಣನ ಕಡೆಗೆ ಬೊಟ್ಟುಮಾಡಿ ಫತೀಮೆಗೆ ತೋರಿಸಿದಳು." "ಅವನ ವಿಷಯವಾಗಿ ನಾನು ಕೇಳುವದಿಲ್ಲ; ಆದರೆ ಈ ಇಡೀ ಬಂಗಾಲ ದೇಶದಲ್ಲಿ ಅದೇಕೆ ಮೊಗಲ ಸಾಮ್ರಾಜ್ಯದಲ್ಲಿ ನಿನಗೆ ತಕ್ಕ ಮುಸಲ್ಮಾನ ವರನೊಬ್ಬನೂ ಇಲ್ಲವೆ?" "ಇಲ್ಲ." "ಹಾಗಾದರೆ ನಿನ್ನ ಮನಸ್ಸು ಹಳ್ಳೀ ವಿಚಿತ್ರವಿದೆಯೆಂದಂತಾ ಯಿತು!" "ಮನಸ್ಸಿನ ಮಾನಸವನ್ನು ಅದಾರು, ಅದೆಂತು ವ್ಯಕ್ತಗೊಳಿಸ ಬಲ್ಲರು? ಫತೇಮಾ, ಆ ನನ್ನ ಸತಾರನ್ನು ತಂದು ಕೊಡು." "ಈ ನಾವಿನ ಮೇಲೆ ಕುಳಿತು ಇಷ್ಟು ಜನರೆದುರಿಗೆ ಸತಾರನ್ನು ಬಾರಿಸುವೆಯಾ? ನಿನಗೆ ಸ್ವಲ್ಪಾದರೂ ನಾಚಿಕೆಯಿಲ್ಲವೆ? ನಿನ್ನ ಈ ಕೃತಿಗೆ ಜನರಾದರೂ ಏನೆಂದಾರು?" "ಇಡಿ ಹಿಂದುಸ್ತಾನದ ಜನರು ದೂಷಿಸುವದಕ್ಕೆ ನಾನೇನು ಸುಲ್ತಾನಾ ಆರಜಮಂದ ಬಾಣೂ ಬೇಗಮಳೇ? ನಾನು ಹೇಳಿಕೇಳಿ ನರ್ತ ಕಿಯ ಮಗಳು ನನ್ನ ತಾಯಿಯು ಜಹಾಂಗೀರ ನಗರದಿಂದ ಲಾಹೋ ರದ ವರೆಗೆ ಎಲ್ಲ ಹಿಂದುಸ್ತಾನದಲ್ಲಿ ಕುಣಿಕುಣಿದು ಹಾಡಿರುವಳು."

"ಥೂ ಹುಚ್ಚೀ, ಹಾಗೆನ್ನಬಾರದು. ನಿನ್ನ ತಾಯಿಯು ಕೀರ್ತಿ ಶೇಷಳಾಗಿ ಸ್ವರ್ಗವನ್ನೈದಿರುವಳು. ಆಕೆಯು ನರ್ತಕಿಯಾಗಿದ್ದರೂ, ಕಸಬಿ-ವೇಶ್ಯೆಯಾಗಿರಲಿಲ್ಲ."

"ನಾನಾದರೂ ಆಕೆಗೆ ದೋಷ ಕೊಟ್ಟದ್ದೇನು? ನನ್ನ ತಾಯಿಯು ಕಾಲಿಗೆ ಗೆಜ್ಜೆ ಕಟ್ಟಿಕೊಂಡು ದೊಡ್ಡ ದೊಡ್ಡ ದರ್ಬಾರುಗಳಲ್ಲಿ ಕುಣಿ ಕುಣಿದು ಹಾಡಿರುವಳೆಂದೇ ಹೇಳಿದೆನಲ್ಲವೇ? ಇಂಥ ಪ್ರಸಿದ್ಧ ನರ್ತಕಿಯ ಮಗಳಾದ ನಾನು ಈ ಸಾಮಾನ್ಯವಾದ ನಾವಿನ ಮೇಲೆ ಈ ಸಾಮಾನ್ಯ ವಾದ ಜನಸಮೂಹದೆದುರಿಗೆ ಸತಾರನ್ನು ಬಾರಿಸಲಿಕ್ಕೆ ನಾಚಬೇಕೇ?"

"ತಂಗೀ, ನಿಮ್ಮಂಥ ಆಧುನಿಕ ವಿದುಷಿಯರೆದುರಿಗೆ ನನ್ನಂತಹ ಹಳೇ-ಕಗ್ಗ ಜನರು ಮಾತಾಡಿ ಗೆದೆಯುವ ಬಗೆಯುಂಟೇ? ಬಾರಿಸು, ನಿನ್ನ ಮನಸ್ಸಿಗೆ ಬಂದಂತೆ ಮಾಡು" ಎಂದಂದು ಫಾತಮೆಯು ಸತಾರ ನ್ನು ತರಲಿಕ್ಕಾಗಿ ನಾವಿನೊಳಗಿನ ಕೋಣೆಗೆ ಹೋದಳು.

ನಾವಿನ ಮುಂಭಾಗದಲ್ಲಿ ಒಬ್ಬ ಮುದುಕ ಯುವನನು ಕುಳಿತಿದ್ದನು. ತರುಣಿಯು ಅವನಿಗೆ ಸಂಜ್ಞೆ ಮಾಡಿ ಕರೆದಳು. ಅವನು ಧಾವಿಸುತ್ತ ಆ ತರುಣಿಯ ಹತ್ತಿರಕ್ಕೆ ಬಂದು, ಅಪ್ಪಣೆಯೇನೆಂದು ಕೇಳಿದನು. "ಹಬೀಬ, ಅಗೋ, ಆ ಎದುರಿಗಿನ ಹುಣಸೇ ಮರದ ಕೆಳಗೆ ಬೊಕ್ಕ ತಲೆಯಿಂದ ಕುಳಿ ತಿರುವ ಆ ತರುಣ ಕಾಫರನ ಪರಿಚಯವನ್ನು ಗೌಪ್ಯದಿಂದ ತಿಳಿದುಕೊಂಡು ಬಾ. ಅವನಿಗೆ ನಮ್ಮ ಸಂಬಂಧದ ಕೊಂಚವೂ ಸಂಶಯ ಬಾರದ ಹಾಗೆ ವಿಚಾರಿಸಿಕೊಂಡು ಬರಬೇಕು-ತಿಳಿಯಿತೇ?" ಎಂದು ಆ ಸುಂದರ ತರು ಣಿಯು ಹೇಳಲು, ಆ ಮುದುಕನು ಬೊಗ್ಗಿ ಸಲಾಮು ಮಾಡಿ ಹೊರಟು ಹೋದನು. ಇಷ್ಟರಲ್ಲಿ ಫಾತಮೆಯೂ ಸತಾರನ್ನು ತಂದು ಅವಳ ಕೈಗಿತ್ತಳು.

ತರುಣಿಯು ಸತಾರನ್ನು ತಕ್ಕೊಂಡು ಧನಿ ಕೂಡಿಸಹತ್ತಿದಳು. ಸತಾರು ಸಜ್ಜಾದ ನಂತರ ಅವಳು ಆ ಎದುರಿಗಿನ ಹುಣಸೇ ಗಿಡದ ಕಡೆಗೆ ಒಮ್ಮೆ ಓರೆ ನೋಟದಿಂದ ನೋಡಿದಳು; ಅಷ್ಟರಲ್ಲಿ ಆ ಮುದುಕ ಹಬೀ ಬನು ಆ ಅಪರಿಚಿತನ ಹತ್ತಿರ ಹೋಗಿ ಕುಳಿತಿದ್ದನು. ಅದನ್ನು ನೋಡಿ ಆ ಯುವತಿಯ ತಾಂಬೂಲರಂಜಿತಗಳಾದ ತೊಂಡೇ ಹಣ್ಣಿನಂತಹ ಅಧರಗಳಲ್ಲಿ ಕಿರಿನಗೆಯು ಕಾಣಿಸಿಕೊಂಡು, ಕೂಡಲೆ ಮಾಯವಾಯಿತು. ಬಳಿಕ ಅವಳು ಸತಾರನ್ನು ಹಿಡಿದು ಬಾರಿಸಲಾರಂಭಿಸಿದಳು. ಆಗ ದ್ವಿತೀಯ ಪ್ರಹರವಿನ್ನೂ ಸಂದಿರಲಿಲ್ಲ. ಆ ಯುವತಿಯು ತನ್ನ ಮನೋ ಚಾಂಚ ಲ್ಯದ ಮೂಲಕ ಆ ಸಮಯದಲ್ಲಿ ನುಡಿಸಬಾರದಂತಹ ರಾಗವನ್ನು ಆ ಸತಾರಿನಿಂದ ನುಡಿಸಹತ್ತಿದಳು; ಆದರೆ ಕೆಲ ಕ್ಷಣಗಳಲ್ಲಿಯೇ ತನ್ನ ತಪ್ಪು ತನಗೆ ತಿಳಿಯಲು, ಅದನ್ನು ಬಿಟ್ಟುಗೊಟ್ಟು ಅವಳೊಂದು ಕರ್ಣ ಮಧುರ ವಾದ ಇಂಪಾದ ಗತ್ತನ್ನು ಬಾರಿಸಹತ್ತಿದಳು. ಆ ಪೂರ್ವ ಕಾಲದಲ್ಲಿ ನಮ್ಮ ಹಿಂದು ದೇಶದಲ್ಲಿ ಗಾಯನ-ವಾದನ ಕಲೆಯು ಎಲ್ಲ ಕಡೆಗೂ ಒಳ್ಳೇ ಊರ್ಜಿತಾವಸ್ಥೆಯಲ್ಲಿದ್ದಿತು. ಅದರಲ್ಲೂ ಸಪ್ತಗ್ರಾಮು ಗೌಡ

ಗಳಲ್ಲಿ ಆ ಕಲೆಯು ಒಳ್ಳೇ ಪ್ರೌಢಾವಸ್ಥೆಯಲ್ಲಿದ್ದಿತು. ಅದರಿಂದ ಅಲ್ಲಿ ಆ ರಮಣಿಯು ಆ ಸತಾರಿನ ಗತ್ತನ್ನು ಕೇಳಲಿಕ್ಕೆ ಏನೂ ಅರಿಯದ ಬರೇ ಹುಂಬರೇ ಕಲೆತಿದ್ದರೆಂತಲ್ಲ; ಗಾಯನ-ವಾದನ ಶಾಸ್ತ್ರವನ್ನು ಕಲಿತಂಥ ನಿಷ್ಣಾತರನೇಕರು ಕೂಡಿದ್ದರು. ಆಗ ಆ ಸರಸ್ವತೀ ವಕ್ಷವು ಜನಗಳ ಸಂದಣಿಯಿಂದ ಅತ್ಯಂತ ಪ್ರಫುಲ್ಲಿತವಾಗಿ ತೋರುತ್ತಿತ್ತು. ಅಲ್ಲಿ ಸಾವಿರ ಗಟ್ಲೆ ಜನರು ಕಲೆತಿದ್ದರೂ ಒಂದಿಷ್ಟೂ ಗುಂಗಾಟವಾಗುತ್ತಿರಲಿಲ್ಲ. ಎಲ್ಲರೂ ಕೇವಲ ಸ್ತಬ್ಧತೆಯಿಂದ ಆ ರಮಣಿಯು ಬಾರಿಸುತ್ತಿದ್ದ ಸತಾರಿನ ಸುಮಿಷ್ಟ ಗತ್ತನ್ನು ಕೇಳುವ ಆನಂದದಲ್ಲಿ ಪರವಶರಾಗಿಬಿಟ್ಟಿದ್ದರು!

ರಮಣಿಯು ಒಳ್ಳೇ ಮನಃಪೂರ್ವಕವಾಗಿ ಸತಾರನ್ನು ಬಾರಿಸುತ್ತಿದ್ದಳೆಂದು ನೋಡುವವರಿಗೆ ಅನಿಸುತ್ತಿದ್ದರೂ, ಅವಳು ನಡುನಡುವೆ ಮನಶ್ಚಾಂಚಲ್ಯದಿಂದ ಆ ಹುಣಸೀಗಿಡದ ಕಡೆಗೆ ಇಣಿಕಿ ನೋಡುತ್ತಲೇ ಇದ್ದಳು. ಗಳಿಗೆರಡು ಗಳಿಗೆಗಳ ವರೆಗೆ ಆ ಗತ್ತನ್ನು ಬಾರಿಸಿ, ನಂತರ ಒಮ್ಮೆಲೆ ಬಾರಿಸುವದನ್ನು ಬಿಟ್ಟು ಅವಳು ಆ ಸತಾರಿನೊಡನೆ ಆ ನಾವಿನೊಳಗಿನ ಕೋಣೆಯನ್ನು ಪ್ರವೇಶಿಸಿದಳು. ಕೂಡಿದ ಜನರೆಲ್ಲರೂ ಆಕೆಯ ಚಲನವಲನದ ಕಡೆಗೆ ಚಿತ್ರದೊಳಗಿನ ಗೊಂಬೆಗಳಂತೆ ಮಿಕಿ ಮಿಕಿ ನೋಡುತ್ತ ನಿಂತುಕೊಂಡಿದ್ದರೇ ಹೊರತು, ಇನ್ನೊಂದು ಗತ್ತನ್ನು ಬಾರಿಸಬೇಕೆಂದು ಹೇಳುವ ಸಾವಧಾನತೆಯು ಅಲ್ಲಿ ನೆರೆದವರಾರಲ್ಲಿಯೂ ಉಳಿದಿರಲಿಲ್ಲ. ಅದರಿಂದ ಆ ತರುಣಿಯು ಹೊರಟು ಹೋದ ಎಷ್ಟೋ ಹೊತ್ತಿನ ಮೇಲೆ ಅವರು ಆ ತರುಣಿಯ ವಾದನ ಕಲೆಯ ಬಗ್ಗೆ ತಮ್ಮ ತಮ್ಮೊಳಗೆ ಪ್ರಶಂಸಾಪರ ಉದ್ಗಾರಗಳನ್ನು ತೆಗೆಯಲುಪಕ್ರಮಿಸಿದರು. "ಇವಳು ದಿಲ್ಲೀಶ್ವರನ ಮಗಳು. ಫಿರಂಗಿದಸ್ಯುಗಳು ಇವಳನ್ನು ಹಿಡಿದು ತಂದಿದ್ದರು; ಆದರೆ ತಮ್ಮ ಪ್ರಾಣಭಯದಿಂದ ಈಗ ಬಿಟ್ಟುಗೊಟ್ಟಿರುವರು" ಎಂದು ಕೆಲವರು ನುಡಿದರೆ, ಬೇರೆ ಕೆಲವರು "ಛೇ-ಛೇ ಇವಳು ಇರಾಣದೇಶದ ತಾಫೇದವಳು. ನಮ್ಮ ಸಪ್ತಗ್ರಾಮದ ಸುಭೇದಾರರ ಆಶ್ರಯುವನ್ನಪೇಕ್ಷಿಸಿ ಬಂದಿರುವಳು" ಎಂದು ನುಡಿಯುತ್ತಿದ್ದರು. ಒಬ್ಬ ವೃದ್ಧ ಮುಸಲ್ಮಾನನಂತೂ "ಇವಳು ಸ್ವರ್ಗಲೋಕದ ಅಪ್ಸರೆಯು; ಅಲ್ಲಿ ತನಗೆ ತಕ್ಕ ಜೊತೆಗಾರನು ಸಿಗದ್ದರಿಂದ ಈ ಭೂಲೋಕದಲ್ಲಿ ಅಂಥವನಾರಾದರೂ ಸಿಗುವನೇನೆಂದು ಹುಡುಕುವ ಸಲುವಾಗಿ ಬಂದಿರುವಳು" ಎಂದು ಹೇಳಿ

ಕೂಡಿದ ಜನರನ್ನೆಲ್ಲ ದಂಗುಗೊಳಿಸಿ ಬಿಟ್ಟನು! ಇರಲಿ.

ಇತ್ತ ಆ ಬೊಕ್ಕತಲೆಯ ತರುಣನ ಬಳಿಗೆ ಹೋದ ಆ ವೃದ್ಧ ಹಬೀಬನು ತರುಣನನ್ನು ಕುರಿತು:—"ಬಾಬುಗಳೇ, ತಾವು ಈ ಪಟ್ಟಣಕ್ಕೆ ಹೊಸಬರಾಗಿ ಬಂದಿರುವಂತೆ ತೋರುವದು. ಅಹುದಲ್ಲವೆ?" ಎಂದು ಪ್ರಸ್ತಾಪ ಮಾಡಿದನು. ಆ ಯುವಕನು ಹೀಗೆಂದವನ ಕಡೆಗೆ ಹೊರಳಿ ನೋಡುತ್ತಾನೆ, ಇಷ್ಟುದ್ದ ಬಿಳೀ ಗಡ್ಡ-ಮೀಸೆಗಳಿಂದ ಮುಚ್ಚಿದ್ದ ಹಾಗು ಉರುಳೀಗಡ್ಡೆಯ ದುರ್ವಾಸನೆಯಿಂದ ತುಂಬಿದ ಹಿಬ್ಬ ವೃದ್ಧ ಯವನನ ಮುಖವು ತನ್ನ ಮುಖಕ್ಕೆ ಸಮೀಪದಲ್ಲಿಯೇ ಇದೆ ಎಂಬದು ಅವನಿಗೆ ತೋರಿತು. ಅದನ್ನು ಕಂಡು ತರುಣನು ಅಸಹ್ಯಪಟ್ಟನು; ಆದರೆ ಪರಕ್ಷಣದಲ್ಲಿಯೇ ಆ ಮುದುಕನು ಹಿಳ್ಳೇ ಮೃದುಮಧುರವಾಣಿಯಿಂದ ಅವನನ್ನು ಕುರಿತು ಏನೇನೋ ನುಡಿಯಲು, ತರುಣನಲ್ಲಿಯ ಆತನ ವಿಷಯದ ತಿರಸ್ಕಾರವು ಮಾಯವಾಯಿತು. ಬಳಿಕ ಮುದುಕನು ತರುಣನಿಗೆ ಸಲಾಮುಮಾಡಿ:—"ಬಾಬುಸಾಹೇಬ, ತಾವು ಹಿಳ್ಳೇ ಪ್ರಸಿದ್ಧ ಮನೆತನಸ್ಥರೆಂಬುದು ತಮ್ಮ ಮುಖಭಾವದಿಂದಲೇ ಗೊತ್ತಾಗುತ್ತದೆ. ತಾವು ದೇಶಪರ್ಯಟನಕ್ಕಾಗಿ ಇತ್ತ ಬಂದಂತಾಗಿದೆಯಲ್ಲವೆ? ಈ ಸಪ್ತಗ್ರಾಮವು ಹಿಳ್ಳೇ ಪ್ರಸಿದ್ಧ ಪಟ್ಟಣವು. ಗೌಡನಗರವನ್ನು ಬಿಟ್ಟರೆ ಈ ಬಂಗಾಲದಲ್ಲಿ ಇಂಥ ಬೇರೊಂದು ಪಟ್ಟಣವಿಲ್ಲ" ಎಂದು ಮುಂತಾಗಿ ಎಷ್ಟು ಮಾತಾಡಿದರೂ ಇವನಿಗೆ ಏನು ಉತ್ತರ ಕೊಡಬೇಕೆಂಬದು ಆ ಯುವಕನಿಗೆ ತೋಚದಾಯಿತು. ಕೆಲಕ್ಷಣಗಳ ವರೆಗೆ ಅವರಿಬ್ಬರೂ ಸುಮ್ಮನೆ ಇದ್ದರು. ಬಳಿಕ ಆ ಮುದುಕನೇ ಮತ್ತೆ:—"ಬಾಬುಸಾಹೇಬ, ತಾವು ಇಲ್ಲಿಯ ಜಾಫರಖಾನ ಗಾಜಿಯ ದರ್ಗೆಯನ್ನು ನೋಡಿರುವಿರೇನು? ಇಂಥ ಸುಂದರ ಇಮಾರತಿಯು ಈ ಹಿಂದುಸ್ತಾನದಲ್ಲಿ ವಿರಳವೆಂದೇ ಹೇಳಬಹುದು" ಎನ್ನಲು, "ನೋಡಿಲ್ಲ" ಎಂದು ಯುವಕನು ಉತ್ತರ ಕೊಟ್ಟನು.

ಕೂಡಲೆ ಹಬೀಬನು ಇತ್ತ ಬನ್ನಿರೆಂದು ಮುಂದಾದನು. ಯುವಕನು ಅವನನ್ನು ಅನುಸರಿಸಿದನು. ಆ ಯುವಕನು ಈ ವರೆಗೆ ಕುಳಿತುಕೊಂಡಿದ್ದ ಆ ನದೀ ತೀರದ ಹುಣಸೇ ಗಿಡದ ಹಿಮ್ಮಗ್ಗಲೇ ಆ ಪ್ರಸಿದ್ಧವಾದ ದರ್ಗೆಯಿದ್ದಿತು. ಯುವಕನು ಹಬೀಬನೊಡನೆ ಆ ಸಮಾಧಿಮಂದಿರವನ್ನು ಪ್ರವೇಶಿಸಿದನು. ನಾವೆಯೊಳಗಿನ ಕೋಣೆಯಲ್ಲಿ ಕುಳಿತ

ಆ ತರುಣಿಯು ಕಿಟಕಿಯೊಳಗಿಂದ ಆ ತರುಣನ ಚಲನವಲನವನ್ನೇ ನಿರೀಕ್ಷಿಸುತ್ತಿದ್ದಳು. ಕೂಡಲೆ ಅವಳು ಫಾತಮೆಯನ್ನು ಕುರಿತು:—“ಫತೇಮಾ, ನಾಜೀರ ಅಹಮ್ಮದನೆಲ್ಲಿರುವನು?” “ಖಾನಸಾಹೇಬರು ಪೇಟೆಗೆ ಹೋಗಿರುವರೋ ಏನೋ ಗೊತ್ತಿಲ್ಲ. ನೋಡಿ ಬರುವೆನು” ಎಂದೆಂದು ಫಾತಮೆಯು ಅಲ್ಲಿಂದ ಹೊರಗೆ ಬಂದಳು. ನಾವೆಯ ಪಶ್ಚಿಮ ದಿಕ್ಕಿನ ಸಂದು ಪ್ರದೇಶದಲ್ಲಿ ಕುಳಿತಂಥ ಒಬ್ಬ ಪ್ರೌಢ ಯವನನು ಹುಕ್ಕಾ ಸೇದುವದರಲ್ಲಿ ತಲ್ಲೀನನಾಗಿದ್ದನು. ಫಾತಮೆಯು ಲಗುಬಗೆಯಿಂದ ಅವನ ಬಳಿಗೆ ಬಂದು:—“ಖಾನಸಾಹೇಬ, ಬೀಬಿಯವರು ನಿಮ್ಮನ್ನು ಕರೆಯುತ್ತಿದ್ದಾರೆ” ಎಂದು ತಿಳಿಸಿದಳು.

ಕೂಡಲೆ ಆ ಪ್ರೌಢನು ಕುಳಿತಲ್ಲಿಂದ ಚಟಕ್ಕನೆ ಎದ್ದು, ಫಾತಮೆಯನ್ನು ಕುರಿತು:—“ಫತೇಮಾ, ಬೀಬಿಯವರು ಸಿಟ್ಟಿಗೆದ್ದಿರುವರಲ್ಲವೇ? ನಿನ್ನೆ ಸಂಜೆಯ ಮುಂದೆ ಸತಾರಿನ ತಂತಿಗಳನ್ನು ಕೊಂಡುಕೊಂಡು ಬಾರೆಂದು ನನಗೆ ಆಜ್ಞೆಮಾಡಿದ್ದರು; ಆದರೆ ಸಾಯಂಕಾಲದ ಆ ಅಫೀಮಿನ ಗುಂಗಿನಲ್ಲಿ ನನಗದು ಸಂಪೂರ್ಣವಾಗಿ ಮರೆತು ಹೋಯಿತು. ಆಗಲೆ ಅವರು ಸತಾರನ್ನು ಬಾರಿಸಹತ್ತಿದಾಗ ನನಗಾಸಂಗತಿಯು ನೆನಪಾಗಲು, ನಾನು ಇಲ್ಲಿಗೆ ಮರೆಗೆ ಬಂದು ಅಡಗಿಕೊಂಡಿದ್ದೆನು. ನಾನು ಇಷ್ಟರಲ್ಲಿಯೇ ಪೇಟೆಗೆ ಹೋಗಿ ತಂತಿಗಳನ್ನು ಕೊಳ್ಳತಕ್ಕವನೇ; ಆದರೆ ಸಮೀಪದಲ್ಲಿಯ ಈ ಹುಕ್ಕಾ ನೋಡಿ, ನನಗೆ ಮತ್ತೆ ಆ ಆಜ್ಞೆಯು ವಿಸ್ಮರಣವಾಯಿತು. ನನ್ನ ಈ ವ್ಯಸನಾಧೀನತೆಯ ಮೂಲಕ ಒಂದಿಲ್ಲೊಂದು ದಿನ ನಾನು ಕೂಳು-ಕೂಳು ನೀರು-ನೀರೆಂದು ಹೋಗತಕ್ಕವನೇ. ಆದಿರಲಿ. ಫತೇಮಾ, ಇಂದು ಬೆಳಗಿನಿಂದ ಬೀಬಿಯವರು ಇಷ್ಟೇಕೆ ಅಸ್ವಸ್ಥರಾಗಿರುತ್ತಾರೆ? ಅವರ ಈ ಅಸ್ವಸ್ಥತೆಯು ಸಿಟ್ಟು ನನ್ನ ಮೇಲೆ ಬೀಳಲಿಕ್ಕಿಲ್ಲವಷ್ಟೇ?” ಎಂದು ಪ್ರಶ್ನೆ ಮಾಡಲು,

ಫಾತಮೆಯು ಮುಗುಳುನಗೆಯಿಂದ:—“ಖಾನಸಾಹೇಬ, ನೀನು ಅಂಜುವ ಕಾರಣವಿಲ್ಲ. ಇಂದು ಬೀಬಿಯವರು ಅಸ್ವಸ್ಥರಾಗಿಲ್ಲ; ಹರ್ಷಚಿತ್ತರಾಗಿರುತ್ತಾರೆ. ಅವರು ಇಂದು ತಮ್ಮ ಅಷಕನನ್ನು ಆರಿಸಿಕೊಂಡಿರುತ್ತಾರೆ. ಆದುದರಿಂದ ನೀನು ಅವರ ಸಿಟ್ಟಿಗೆ ಅಂಜದೆ ಬೇಗನೆ ಬಾ” ಎಂದು ನುಡಿದು, ಅವನನ್ನು ಮುಂದು ಮಾಡಿಕೊಂಡು ಫಾತಮೆಯು

ಆ ಕೋಣೆಯನ್ನು ಪ್ರವೇಶಿಸಿದಳು. ಆಗ ಆ ತರುಣಿಯು ಒಳಗೆ ಕುಳಿತು ಕೊಂಡು ಪತ್ರವನ್ನು ಬರೆಯುತ್ತಿದ್ದಳು. ಅದನ್ನು ನೋಡಿ, ನಾಜೀರಅಹಮ್ಮದನು ಅವಳಿಗೆ ಸಲಾಮು ಮಾಡಿ, ಬಾಗಿಲಲ್ಲಿಯೇ ನಿಂತುಕೊಂಡನು. ಅಷ್ಟರಲ್ಲಿ ಯುವತಿಯ ಪತ್ರಲೇಖನವು ಮುಗಿಯಲು, ಅವಳು ಅದನ್ನು ಒಂದು ಲಕ್ಕೋಟೆಯಲ್ಲಿ ಹಾಕಿ, ಮೋಹರಬಂದ ಮಾಡಿದಳು. ಬಳಿಕ ಅವಳು ಅದನ್ನು ನಾಜೀರಅಹಮ್ಮದನ ಕೈಗೆ ಕೊಟ್ಟು:—"ಈ ಪತ್ರವನ್ನು ಗೋಕುಲಬಿಹಾರಿಸೇನನ ವಖಾರಿಗೆ ಮುಟ್ಟಿಸಿ ಅಲ್ಲಿಂದ ಒಂದು ಸಾವಿರ ಆಸರಫಿ (ಆ ಕಾಲದ ಬಂಗಾರದ ನಾಣ್ಯ) ಗಳನ್ನು ತಕ್ಕೊಂಡು ಬಾ; ಹಾಗು ಪಟ್ಟಣದಲ್ಲಿ ಒಂದು ಉತ್ತಮವಾದ ಮನೆಯನ್ನು ಬಾಡಿಗೆಗೆ ಗೊತ್ತುಮಾಡಿ ಬಾ. ನಾನು ಇನ್ನು ಅಕಬರನಗರಕ್ಕೆ ಹೊರಡುವದಿಲ್ಲ. ಈ ಸಪ್ತಗ್ರಾಮದಲ್ಲಿಯೇ ವಾಸವಾಗಿರುತ್ತೇನೆ" ಎಂದು ಆಜ್ಞೆ ಮಾಡಲು, ಆ ಪ್ರೌಢ ಮುಸಲ್ಮಾನನು ಅವಳಿಗೆ ಮೂರು ಮೂರು ಸಾರೆ ಸಲಾಮು ಮಾಡಿ ಹೊರಟು ಹೋದನು.

ವೃದ್ಧ ಹಬೀಬನು ಆ ತರುಣನಿಗೆ ಜಾಫರಖಾನರ ಗೋರಿ, ಮಸೀದೆ ಅದರ ಸುತ್ತಮುತ್ತಲಿನ ಸುಂದರ ಕಟ್ಟಡಗಳನ್ನು ತೋರಿಸಿದ ನಂತರ ಅವನನ್ನು ಪುನಃ ಆ ಹುಣಸೀಗಿಡಕ್ಕೆ ಒಯ್ದು ಮುಟ್ಟಿಸಿದನು. ಯುವಕನು ಅವನ ವಿಷಯವಾಗಿ ಹೆಚ್ಚಾಗಿ ಕೃತಜ್ಞನಾದುದರಿಂದ ಅವನು ತನ್ನ ಬಕ್ಕಣದೊಳಗಿನ ಒಂದು ಆಸರಫಿಯನ್ನು ತೆಗೆದು ಆ ಮುದುಕನ ಕೈಗೆ ಕೊಡಹೋದನು; ಆದರೆ ಮುದುಕನು ಅದನ್ನು ಕಣ್ಣೆತ್ತಿ ಕೂಡ ನೋಡದೆ:—"ಧಣಿಯರೇ, ನನಗದು ಬೇಡ. ತಮ್ಮ ಹೆಸರು ಬಿಡಾರಗಳನ್ನಷ್ಟು ತಿಳಿಸಿದರೆ ನಾನು ನಾಳೆ ಬೆಳಿಗ್ಗೆ ತಮ್ಮಲ್ಲಿಗೆ ಬಂದು, ತಮಗೆ ಈ ಇಡಿ ಪಟ್ಟಣದಲ್ಲಿಯ ನೋಡತಕ್ಕ ಸ್ಥಳಗಳನ್ನೆಲ್ಲ ತೋರಿಸಿಕೊಂಡು ಬರುವೆನು" ಎಂದನು. ಯುವಕನು ಬೇಡಬೇಡೆಂದು ಅವನಿಗೆ ಬಹು ಪ್ರಕಾರವಾಗಿ ಹೇಳಿದನು. ಆದರೂ ಮುದುಕನು ಕೇಳದಾಗಲು, "ನಾನು ಮೀನಾಭಝಾರದೊಳಗಿನ ಗೋಕುಲಬಿಹಾರಿಸೇನನ ವಖಾರಿನಲ್ಲಿರುತ್ತೇನೆ. ನನ್ನ ಹೆಸರು ಮಯೂಖ" ಎಂದು ಹೇಳಿದನು.

ಆ ಯುವಕನ ಹೆಸರನ್ನು ಕೇಳಿ ಹಬೀಬನು ಒಳ್ಳೇ ವಿಸ್ಮಯಗೊಂಡು:—"ಧಣಿಯರೇ, ಕ್ಷಮಿಸಿರಿ. ತಾವು ನೋಡಲಿಕ್ಕೆ ಎಷ್ಟು

ಸುಂದರರಾಗಿರುವಿರೋ, ತಮ್ಮ ನಾಮಧೇಯವಾದರೂ ಅಷ್ಟೇ ಸುಂದರ ವಾಗಿರುತ್ತದೆ. ನಾನು ನಾಳೆ ಬೆಳಿಗ್ಗೆ ತಮ್ಮ ಬಿಡಾರಕ್ಕೆ ಬಂದು ಭೆಟ್ಟಿ ಯಾಗುವೆನು" ಎಂದು ಅಂದು, ಆ ನದೀ ತೀರದ ಆ ಜನಸಮ್ಮರ್ದ ದಲ್ಲಿ ಮಾಯವಾದನು.

ಮಯೂಖನು ಹಬೀಬನೊಡನೆ ಮಾತನಾಡುತ್ತಿರುವಾಗ ಆಗ ತಾನೆ ಅಲ್ಲಿಗೆ ಬರುತ್ತಿರುವ ನೌಕೆಯೊಳಗಿನ ಕೆಲ ಜನ ದೀರ್ಘ ಕಾಯದ ಬ್ರಾಹ್ಮಣರು ಅವನನ್ನೇ ದಿಟ್ಟಿಸಿ ನೋಡುತ್ತಿದ್ದರು. ಹಬೀಬನು ಹೊರಟು ಹೋಗುತ್ತಲೆ ಆ ಬ್ರಾಹ್ಮಣರಿಗೆ ಮಯೂಖನ ಮುಖವು ಸ್ಪಷ್ಟವಾಗಿ ಕಾಣಿಸಿಕೊಳ್ಳಲು, ಅವರು ಇವನನ್ನು 2-3 ಸಾರೆ ಹೆಸರುಗೊಂಡು ಕರೆ ದರು. ಆ ಜನಸಂದಣಿಯಲ್ಲಿ ಆ ಶಬ್ದವು ಮಯೂಖನಿಗೆ ಕೇಳಿಸಲಿಲ್ಲ. ಆ ಬ್ರಾಹ್ಮಣರ ನೌಕೆಯು ಧಡದಿಂದ ಇನ್ನೂ ತುಸ ದೂರದಲ್ಲಿತ್ತು. ಅವರು ದಂಡೆಗೆ ಬರುವಷ್ಟರಲ್ಲಿ ಮಯೂಖನು ಅಲ್ಲಿಂದ ಹೊರಟುಹೋ-ದನು. ಬ್ರಾಹ್ಮಣರು ದಂಡೆಯಲ್ಲಿಳಿದು ಎಷ್ಟು ಹುಡುಕಿದರೂ ಅವರಿಗೆ ಮಯೂಖನ ಶೋಧವಾಗಲಿಲ್ಲ.

ಸಪ್ತಗ್ರಾಮಕ್ಕೆ ಹೋದಂದಿನಿಂದ ಪ್ರತಿನಿತ್ಯ ಒಮ್ಮೆಯಾದರೂ ಅವನು ಬಂದರಕ್ಕೆ ಬಂದು ಹೋಗುತ್ತಿದ್ದನು. ಭೀಮೇಶ್ವರದಿಂದ ತನ್ನನ್ನು ಹುಡುಕಲಿಕ್ಕೆ ಯಾರಾದರೂ ಬಂದೇ ಬರುವರೆಂದು ಅವನಿಗೆ ಅನಿಸುತ್ತಿತ್ತು. ಯಾಕಂದರೆ ತನ್ನ ವಿಶ್ವಾಸುಕ ಸೇವಕನಾದ ಭುವನ ನನ್ನು ಅವನು ಹಿಂದೆ ಬಿಟ್ಟು ಬಂದಿದ್ದನು. ಆದ್ದರಿಂದ ಬೇರೆ ಯಾರು ಬರಲಿ-ಬಾರದಿರಲಿ, ಭುವನನಂತೂ ಬಂದೇ ಬರುವನೆಂಬ ಭರವಸೆಯು ಅವನಲ್ಲಿ ಇದ್ದಿತು; ಮತ್ತು ಅದಕ್ಕಾಗಿಯೇ ಆತನು ಪ್ರತಿನಿತ್ಯ ಬೆಳಗಿನಲ್ಲಿ ಗಂಗಾ-ಸರಸ್ವತಿಗಳ ಸಂಗಮದ ಹತ್ತರದ ಆ ಬಂದರಕ್ಕೆ ಒಮ್ಮೆಯಾದರೂ ತಪ್ಪದೆ ಬಂದು ಹೋಗುತ್ತಿದ್ದನು. ಗೌರೀಪುರದಲ್ಲಿಯೂ, ಭೀಮೇಶ್ವರ ದಲ್ಲಿಯೂ ತನ್ನ ತಂದೆಯ ಸಭಾಪಂಡಿತನಾದ ತರ್ಕರತ್ನ ಜಗದೀಶ ಚಂದ್ರನು ತನ್ನ ಸಹಾಯಕ್ಕಾಗಿ ಮಾಡಿದ ಏರ್ಪಾಟಿನ ಸುತರಾಂ ಸುದ್ದಿ ಯೂ ಅವನಿಗೆ ತಿಳಿದಿರಲಿಲ್ಲ.

ಅಂದು ಇಳಿಹೊತ್ತಾದ ಕೂಡಲೆ ಮಯೂಖನು ಬಂದರದಿಂದ ಹೊರಟು ಪಟ್ಟಣದೊಳಗಿನ ತನ್ನ ಬಿಡಾರಕ್ಕೆ ನಡೆದನು. ಬಂದರದಿಂದ

ಅವನ ವಾಸಸ್ಥಳವು-ಗೋಕುಲ ಬಿಹಾರಿಯ ವಖಾರವು-ಸರಾಸರಿ ನಾಲ್ಕು ಮೈಲು ದೂರದಲ್ಲಿದ್ದಿತು. ದಾರಿಯಲ್ಲಿ ಜನ ಸಂದಣಿಯು ಅದರಿಂದ ಬೇಗ ಬೇಗನೆ ದಾರಿ ಕ್ರಮಿಸುವಂತಿರಲಿಲ್ಲ. ಆದರೂ ಆವನು ಶಕ್ಯವಾದಷ್ಟು ಶೀಘ್ರಗತಿಯಿಂದ ದಾರಿ ಕ್ರಮಿಸಿ ಬಂದರದ ಪೇಟೆಯನ್ನು ದಾಟಿ, ಸಪ್ತಗ್ರಾಮದ ದುರ್ಗದ ಹತ್ತಿರಕ್ಕೆ ಹೋದನು. ಇದೇ ಸಮಯಕ್ಕೆ ಒಬ್ಬ ಸನ್ಮಾನಿತ ಮುಸಲ್ಮಾನ ಗೃಹಸ್ಥನು ದುರ್ಗದಿಂದಿಳಿದು, ಮಯೂಖನು ನಡೆದ ಕಡೆಗೇ ನಡೆದನು. ತುಸ ದೂರ ಅವರೀರ್ವರೂ ಕೂಡಿ ದಾರಿ ಕ್ರಮಿಸುತ್ತಿರಲು, ಒಂದು ಮನೆಯ ಎದುರಿಗೆ ಮೂವರು ಫಿರಂಗಿಗಳು ನಿಂತುಕೊಂಡಿದ್ದರು. ಅವರಲ್ಲಿಯ ಒಬ್ಬನು ಕರೀ ಪೋಷಾಕಿನ ಪಾದ್ರಿಯಾಗಿದ್ದನು. ಉಳಿದವರಿಬ್ಬರು ಸಾಮಾನ್ಯರಾದ ಸೈನಿಕರು. ಆ ಮನೆಯೊಳಗಿನ ಕಂಬವನ್ನು ಬಿಗಿಯಾಗಿ ಹಿಡಕೊಂಡು ಕುಳಿತಂಥ ಒಬ್ಬ ತರುಣನು ಆರ್ತಧ್ವನಿಯಿಂದ:—"ನಾನು ನಿಜವಾಗಿ ಹಿಂದುವು. ಕ್ರಿಸ್ತೀ ಪಂಥವನ್ನು ನಾನೆಂದೂ ಸ್ವೀಕರಿಸಿರುವದಿಲ್ಲ; ಮತ್ತು ಸ್ವೀಕರಿಸುವ ಇಚ್ಛೆಯೂ ನನಗಿರುವದಿಲ್ಲ," ಎಂದು ನುಡಿಯುತ್ತಿದ್ದು, ಆಗಾಗ್ಗೆ ಆ ಫಿರಂಗಿ ಪಾದ್ರಿಗೆ ನಮಸ್ಕಾರ ಮಾಡುತ್ತ ತನ್ನನ್ನು ಬಿಟ್ಟುಬಿಡಬೇಕೆಂದು ಪ್ರಾರ್ಥಿಸುತ್ತಿದ್ದನು.

ಅದಕ್ಕೆ ಆ ಫಿರಂಗಿ ಪಾದ್ರಿಯು:—"ಈತನು ನಿನ್ನಿನ ದಿವಸ ನಮ್ಮಲ್ಲಿಗೆ ತಾನಾಗಿ ಬಂದು ಕ್ರೈಸ್ತ ಪಂಥವನ್ನು ಸ್ವೀಕರಿಸಿರುವನು. ಈ ದಿನ ಮನೆಯುವರ ಹುಲುಬಿನಿಂದ ಮತ್ತೆ ಬಂದು ಮನೆ ಸೇರಿರುವನು. ಈತನನ್ನು ಇಲ್ಲಿಯೇ ಇರಗೊಟ್ಟರೆ ಇವನ ಸಂಪರ್ಕದಿಂದ ಈ ಮನೆಯುವರಿಗೆ ಯಮಯಾತನೆಗಳು ಉಂಟಾಗುವವಲ್ಲದೆ, ನಮ್ಮ ಧರ್ಮಕ್ಕೂ ಹಾನಿಯುಂಟಾಗುವದು. ಆದುದರಿಂದ ಇವನನ್ನು ಈಗಲೆ ಹುಗಳಿಗೆ ಕರೆದೊಯ್ಯುವೆವು" ಎಂದೆನ್ನುತ್ತ ಅವನನ್ನು ಒಳಗಿನಿಂದ ಹೊರಗೆ ಎಳೆಯುತ್ತಿದ್ದನು. ಅಷ್ಟರಲ್ಲಿ ಮಯೂಖನೂ, ಅವನ ಸಂಗಡಿಗನಾದ ಆ ಸನ್ಮಾನಿತ ಮುಸಲ್ಮಾನ ದಾರಿಕಾರನೂ ಅಲ್ಲಿಗೆ ಬಂದರು. ಮುಸಲ್ಮಾನನು ಫಿರಂಗಿಯನ್ನುದ್ದೇಶಿಸಿ:—"ಫಿರಂಗೀ, ಈ ಗದ್ದಲವೇತರದು?" ಎಂದನು.

ಕೂಡಲೆ ಫಿರಂಗಿಪಾದ್ರಿಯು ತನ್ನ ಮಾತನ್ನು ಮತ್ತಿಷ್ಟು ಉಪ್ಪು-ಕಾರ ಹಚ್ಚಿ ಅವನಿಗೆ ತಿಳಿಸಿದನು. ಆಗ ಆ ಯುವನನು ಆ ಒಳಗೆ ಕುಳಿತಿದ್ದ ಹಿಂದು

ವನ್ನು ಕುರಿತು:—"ಎಲೋ, ಇವನು ಹೇಳುವ ಸಂಗತಿಯು ನಿಜವೇ?" ಎಂದು ಪ್ರಶ್ನೆ ಮಾಡಲು, ಆ ತರುಣನು ಗದ್ಗದಕಂಠದಿಂದ:—"ಸಾಹೇಬ, ಹಿಂದೂ ಹಾಗು ಮುಸಲ್ಮಾನರ ದೇವತೆಗಳ ಸಾಕ್ಷಿಯಾಗಿ ಹೇಳುತ್ತೇನೆ, ನಾನು ಕ್ರೈಸ್ತನಾಗಿರುವದಿಲ್ಲ. ಈ ಪಾದ್ರಿಯು ನನ್ನನ್ನು ಹಿತ್ತಾಯದಿಂದ ಕ್ರೈಸ್ತನನ್ನಾಗ ಮಾಡಲಿಕ್ಕೆ ಪ್ರಯತ್ನಿಸಲು, ನಾನು ಇವನ ಕಣ್ಣು ತಪ್ಪಿಸಿ ಹುಗಳಿಯಿಂದ ಇಲ್ಲಿಗೆ ಓಡಿ ಬಂದಿರುವೆನು" ಎಂದು ತನ್ನ ನಿಜ ಸಂಗತಿಯನ್ನು ತಿಳಿಸಿದನು.

"ಹಾಗಾದರೆ ಈ ಪಾದ್ರಿಯು ಸುಳ್ಳು ಹೇಳುವನೇನು?"

"ಹುಜೂರ, ಈತನು ತೀರ ಸುಳ್ಳುಗಾರನು"

ಆಗ ಆ ಯುವನನು ಪಾದ್ರಿಯ ಕಡೆಗೆ ಹೊರಳಿ:—"ಪಾದ್ರೀ, ಈ ಹಿಂದುವಿನ ಮಾತನ್ನು ಕೇಳಿದೆಯಾ? ನೀನು ನಿನ್ನ ಧರ್ಮಾಂತರದ ಕೆಲಸವನ್ನು ಹೀಗೆ ಹಿತ್ತಾಯಪೂರ್ವಕವಾಗಿ ಮಾಡಬೇಡ ನೀನು ಕಾಜಿಯ ಬಳಿಗೆ ಹೋಗಿ ಫಿರ್ಯಾದು ಮಾಡು. ತಪ್ಪಿತಸ್ತನಾಗಿದ್ದರೆ, ಕಾಜಿಯು ಈತನನ್ನು ನಿನ್ನ ವಶಪಡಿಸುವನು. ಆ ವರೆಗೆ ನೀನು ಈತನ ಮೈಗೆ ಕೈ ಹಚ್ಚಬೇಡ" ಎಂದು ತಿಳಿಸಲು,

ಆ ಉದ್ಧಟ ಪಾದ್ರಿಯು ಆ ಸರಲವಾದ ನುಡಿಯನ್ನು ಕೇಳದೆ:— "ನಾವು ನಿಮ್ಮ ಆ ಕಾಜಿಗಳ ಅಧೀನರಲ್ಲ. ಈ ಹಿಂದುವು ಕ್ರೈಸ್ತನಾಗಿರುತ್ತಾನಾದ್ದರಿಂದ ನಾವು ಈಗಲೆ ಇವನನ್ನು ಹುಗಳಿಗೆ ಎಳೆದುಕೊಂಡು ಹೋಗುತ್ತೇವೆ," ಎಂದಂದು ಆ ಹಿಂದುವನ್ನು ಮತ್ತೆ ಜಗ್ಗಹತ್ತಿದನು.

"ಫಿರಂಗೀ, ಇದು ಶಹಾನಶಹಾ ಶಹಾಜಿಹಾನ ಬಾದಶಹನ ರಾಜ್ಯವು. ನೀನು ಇಲ್ಲಿ ಹೀಗೆ ಉದ್ಧಟತನವನ್ನು ಮಾಡಿದೆಯೆಂದರೆ ಕಠಿಣವಾದ ಶಾಸನಕ್ಕೆ ಗುರಿಯಾಗಬೇಕಾದೀತು"

ಎಂದ ಆ ಮುಸಲ್ಮಾನನ ನುಡಿಗೆ, "ನನ್ನನ್ನು ದಂಡಿಸುವ ಅಧಿಕಾರವು ಆ ನಿಮ್ಮ ಬಾದಶಹನ ಅಜ್ಜ-ಮುತ್ತಜ್ಜಂದಿರಿಗೂ ಇರುವದಿಲ್ಲ. ನೀನು ಹೆಚ್ಚು ಮಾತಾಡಿದೆಯೆಂದರೆ, ಈ ಚಬಕದಿಂದ ಮೈಮೆತ್ತಗೆ ಮಾಡಿಸಿಕೊಂಡೀ; ಸುಮ್ಮನೆ ಬಂದದಾರಿಯಿಂದ ಹಿಂದಿರುಗಿ ನಡೆ." ಎಂದು ಆ ಕರೇ ಪೋಷಾಕಿನ ಫಿರಂಗಿಪಾದ್ರಿಯು ಉನ್ಮತ್ತತನದಿಂದ ನುಡಿದನು.

---

೬ನೇ ತರಂಗೆ.

-[-೦-]-

## ಸಪ್ತಗ್ರಾಮದ ಕಾಳಗ.

ಫಿರಂಗಿಯು ಆ ನುಡಿಯನ್ನು ಕೇಳಿ ಆ ಯವನನ ಮುಖವು ಆರಕ್ತ ವರ್ಣವನ್ನು ಧರಿಸಿತು. ಆಗಲವನು ತನ್ನ ಟೊಂಕಕ್ಕೆ ಕೈಹಚ್ಚಿ ನೋಡಿದನು. ಅಲ್ಲಿ ಒಂದೂ ಶಸ್ತ್ರಾಸ್ತ್ರವಿರಲಿಲ್ಲ. ಆದನ್ನು ಕಂಡು ಅವನ ಸಂಗಡಿಗನಾದ ಹಿಂದೂ ಯುವಕನು ಮುಗುಳುನಗೆ ನಗುತ್ತಿದ್ದನು. ಆಗ ಆ ಮುಸಲ್ಮಾನನು ಪುನಃ ಆ ಪಾದ್ರಿಯನ್ನು ಕುರಿತು:—“ಫಿರಂಗೀ, ನಾನು ನಿನ್ನ ಅಪರಾಧವನ್ನು ಕ್ಷಮಿಸಿರುತ್ತೇನೆ. ಶಹಾನಶಹಾ ಬಾದಶಹನ ವಿಷಯವಾಗಿ ಕುತ್ಸಿತ ಭಾಷೆಯಿಂದ ಟೀಕೆಮಾಡಿದ ಅಪರಾಧಕ್ಕಾಗಿ ಈ ಹಿಂದುಸ್ತಾನದ ಬಾದಶಾಹೀ ಕಾಯಿದೆಯ ಪ್ರಕಾರ ನಿನಗೆ ಶೂಲದಂಡಣೆಯು ವಿಧಿಸಲ್ಪಡುವದು. ಆದರೂ ನೀನು ಪರದೇಶದವನು. ನಿನಗೆ ಇಲ್ಲಿಯ ಕಾಯಿದೆ-ಕಾನೂನುಗಳ ಜ್ಞಾನವಿದ್ದಂತೆ ತೋರುವದಿಲ್ಲ. ಆದ್ದರಿಂದ ನೀನು ಈಗಲೆ ಈ ಸಪ್ತಗ್ರಾಮದಿಂದ ಹೊರಟು ಹೋಗು. ಇಲ್ಲದಿದ್ದರೆ ವ್ಯರ್ಥವಾಗಿ ಜೀವಕ್ಕೆರವಾಗಬೇಕಾದೀತು” ಎಂದು ಸೌಮ್ಯ ಭಾಷೆಯಿಂದ ನುಡಿಯಲು, ಫಿರಂಗಿಯು ಒಳ್ಳೇ ರೇಗಿಗೆದ್ದು:—“ನಾವು ನಿನ್ನಂತಹ ವಿಧರ್ಮಿಯ ನಾಯಿಗಳನ್ನು ಸೆರೆಮನೆಯಲ್ಲಿರಿಸಿ ಹಂದಿಯ ಮಾಂಸವನ್ನು ತಿನ್ನಹಚ್ಚುತ್ತೇವೆ” ಎಂದು ಅಂದನು. ಈ ವಾಕ್ಯವನ್ನು ಕೇಳಿ ಆ ಯವನನು ಸಿಟ್ಟಿನಿಂದ ಉರಿಯಹತ್ತಿದನು. ಅವನು ಇನ್ನು ಬಾಯಿಂದ ಏನೇನೋ ಅನ್ನತಕ್ಕವನು; ಅಷ್ಟರಲ್ಲಿ ಆ ಫಿರಂಗಿ ಪಾದ್ರಿಯೇ ಅವನ ಗಡ್ಡ-ಮೀಸೆಗಳನ್ನು ಕಿತ್ತಹತ್ತಿದನು! ಕೂಡಲೆ ಆ ಯವನನು ಆ ಪಾದ್ರಿಯ ಮುಸುಡಿಯ ಮೇಲೆ ಒಮ್ಮೆ ಚನ್ನಾಗಿ ಬಿಗಿದನು. ಆ ಏಟಿನಿಂದ ಮೊದಲೇ ಅಶಕ್ತ ಕಾಯದ ಆ ಲಂಬೋದರ ಸ್ವರೂಪಿಯು ನೆಲಕ್ಕೆ ಬಿದ್ದನು. ಕೂಡಲೆ ಆ ಫಿರಂಗಿ ಸೈನಿಕರೀರ್ವರೂ ಸೇರಿ ಆ ಯವನನನ್ನು ಆಕ್ರಮಿಸಿದರು. ಅಷ್ಟರಲ್ಲಿ ಯವನನ ಬಳಿಯಲ್ಲಿದ್ದ ಮಯೂಖನು ಆ ಸೈನಿಕರಲ್ಲಿಯ ಒಬ್ಬನನ್ನು ಚನ್ನಾಗಿ ಹಿಡಿದು ನೆಲಕ್ಕೆ ಕೆಡಹಿದನು. ಅದನ್ನು ನೋಡಿ ಇನ್ನೊಬ್ಬ ಫಿರಂಗಿ ಸೈನಿಕನು ಯವನನನ್ನು

ಬಿಟ್ಟು ತನ್ನ ಬಂದೂಕಿಗೆ ಗುರಿ ಹೂಡಿದನು. ಆ ದಾರಿಯಲ್ಲಿ ಎಷ್ಟೋ ಜನ ದಾರಿಕಾರರು ಈವರೆಗಿನ ಇವರ ಬಡಿದಾಟವನ್ನು ನೋಡ ನಿಂತಿದ್ದರು ಫಿರಂಗಿಯು ಬಂದೂಕನ್ನು ಧರಿಸಿದೊಡನೆ ಅವರೆಲ್ಲರೂ ಊರ್ಧ್ವಶ್ವಾಸದಿಂದ ತಮ್ಮ ತಮ್ಮ ಕಾಲಿಗೆ ಬುದ್ಧಿ ಕಲಿಸಿದರು! ಇಷ್ಟೇ ಅಲ್ಲ, ಯಾವ ಹಿಂದೂ ತರುಣನ ಸಲುವಾಗಿ ಆ ಫಿರಂಗಿ ಮತ್ತು ಮಯೂಖಾದಿಗಳ ನಡುವೆ ಬಡಿದಾಟವೆಸ್ಸಿತ್ತೋ ಆ ತರುಣನೂ ಕೂಡ ತನ್ನ ಮನೆಯನ್ನು ಹೊಕ್ಕು ಒಳಗಿನಿಂದ ಕದವನ್ನಿಕ್ಕಿಕೊಂಡು ಕುಳಿತನು! ಅಷ್ಟರಲ್ಲಿ ಆ ಫಿರಂಗೀ ಸೈನಿಕನು ಮಯೂಖನ ಮೇಲೆ ಬಂದೂಕನ್ನು ಹಾರಿಸಿದನು. ಮಯೂಖನು ಆತನ ಗುರಿ ತಪ್ಪಿಸಿ ಅಡ್ಡ ಸರಿದನು; ಹಾಗು ಕ್ಷಣಾರ್ಧದಲ್ಲಿ ಆ ಯುವನನನ್ನು ಜಗ್ಗಿಕೊಂಡು ಆ ದಾರಿಯೊಳಗಿನ ಒಂದು ವಿಶಾಲವಾದ ಮರದ ಬೊಡ್ಡೆಯ ಮರೆಗೆ ಹೋಗಿ ನಿಂತನು. ಆ ಫಿರಂಗಿಯು ಎರಡನೇ ಗುಂಡು ಬಂದು ಆ ಮರದ ಬೊಡ್ಡೆಯಲ್ಲಿ ನೆಟ್ಟಿತು. ಕೂಡಲೆ ಮಯೂಖನು ಈ ವರೆಗೆ ತನ್ನ ವಸ್ತ್ರಗಳಲ್ಲಿ ಬಚ್ಚಿಟ್ಟುಕೊಂಡಿದ್ದ ಬೆಳ್ಳಿಯ ಹಿಡಿಕೆಯು ಚಿಕ್ಕ ಪಿಸ್ತೂಲನ್ನು ತೆಗೆದನು. ಅದನ್ನು ಕಂಡು ವಿಸ್ಮಯಚಕಿತನಾದ ಆ ಯುವನನು ‹‹ಇದೇನೆ”ಂದು ಪ್ರಶ್ನ ಮಾಡಿದನು. ಆಗ ಮಯೂಖನು ಅದರ ಗುರಿಯನ್ನು ಆ ಫಿರಂಗಿ ಸೈನಿಕನ ಮೇಲಿಟ್ಟು, ‹‹ಇದು ಹೊಸ ಪದ್ಧತಿಯ ಚಿಕ್ಕ ಬಂದೂಕು-ಪಿಸ್ತೂಲು'' ಎಂದಂದು ಅದರ ಕುದುರೆಯನ್ನು ಮೀಟಿದನು.

ಪಿಸ್ತೂಲಿನ ಸಪ್ಪಳವಾಗುವಷ್ಟರಲ್ಲಿ ಒಬ್ಬ ಫಿರಂಗಿ ಸೈನಿಕನು ಗಾಯಪಟ್ಟು ನೆಲಕ್ಕುರುಳಿದನು. ಅದನ್ನು ಕಂಡು ಆ ಪಾದ್ರಿಯೂ ಇನ್ನೊಬ್ಬ ಸೈನಿಕನೂ ದೂರದಲ್ಲಿಯ ಇನ್ನೊಂದು ಮರದ ಆಶ್ರಯಕ್ಕೆ ಹೋಗಿ ನಿಂತುಕೊಂಡರು ಮಯೂಖನು ಓಡುತ್ತ ಹೋಗಿ, ಆ ಗಾಯಪಟ್ಟವನಿಂದ ಬಂದೂಕನ್ನು ಕಸಿದು ತಂದು ಯುವನನ ಕೈಗಿತ್ತು, ಮತ್ತೆ ಮೊದಲಿನಂತೆ ಆ ಗಿಡದ ಮರೆಗೆ ನಿಂತನು ಇಷ್ಟರಲ್ಲಿ ಆ ಇನ್ನೊಬ್ಬ ಸೈನಿಕನ ಬಂದೂಕಿನ ಗುಂಡು ಬಂದು ಮಯೂಖನ ಎಡಗೈಗೆ ಬಡೆಯಿತು. ಮಯೂಖನು ಅತ್ತ ಲಕ್ಷ್ಯಗೊಡದೆ ಯುವನನನ್ನು ಕುರಿತು:—‹‹ನಿಮಗೆ ಬಂದೂಕಿನ ಗುರಿ ಹೊಡೆಯುವ ಅಭ್ಯಾಸವಿದೆಯೋ?'' ಎಂದು ಪ್ರಶ್ನೆ ಮಾಡಲು, ಆ ಯುವನನು ನಗೆಮೊಗದಿಂದ ‹‹ನನಗೆ ಈ ವಿದ್ಯೆಯು ಚೆನ್ನಾಗಿ ಗೊತ್ತಿದೆ; ನಾನೂ

ಸೈನಿಕನೇ'' ಎಂದೆನ್ನುತ್ತ ಬಂದೂಕಿನ ಗುರಿ ಇಡಹತ್ತಿದನು; ಆದರೆ ಅದಕ್ಕೆ ಮದ್ದು-ಗುಂಡುಗಳೆಲ್ಲಿಂದ ಬರಬೇಕು? ಕೂಡಲೆ ಮಯೂಖನು:- "ತುಸ ತಡೆಯಿರಿ.'' ಈಗ ಅವುಗಳನ್ನು ತಂದುಕೊಡುವೆನು'' ಎಂದು ಮತ್ತೆ ಆ ಗಾಯಪಟ್ಟ ಫಿರಂಗಿ ಸೈನಿಕನ ಕಡೆಗೆ ಓಡಹತ್ತಿದನು; ಆದರೆ ಯವನನು ಅವನನ್ನು ಹೋಗಗೊಡದೆ, ಅವನ ಬಲಗೈಯನ್ನು ಹಿಡಿದು ನಿಲ್ಲಿಸಿ:- "ಕಾಫರ, ನೀನು ಗಾಯಹೊಂದಿರುವೆ; ಆದುದರಿಂದ ನೀನು ಇಲ್ಲಿಯೇ ನಿಲ್ಲು. ನಾನು ತರುವೆನು. ಆ ಇನ್ನೊಬ್ಬ ಫಿರಂಗಿ ಸೈನಿಕನು ಇತ್ತ ಮೋರೆ ಮಾಡಿದ ಕೂಡಲೆ ನೀನು ನಿನ್ನ ಪಿಸ್ತೂಲನ್ನು ಅವನ ಮೇಲೆ ಹಾರಿಸು. ಒಂದು ವೇಳೆ ನಾನು ಆತನ ಗುಂಡಿನಿಂದ ಸತ್ತರೆ, ಇಲ್ಲಿಯ ಫೌಜದಾರನಾದ ಕಲಿಮುಲ್ಲಾಖಾನನಿಗೆ ಜಹಾಂಗೀರನಗರದ ಒಬ್ಬ ಅಮೀರನು ಫಿರಂಗಿಗಳಿಂದ ಹತನಾದನೆಂದು ತಿಳಿಸಲಿಕ್ಕೆ ಮರೆಯಬೇಡ'' ಎಂದಂದು ಉತ್ತರದ ಅಪೇಕ್ಷೆ ಕೂಡ ಮಾಡದೆ, ಓಡುತೋಡುತ್ತ ಆ ಗಾಯಪಟ್ಟ ಫಿರಂಗಿಸೈನಿಕನ ಬಳಿಗೆ ಹೋದನು. ಕೂಡಲೆ ಆ ಇನ್ನೊಬ್ಬ ಸೈನಿಕನು ಆ ಯವನನಮೇಲೆ ಗುಂಡುಹಾಕಲಿಕ್ಕೆ ಅತ್ತ ಮೋರೆ ತಿರುವಲು, ಮಯೂಖನ ಪಿಸ್ತೂಲಿನ ಗುಂಡಿನಿಂದ ತತ್ಕ್ಷಣವೇ ಯಮಲೋಕವನ್ನೈದಿದನು. ಇನ್ನು ಇಲ್ಲಿ ಇದ್ದರೆ ತನ್ನ ಕೆಲಸವು ಕೊನೆಗಾಣದೆಂದು ತಿಳಿದ ಆ ಪಾದ್ರಿಯು ದಾರಿಸಿಕ್ಕತ್ತ ಓಡಿಹೋಗಿ, ಬಂದರದೊಳಗಿನ ನಾವನ್ನೇರಿ ಹುಗಳಿಯ ಕಡೆಗೆ ಸಾಗಿದನು.

ಪ್ರಸ್ತುತದ ಯುದ್ಧವು ಪೂರೈಸಿತೆಂದು ತಿಳಿದ ಕೂಡಲೆ ಮಯೂಖನು ಆ ಗಿಡದ ಬೊಡ್ಡೆಯಿಂದ ದಾರಿಗೆ ಬಂದು ಆ ಯವನನನ್ನು ಕುರಿತು:— "ಸಾಹೇಬ, ನಿಶ್ಚಿಂತ ಮನಸ್ಸಿನಿಂದ ತಾವಿನ್ನು ತಮ್ಮ ಗಂತವ್ಯಸ್ಥಳಕ್ಕೆ ನಡೆಯಿರಿ. ನಾನೂ ನನ್ನ ಬಿಡಾರಕ್ಕೆ ತೆರಳುತ್ತೇನೆ'' ಎಂದು ನುಡಿದನು.

"ಕಾಫರ, ನೀನು ಸಾಮಾನ್ಯನಲ್ಲ. ಶ್ರೇಷ್ಠವೀರನು. ನೀನಿದ್ದೆಯಂತೇ ಇಂದು ನಾನು ಬದುಕಿರುವೆನು; ಆದುದರಿಂದ ನೀನು ಇಂದಿನಿಂದ ನನ್ನ ಪರಮಮಿತ್ರನಾಗಿರುತ್ತೀ. ನಾನು ನಿನ್ನನ್ನು ಹೀಗೆಯೇ ಹೋಗಗೊಡುವವನಲ್ಲ. ನನ್ನೊಡನೆ ಕೋಟೆಗೆ ಬಾ. ನೀನು ಇಂದು ಆ ದಸ್ಯುಸದೃಶ ಫಿರಂಗಿಗಳನ್ನು ಕೊಂದಿರುವೆಯಾದುದರಿಂದ, ನೀನೂ ಬಂಗಾಲಪ್ರಾಂತದ ನಿಜವಾದ ಸೇವಕನಾಗಿರುತ್ತೀ. ಗೆಳೆಯಾ, ನೀನು ಯಾರು? ನಿನ್ನ ಹೆಸ

ರೇನು? ಇಲ್ಲಿ ಯಾತಕ್ಕೋಸ್ಕರ ಬಂದಿರುವೆ?'' ಎಂಬ ಆ ಯುವನನ ಪ್ರಶ್ನೆಗೆ,

''ಸಾಹೇಬ, ಮಹತ್ವದ ಕಾರಣಕ್ಕಾಗಿ ಇಂದು ನಾನು ತಮಗೆ ನನ್ನ ಪರಿಚಯವನ್ನು ಕೊಡಲಾರೆನು. ಫಿರಂಗಿಗಳು ನನ್ನ ಹಗೆಗಳು. ಅವರು ನನ್ನೊಬ್ಬ ಆತ್ಮೀಯಳನ್ನು ಅಪಹರಿಸಿರುತ್ತಾರೆ. ಅವಳ ಉದ್ಧಾರ ಪ್ರಯತ್ನಕ್ಕಾಗಿಯೇ ನಾನೀ ಸಪ್ತಗ್ರಾಮಕ್ಕೆ ಬಂದಿರುತ್ತೇನೆ.''

''ತಮ್ಮಾ, ನಾನು ನಿನ್ನ ತಂದೆಯ ವಯಸ್ಸಿನವನು. ನನ್ನೆದುರಿಗೆ ನಿನ್ನ ನಿಜಸಂಗತಿಯನ್ನು ಮುಚ್ಚಿಟ್ಟುಕೊಳ್ಳುವದು ವಿಹಿತವಲ್ಲ. ನನಗೋಸುಗ ನೀನು ಇಂದು ಫಿರಂಗಿ ದಸ್ಯುಗಳನ್ನು ಸಂಹರಿಸಿರುವೆ. ನೀನು ಈ ಬಂಗಾಲದ ಸುಭೆಯಲ್ಲಿ ವಾಸವಾಗಿರುವ ವರೆಗೆ ನನ್ನ ಜೊತೆಯಲ್ಲೇ ವಾಸವಾಗಿರು. ನಾನು ಬಾದಶಹನ ಪ್ರೀತಿಪಾತ್ರನಾದ ಅಮೀರನು. ನನ್ನ ಹೆಸರು ಅಸದಖಾನ.''

ತರುಣನು ಯುವನನ ಮುಖವನ್ನು ವಿಸ್ಮಯವಿಸ್ಫಾರಿತ ನೇತ್ರಗಳಿಂದ ಕ್ಷಣ ಕಾಲ ನೋಡಿ:—''ಖಾನಸಾಹೇಬ, ತಾವು ನನ್ನ ತಂದೆಯ ಪರಮ ಸ್ನೇಹಿತರು. ಆದುದರಿಂದ ತಮ್ಮೊಡೆಯಲ್ಲಿ ನಾನು ನನ್ನ ಗೌಪ್ಯವನ್ನು ಮುಚ್ಚಿಡುವದಿಲ್ಲ. ನನ್ನ ಹೆಸರು ಮಯೂಖನೆಂದು. ಬಾರಬಕ್‌ಸಿಂಹ ಪರಗಣೆಯ ಮಾಜಿ ಜಮೀನದಾರನಾದ ಮಹಾರಾಜಾ ದೇವೇಂದ್ರನಾರಾಯಣನೇ ನನ್ನ ತಂದೆಯು................''

''ಮಗೂ, ನೀನು ದೇವೇಂದ್ರನಾರಾಯಣನ ಪುತ್ರನೇ! ನೀನು ಸಪ್ತಗ್ರಾಮಕ್ಕೆ ಬಂದಿದ್ದು ನನಗೆ ತಿಳಿಸಲಿಲ್ಲೇಕೆ? ನಿನ್ನ ಕಕ್ಕ ಅನುಪನಾರಾಯಣನು ಖಾನಜಾದಖಾನರ ಕಾಲದಲ್ಲಿ ನಿನ್ನ ಜಹಗೀರನ್ನೆಲ್ಲ ತನ್ನ ಹೆಸರಿಗೆ ಮಾಡಿಸಿಕೊಂಡನು ಆಗ ನಿನ್ನ ಕಡೆಯವರಾರಾದರೂ ಜಹಾಂಗೀರನಗರಿಗೆ ಬಂದಿದ್ದರೆ ನಿನ್ನ ಜಮೀನದಾರಿಯು ನಿನಗೇ ಉಳಿಯುತ್ತಿತ್ತು. ಅದಿರಲಿ. ನೀನು ಈಗ ಎಲ್ಲಿ ಇರುತ್ತೀ-ಏನು ಮಾಡುತ್ತೀ?''

''ಖಾನಸಾಹೇಬ, ತಂದೆಯ ನಿಧನದ ನಂತರ ತುಸ ದಿನಗಳಲ್ಲಿಯೇ ಈ ಪಾಪಿಯು ತನ್ನ ತಾಯಿಯನ್ನೂ ಪರಲೋಕಕ್ಕಟ್ಟಿರುವನು. ನನಗೆ ಬೇರೆ ಅಣ್ಣ-ತಮ್ಮಂದಿರಾಗಲಿ, ಅಕ್ಕ-ತಂಗಿಯರಾಗಲಿ ಯಾರೂ ಇರುವದಿಲ್ಲ. ನನಗೆ ತಿಳಿಯಹತ್ತಿದ ಬಳಿಕ ಶಸ್ತ್ರ-ಶಾಸ್ತ್ರವಿದ್ಯೆಗಳನ್ನು ತಕ್ಕಮಟ್ಟಿಗೆ ಅಭ್ಯಾಸಿಸಿದೆನು. ಇನ್ನು ನಾನು ನನ್ನ ಜೀವನಕ್ಕಾಗಿ ಎಲ್ಲಿಗಾದರೂ

ಹೋಗಿ ಏನಾದರೊಂದು ಉದ್ಯೋಗವನ್ನು ಕೈಕೊಳ್ಳತಕ್ಕವನು; ಇಷ್ಟರಲ್ಲಿ ಆಕಸ್ಮಿಕವಾಗಿ ಫಿರಂಗಿಗಳ ಕೂಡ ಕಾದಬೇಕಾದ ಪ್ರಸಂಗವುಂಟಾಯಿತು!''

ಬಳಿಕ ಮಯೂಖನು ಲಲಿತಾಹರಣದ ಸಂಗತಿಯನ್ನೆಲ್ಲ ಅಸದಖಾನನಿಗೆ ತಿಳಿಸಿದನು. ತಾನು ಪೋಣಿಯಲ್ಲಿ ಗಾಯಪಟ್ಟು ತೇಲಿ ಬರುವಾಗ ಗೋಕುಲಬಿಹಾರಿಯು ತನ್ನನ್ನು ಸಂರಕ್ಷಿಸಿ ಇಲ್ಲಿಯ ವರೆಗೆ ಕರೆತಂದನೆಂಬದನ್ನೂ ತಿಳಿಸಿದನು. ಅದನ್ನೆಲ್ಲ ಕೇಳಿ ಸಂತುಷ್ಟಚಿತ್ತನಾದ ಅಸದಖಾನನು:—ಮಯೂಖ, ಬಹಳ ನೆಟ್ಟಗಾಯಿತು. ಗೋಕುಲನಂತಹ ಉತ್ತಮ ಹಿಂದುವು ಈ ಸಪ್ತಗ್ರಾಮದಲ್ಲಿ ವಿರಳವೇ ಸರಿ; ಆದರೆ ತಮ್ಮಾ, ನೀನೊಬ್ಬನೇ ಈಗ ಮಿನಾಬಝಾರಕ್ಕೆ ತೆರಳಬೇಡ. ನೀನು ನನ್ನೊಡನೆ ಮೇಲೆ ಕೋಟೆಗೆ ನಡೆ. ಅಲ್ಲಿಂದ ಕೆಲ ಜನ ಸಿಪಾಯಿಗಳೊಡನೆ ನಿನ್ನನ್ನು ನಿನ್ನ ಬಿಡಾರಕ್ಕೆ ಕಳಿಸುವ ವ್ಯವಸ್ಥೆ ಮಾಡುವೆನು.''

ಬಳಿಕ ಅವರೀರ್ವರೂ ಕೋಟೆಯನ್ನು ಪ್ರವೇಶಿಸಿದರು. ಫೌಜದಾರ ಕಲಿಮುಲ್ಲಾಖಾನನು ಭೋಜನಾನಂತರದ ಅಫೀಮಿನ ಸೇವನದಿಂದ ಪ್ರಜ್ಞಾಹೀನನಾಗಿದ್ದನು. ಅಸದಖಾನನು ಮಯೂಖನೊಡನೆ ತನ್ನ ಬಳಿಗೆ ಬಂದುದನ್ನು ಕಂಡು ಫೌಜದಾರನು ಗಾಬರಿಗೊಂಡನು. ಅಸದಖಾನನು ಬಂದವನೇ, "ಖಾನಸಾಹೇಬ, ಈಗಿಂದೀಗಲೆ ಕುದುರೆಯ ರಾವುತರ ಒಂದು ಸೈನ್ಯವನ್ನೂ, ಹತ್ತೆಂಟು ದೊಡ್ಡ ತೋಫುಗಳನ್ನೂ ಬಂದರಕ್ಕೆ ಕಳಿಸಿರಿ.'' ಎನ್ನಲು,

ಅಫೀಮಿನ ಗುಂಗಿನಲ್ಲಿದ್ದ ಫೌಜದಾರನು ಮತ್ತಿಷ್ಟು ಗಾಬರಿಗೊಂಡು:—"ಖುದಾವಂದ! ಆಗಿರುವದಾದರೂ ಏನು?'' ಎಂದು ಪ್ರಶ್ನೆ ಮಾಡಲು,

"ಈ ಬಾದಶಾಹೀರಾಜ್ಯದಲ್ಲಿ-ಸಪ್ತಗ್ರಾಮದಲ್ಲಿ-ಭರರಸ್ತೆಯ ಮೇಲೆ ಹಾಡಹಗಲಲ್ಲಿ ನನ್ನಂತಹ ಬಾದಶಹನ ಪ್ರೇಮದ ಅಮೀರನ ಮೇಲೆ ಫಿರಂಗಿದಸ್ಯುಗಳು ಗುಂಡು ಹಾರಿಸಿದರು. ಇದಕ್ಕೂ ಹೆಚ್ಚಿನ ಪುಂಡಾಟಿಕೆ-ಅವಮಾನಗಳೇನಾದರೂ ಉಂಟೇ?'' ಎಂದು ಅಸದಖಾನನು ಸಿಟ್ಟಿನಿಂದ ಆಡಿದ ನುಡಿಯನ್ನು ಕೇಳಿ, ಕಲಿಮುಲ್ಲಾಖಾನನು ನಡುಗುತ್ತ-ನಡುಗುತ್ತ ನೆಲದ ಮೇಲೆ ಬಿದ್ದುಬಿಟ್ಟನು.

ಮುಚ್ಚಿಂಜಿಯ ಸಮಯ; ಸಪ್ತಗ್ರಾಮದ ವಿಶಾಲವಾದ ರಾಜ ಬೀದಿಗಳಲ್ಲಿ ಸಹಸ್ರಾರು ದೀಪಗಳು ಪ್ರಜ್ವಲಿಸಹತ್ತಿರುವವು. ಒಂದು ಪ್ರಶಸ್ತವಾದ ರಾಜಮಾರ್ಗದ ಪಕ್ಕದ ಒಂದು ಮೇಲಂತಸ್ತಿನ ಮಹಡಿಯ ಮೇಲೆ ಕುಳಿತುಕೊಂಡು ಆ ಪೂರ್ವಪರಿಚಿತ ರಮಣಿಯು ತನ್ನ ಸತಾರನ್ನು ಬಾರಿಸತೊಡಗಿದ್ದಳು. ಅವಳ ಪಕ್ಕದಲ್ಲಿ ಬಹು ಮೂಲ್ಯವಾದ ರತ್ನಗಂಬಳಿಯ ಮೇಲೆ ಕುಳಿತ ಫಾತಮೆಯು ಎಲೆ-ಅಡಕೆಯ ಡಬ್ಬಿಯನ್ನು ಸಜ್ಜುಗೊಳಿಸುತ್ತಿದ್ದಳು. ನಾಜೀರ ಅಹಮ್ಮದನು ತನ್ನ ವ್ಯಸನಾಧೀನತೆಯಲ್ಲಿ ರತನಾಗಿದ್ದನು. ಹೊರಗಿನ ಪಡಸಾಲೆಯಲ್ಲಿ ಕುಳಿತ ಹಬೀಬನು ತನಗೋಸ್ಕರವಾಗಿ ಬೆಳ್ಳಿಯ ಕಲಬತ್ತಿನಲ್ಲಿ ಎಲೆ ಅಡಕೆಗಳನ್ನು ಕುಟ್ಟಿಕೊಳ್ಳುತ್ತಿದ್ದನು. ಕೇದಾರಗೌಳ, ಪೂರವೀ, ಗೌರೀ ಮುಂತಾದ ರಾಗಗಳನ್ನು ೨-೩ ಸಾರೆ ಬಾರಿಸಿದಳು. ಮತ್ತೆ ಎಂದಾದರೂ ಅವಳು ಹೀಗೆ ಬಾರಿಸಿದ್ದರೆ, ಅವಳ ಆ ಸತಾರಿನ ವಾದನವನ್ನು ಕೇಳಲಿಕ್ಕೆ ಆ ರಾಜಪಥದಲ್ಲಿ ಸಾವಿರಗಟ್ಟಲೆ ಜನರು ಕಲೆಯುಬಹುದಾಗಿತ್ತು; ಆದರೆ ಇಂದು ಆ ಸಪ್ತಗ್ರಾಮದ ರಾಜಪಥಗಳಲ್ಲಿ ಅಲ್ಲೋಲ-ಕಲ್ಲೋಲಪ್ರದವಾದ ಭೀಷಣಧ್ವನಿಯು ಕೇಳಬರುತ್ತಿತ್ತು. ಅದರಿಂದ ನಗರವಾಸಿಗಳೆಲ್ಲರೂ ತಮ್ಮ ತಮ್ಮ ಮನೆಯನ್ನು ಸೇರಿ "ಮುಂದೇನು ಮಾಡಬೇಕೆ"ಂಬ ಚಿಂತೆಯಲ್ಲಿ ಮಗ್ನರಾಗಿದ್ದರು.

ಕ್ರಮಶಃ ದಾರಿಯೊಳಗಿನ ಕೋಲಾಹಲವು ಹೆಚ್ಚಿತು. "ಫಿರಂಗಿಗಳು ಬಂದರು-ಫಿರಂಗಿಗಳು ಬಂದರು; ಪೇಟೆಯನ್ನು ಸುಲಿಯುವರು" ಎಂಬ ಧ್ವನಿಯು ಎಲ್ಲೆಲ್ಲಿಯೂ ನಿನಾದಗೊಂಡಿತು. ಅಂಗಡಿಕಾರರು ಲಗುಬಗೆಯಿಂದ ತಮ್ಮ ಅಂಗಡಿಗಳನ್ನು ಮುಚ್ಚಹತ್ತಿದರು. ಫಿರಂಗಿಗಳು ಬಂದರೆಂಬ ವಾರ್ತೆಯನ್ನು ಕೇಳಿ ಸತಾರನ್ನು ಬಾರಿಸುತ್ತಿದ್ದ ಆ ಯುವತಿಯೂ ಫಾತಮೆಯೂ ಗಾಬರಿಯಿಂದ ಎದ್ದು ನಿಂತರು. ನಾಜೀರಅಹಮ್ಮದನು ಧಾವಿಸುತ್ತ ಅವರ ಬಳಿಗೆ ಬಂದು:—ಬೀಬೀ ಸಾಹೇಬ, ನನ್ನ ಸರ್ವನಾಶವಾಗಿದೆ. ನಾನು ಈಗಿಂದೀಗಲೆ ಪೇಟೆಗೆ ಹೋಗಿ ಬರಬೇಕು. ಇಲ್ಲದಿದ್ದರೆ ನಾನು ಇಂದಿನ ರಾತ್ರಿಯನ್ನು ಕಳೆಯುವಂತಿಲ್ಲ. ನನ್ನ ಹತ್ತರ ಒಂದಿಷ್ಟು ಅಫೀಮಾಗಲಿ, ಭಂಗಿಯಾಗಲಿ ಇರುವದಿಲ್ಲ. ಅದ್ದರಿಂದ ನನಗೆ ಪೇಟೆಗೆ ಹೋಗಲಿಕ್ಕೆ ಅಪ್ಪಣೆ ಕೊಡಬೇಕು" ನಾಜೀ

ರನ ನುಡಿಯನ್ನು ಕೇಳಿ, ಆ ಯುವತಿಯು ಸೊಂಡೆಯೊಣಗಿತು. ಕೂಡಲೆ ಅವಳು ನಾಜೀರನನ್ನುದ್ದೇಶಿಸಿ:-"ನಾಜೀರ, ಈಗ ನೀನಿದೆಂಥ ಅವಿಚಾರವ ಮಾಡಹತ್ತಿರುವೆ? ಹೊರಗೆ ನಡೆದಿರುವ ಗದ್ದಲವೇನು? ನೀನು ನಮ್ಮನ್ನು ಬಿಟ್ಟು ಹೋಗಬೇಕೆಂದಿರುವೆಯೇನು?" ಎಂದವಳೇ ಆ ದಿವಾಣಖಾನೆಯ ಬಾಗಿಲಿಗೆ ಅಡ್ಡ ನಿಂತು ಅವನನ್ನು ಹೋಗಗೊಡದಾದಳು. ಆಗಲವನು—ಬೀಬೀಸಾಹೇಬ, ಆ ಫಿರಂಗಿಗಳ ಉಪಟಳದಿಂದ ಸಾಯುವದು ಸುಖಕರ ವಾದೀತು; ಆದರೆ ಬಳಿಯಲ್ಲಿ ಹಿಂದಿಷ್ಟು ನಿಶೆಯ ಸಾಹಿತ್ಯಗಳಿಲ್ಲದೆ ಬದುಕುವ ಮನುಷ್ಯನ ಜೀವಿತವು ವ್ಯರ್ಥವೇ ಸರಿ. ಸರಿಯಿರಿ, ಇಷ್ಟರಲ್ಲಿ ಅಂಗಡಿಗಳು ಮುಚ್ಚಲ್ಪಟ್ಟಾವು. ಬೇಗನೆ ಸಮೀಪದ ಅಂಗಡಿಗೆ ಹೋಗಿ ನನ್ನ ಸಾಹಿತ್ಯವನ್ನು ತರುತ್ತೇನೆ; ಎಂದವನೇ ತರುಣಿಯ ಪ್ರತ್ಯುತ್ತರದ ದಾರಿಯ ನೋಡದೆ ಅಟ್ಟದಿಂದಿಳಿದು ಧಾವಿಸಿದನು

ನಾಜೀರನ ಆ ಅವಸಾನಘಾತುಕತನವನ್ನು ಕಂಡು ಆ ತರುಣಿಯು ದಿಙ್ಮೂಢಳಾಗಿ ದೊಪ್ಪನೆ ನೆಲಕ್ಕೆ ಕುಸಿಕುಳಿತಳು. ಅಷ್ಟರಲ್ಲಿ ಆ ವಿಶಾಲವಾದ ಸಪ್ತಗ್ರಾಮದ ರಾಜಪಥಗಳಲ್ಲಿಯ ಪ್ರಜ್ವಲಿತಮಾನಗಳಾದ ಅಸಂಖ್ಯ ದೀಪಗಳೆಲ್ಲ ಒಮ್ಮೆಲೆ ನಂದಿಸಲ್ಪಟ್ಟವು ನಗರದೊಳಗಿನ ಹಾಹಾಕಾರವು ವೃದ್ಧಿಂಗತವಾಗುತಲಿತ್ತು. ಆ ಅನಾಹುತವನ್ನೆಲ್ಲ ಕಂಡು ಯುವತಿಯು ಕ್ಷಣಕಾಲ ಘೋರೆಂದು ಅತ್ತು, ಬಳಿಕ ಅವಳು ಫಾತಮೆಯನ್ನು ಕುರಿತು:—ಫತೇಮಾ, ಇನ್ನು ಏನು ಮಾಡಬೇಕೆಂದಿರುವೆ? ಎಲ್ಲಿಗೆ ಹೋಗಬೇಕು? ಏನು ಮಾಡಬೇಕು? ತಿಳಿಸು; ಎನಲು,

ಹಣೆ-ಹಣೆ ಬಡಕೊಳ್ಳುತ್ತ ಫಾತಮೆಯು:—"ತಂಗೀ, ದೇವರೇ ಈ ವಿಪತ್ತಿನಿಂದ ರಕ್ಷಿಸತಕ್ಕವನು. ನೀನು ನನ್ನ ಮಾತನ್ನು ಕೇಳಿದ್ದರೆ ನಮಗೆ ಈ ಪ್ರಸಂಗವು ಪ್ರಾಪ್ತವಾಗುತ್ತಲೇ ಇರಲಿಲ್ಲ. ಅಂದೇ ಹೊರಟಿದ್ದರೆ ಇಷ್ಟರಲ್ಲಿ ನಾವು ಜಾಹಂಗೀರನಗರಕ್ಕೆ ತಲುಪಿ ಸುಖವಾಗಿರುತ್ತಿದ್ದೆವು" ಎಂದಳು.

ಫತೇಮಾ, ಆದಿರಲಿ. ನಿನ್ನ ಮಾತಿನಂತೆ ನಾವು ಇಲ್ಲಿ ಇರದೆ, ಹಾಗೇ ದಾರಿ ಕ್ರಮಿಸಿದ್ದರೆ, ಜಹಾಂಗೀರ ನಗರಿಗೆ ತಲುಪುವ ಬದಲಾಗಿ ಹುಗಳಿಯ-ಫಿರಂಗಿಗಳ ಸೆರೆಮನೆಗಾದರೂ ನಿಶ್ಚಯವಾಗಿ ತಲುಪುತ್ತಿದ್ದೆವು"

ಇಷ್ಟರಲ್ಲಿ ಈ ವರೆಗೆ ಹೊರಗಿನ ಪಡಸಾಲೆಯಲ್ಲಿ ಕುಳಿತಿದ್ದ ಹಬೀ

ಬನು ಹೀಗೆ ಬಂದು:—ಬೀಬೀಸಾಹೇಬ, ಸಂಕಟ ಸಮಯದಲ್ಲಿ ಅಳುತ್ತ ಕೂಡ್ರುವದು ಶ್ರೇಯಸ್ಕರವಲ್ಲ. ನಾನು ಹೊರಗಿನ ಎಲ್ಲ ಬಾಗಿಲುಗಳನ್ನು ಮುಚ್ಚಿ ಬಂದಿರುವೆನು; ಹಾಗು ಇಷ್ಟರಲ್ಲಿ ಈ ನನ್ನ ಪುರಾತನ ಕಾಲದ ಕತ್ತಿಯನ್ನೂ ಮಸೆದು ಸಜ್ಜುಗೊಳಿಸುತ್ತೇನೆ. ಈ ಹಬೀಬನು ನಿಮ್ಮ ಬಳಿಯಲ್ಲಿರುವ ವರೆಗೆ ನಿಮ್ಮ ಮೈಗೆ ಕೈಹಚ್ಚುವವರಾರು? ಎಂದೆನ್ನುತ್ತ ಆ ಕತ್ತಿ ಮಸೆಯುವದರಲ್ಲಿ ತಲ್ಲೀನನಾದನು.

ಹಬೀಬನ ಆ ನುಡಿ ಕೇಳಿ ಅಶ್ರುಸಿಕ್ತಳಾದ ಆ ಯುವತಿಗೆ ಅಂಥ ಸ್ಥಿತಿಯಲ್ಲೂ ನಗೆ ಬಾರದೆ ಇರಲಿಲ್ಲ. ಅವಳು ಮುಗುಳುನಗೆಯಿಂದ:— "ಹಬೀಬ, ಈ ಮುರುಕ ಕತ್ತಿಯು ನಿನಗೆಲ್ಲಿ ದೊರಕಿತು? ಇದನ್ನು ತಕ್ಕೊಂಡು ನೀನು ಮಾಡುವದಾದರೂ ಏನು? ನಿನಗೆ ಯುದ್ಧದಲ್ಲಿ ಗತಿಯುಂಟೆ?"

"ನನ್ನ ತಂದೆ-ಅಜ್ಜಂದಿರು ಇದೇ ಕತ್ತಿಯಿಂದ ಎಷ್ಟೋ ಕಾಳಗಗಳಲ್ಲಿ ವೈರಿಗಳನ್ನು ಸರಸರನೆ ಕೊಯ್ದಿರುವರು. ನಮ್ಮ ಅಣ್ಣನಂತೂ ಈ ಕತ್ತಿಯ ಪ್ರಭಾವದಿಂದಲೇ ಸಮ್ರಾಟ್ ಅಕಬರನಲ್ಲಿ ಕುದುರೆಯ ದಂಡಿನ ಮುಖ್ಯಸ್ಥನಾಗಿ ಹೋದನು ಬಾಲ್ಯದಲ್ಲಿ ನಾನೂ ಕೆಲ ದಿನಗಳವರೆಗೆ ಶಸ್ತ್ರಾಸ್ತ್ರಗಳ ಅಭ್ಯಾಸಮಾಡಹೋಗಿದ್ದೆನು; ಆದರೆ ನನಗೆ ಆ ಹಿಂಸಾಪ್ರಚುರವಾದ ಸೈನಿಕನ ಬಾಳುವೆಗಿಂತ ಅಹಿಂಸಾಪ್ರಧಾನವಾದ ಈ ಅಂತಃಪುರದ ಸಿಪಾಯಿಗಿರಿಯು ಹೆಚ್ಚು ಸುಖಕರವಾಗಿ ತೋರಿದ್ದರಿಂದ ನಾನು ಆಗಿನಿಂದಲೇ ಈ ವ್ಯವಸಾಯವನ್ನು ಕೈಕೊಂಡೆನು. ಅದರಿಂದ ನನಗೆ ರಣರಂಗದ ತಿಂಡಿಯಿರದಿದ್ದರೂ, ಈ ಕತ್ತಿಯು ನನ್ನ ಕೈಯೊಳಗಿರುವ ವರೆಗೆ ಹಿಬ್ಬಿಬ್ಬರ ತಲೆಗಳನ್ನಾದರೂ ಧಡದಿಂದ ಇಳಿಸಿಯೇ ತೀರುವೆನು."

"ಹಬೀಬ ನನಗೋಸುಗ ನೀನು ಅಷ್ಟೊಂದು ಪೇಚಾಡುವ ಕಾರಣವಿಲ್ಲ. ನಾನು ನನ್ನ ಸಂರಕ್ಷಣವನ್ನು ಸಹಜವಾಗಿ ಮಾಡಿಕೊಳ್ಳಬಲ್ಲೆನು."

"ಅದೆಂತು?"

"ಇಗೋ, ನೋಡು. ಈ ಗುಳಿಗೆಯನ್ನು!" ಎಂದವಳೇ, ತನ್ನ ವಸ್ತ್ರದೊಳಗಿಂದ ಒಂದು ಬೆಳ್ಳಿಯ ಚಿಕ್ಕ ಸುಂದರ ಕರಂಡಕವನ್ನು ತೆಗೆದಳು ಅದನ್ನು ಕಂಡು ಹಬೀಬನು:—"ಇದರಲ್ಲೇನಿದೆ?"

"ಇದರಲ್ಲಿ ಜಹರ ಎಂಬ ಅತ್ಯುಗ್ರ ವಿಷವಿದೆ."

ಆ ಯುವತಿಯ ನುಡಿಯನ್ನು ಕೇಳಿ ಫಾತಮೆಯೂ, ಹಬೀಬನೂ ಗದಗುಟ್ಟಿ ನಡುಗಿದರು. ಇದೇ ಕಾಲಕ್ಕೆ ಹೊರಗೆ ಬಂದೂಕಿನ ಸಪ್ಪಳ ವಾಗಹತ್ತಿತು. ಕೂಡಲೆ ಹಬೀಬನ ಸೂಚನೆಯ ಮೇರೆಗೆ ಅವರೆಲ್ಲರೂ ಕಿಟಕಿಗಳನ್ನು ಮುಚ್ಚಿಕೊಂಡು ಒಳಗೆ ಹೋಗಿ ಕುಳಿತರು.

ತುಸ ಹೊತ್ತಿನಲ್ಲಿಯೇ ಯಾರೋ ಬಂದು ಇವರ ಮೇಲಟ್ಟದ ಬಾಗಿಲವನ್ನು ಮುರಿದು ಕೆಡವಿದರು. ಕೂಡಲೆ ಯುವತಿಯು ಆ ಕರಂಡಕದಲ್ಲಿದ್ದ ಗುಳಿಗೆಗಳಲ್ಲಿಯ ಒಂದನ್ನು ಹೊರಗೆ ತೆಗೆದಳು. ಫಾತಮೆಯು ಅವಳ ಕೈಯನ್ನು ಹಾರುಹೊಡೆದು ಆ ಗುಳಿಗೆಯನ್ನು ಎಲ್ಲಿಯೋ ಕತ್ತಲದಲ್ಲಿ ಕೆಡವಿಬಿಟ್ಟಳು! ಅಷ್ಟರಲ್ಲಿ ಏಳೆಂಟು ಜನ ಫಿರಂಗಿಸೈನಿಕರು ಇವರು ನಿಂತಲ್ಲಿಗೇ ಬಂದರು. ಹಬೀಬನು ತನ್ನ ಮುರುಕ ಕತ್ತಿಯಿಂದ ಅವರೊಡನೆ ಕಾದಹತ್ತಿದನು; ಆದರೆ ಕ್ಷಣಾರ್ಧದಲ್ಲಿ ಅದು ಒಬ್ಬ ಫಿರಂಗಿಯ ಸಂಗಿನಿಯ ಆಘಾತದಿಂದ ಮುರಿದು ತುಂಡು ತುಂಡಾಗಿ ಬಿಟ್ಟಿತು. ಇನ್ನೊಬ್ಬ ಫಿರಂಗಿಯು ಬಂದೂಕಿನಿಂದ ಹಬೀಬನು ಗಾಯಪಟ್ಟು ಚೇತನಾವಿಹೀನನಾಗಿ ಬಿದ್ದನು. ಉತ್ತರಕ್ಷಣದಲ್ಲಿಯೇ ಉಳಿದ ಸೈನಿಕರೆಲ್ಲರೂ ಸೇರಿ, ಆ ತರುಣಿಯನ್ನೂ, ಫಾತಮೆಯನ್ನೂ ಚೆನ್ನಾಗಿ ಹೆಡಮುರಿಗೆ ಬಿಗಿದು, ಆ ಅಟ್ಟದಿಂದಿಳಿಸಿಕೊಂಡು ನಡೆದರು!

ಸಮೀಪದ ರಾಜಪಥದಲ್ಲಿ ಗಂಡಸರೂ, ಹೆಂಗಸರೂ, ಹುಡುಗರೂ ಸೇರಿ ಸಾವಿರಗಟ್ಲೆ ಜನರು ಫಿರಂಗಿಗಳ ಬಂದಿಗಳಾಗಿ ನಿಂತುಕೊಂಡಿದ್ದರು. ಅವರ ಸುತ್ತಲೂ ಬಿಚ್ಚುಗತ್ತಿ-ಬಂದೂಕುಗಳನ್ನು ಧರಿಸಿದಂಥ ಹಲವು ಜನ ಫಿರಂಗಿ ಸೈನಿಕರು ಪಹರೆ ಮಾಡುತ್ತಿದ್ದರು. ಫಾತಮೆಯನ್ನೂ, ತರುಣಿಯನ್ನೂ ಆ ಕೈದಿಗಳ ಗುಂಪಿನಲ್ಲಿ ಒಯ್ದು ನಿಲ್ಲಿಸಿದರು. ಸಮೀಪದಲ್ಲಿಯೇ ಇನ್ನೂ ಯುದ್ಧ ನಡೆದಿದೆಯೆಂಬದು ಆಗ ಕೇಳಬರುತ್ತಿರುವ ಮದ್ದು-ಗುಂಡುಗಳ ಸಪ್ಪಳದಿಂದ ತಿಳಿಯಬರುತ್ತಿತ್ತು. ಒಬ್ಬ ಸನ್ಮಾನನೀಯ ವೃದ್ಧ ಮುಸಲ್ಮಾನನು ಆ ತರುಣಿಯ ಪಕ್ಕದಲ್ಲಿ ನಿಂತುಕೊಂಡಿದ್ದನು. ಅವನು ಆವಳನ್ನು ಕುರಿತು:—"ತಂಗೀ, ನಿಮ್ಮನ್ನು ಸಂರಕ್ಷಿಸುವರಾರೂ ಇರಲಿಲ್ಲವೇ? ಈ ಪ್ರಸಂಗದಲ್ಲಿ ನಿಜಸಂಗತಿ ತಿಳಿಸಲು ನಾಚಬೇಡ. ನಾನು ನಿನ್ನ ತಂದೆಯ ವಯಸ್ಸಿನ ಮುದುಕನು. ನನ್ನೊಡನೆ ಮಾತಾಡಲಿಕ್ಕೆ ನಾಚುವ ಕಾರಣವಿಲ್ಲ," ಎನ್ನಲು ತರುಣಿಯು:—"ಅಪ್ಪಾ ಗೃಹಸ್ಥರೇ,

ಈ ಪ್ರಪಂಚದಲ್ಲಿ ನನ್ನನ್ನು ಸಂರಕ್ಷಿಸುವಂತಹ ಹಿರಿಯರಾರೂ ಇರುವದಿಲ್ಲ. ಒಬ್ಬ ಮುದುಕ ಸೇವಕನಿದ್ದನು. ಫಿರಂಗಿಗಳು ಅವನನ್ನು ಗುಂಡಿನಿಂದ ಗಾಯಪಡಿಸಿ, ನಮ್ಮನ್ನಿಲ್ಲಿಗೆ ಹಿಡತಂದಿರುತ್ತಾರೆ". ಎಂದು ಉಸುರಿದಳು.

ಆ ತರುಣಿಯ ಅಸಾಮಾನ್ಯ ರೂಪ-ಲಾವಣ್ಯಗಳನ್ನು ನೋಡಿ ಆ ಮುದುಕನು ಮತ್ತೆ:—"ತಂಗೀ, ನೀನಿನ್ನೂ ಚಿಕ್ಕವಳು. ನಿನ್ನಂಥ ಶ್ರೇಷ್ಠ ಸುಂದರಿಯು ಈ ಹಿಂದುಸ್ಥಾನದಲ್ಲೇ ವಿರಳ. ಇಂತಹ ನೀನು ಈ ಫಿರಂಗಿಗಳ ಹಸ್ತಗತವಾದರೆ ನಿನ್ನ ದುರ್ದೆಸೆಗೆ ಪಾರವೇ ಉಳಿಯಲಿಕ್ಕಿಲ್ಲ? ನೀನು ಮುಸಲ್ಮಾನರ ಮಗಳು. ಸಾಯಲಿಕ್ಕೆ ಕಲಿತಿಲ್ಲವೆ?" ಎಂದು ಪ್ರಶ್ನೆ ಮಾಡಲು, "ಕಲಿತಿರುವೆನು; ಚೆನ್ನಾಗಿ ಕಲಿತಿರುವೆನು. ನನ್ನ ಬಳಿಯಲ್ಲಿ ಜಾಲಿಮವಾದ ವಿಷವಿದೆ ಅವಕಾಶವು ದೊರೆಯದ್ದರಿಂದ ತಿನ್ನಲಿಲ್ಲ. ಸಮಯ ದೊರೆತ ಕೂಡಲೆ ಉಪಯೋಗಿಸುವೆನು." ಎಂದು ಆ ತರುಣಿಯು ಉತ್ತರವಿತ್ತಳು. "ಹಾಗೆಯೇ ಮಾಡು; ಅಲ್ಪ ಸ್ವಲ್ಪ ಹೆಚ್ಚಾಗಿದ್ದರೆ ಈ ನನ್ನ ಸೊಸೆಗೂ ಕೊಡು. ನನ್ನ ಮಗನು ಅಸದಖಾನನ ಕೂಡ ಕಲೆತು ಫಿರಂಗಿಗಳೊಡನೆ ಯುದ್ಧ ಮಾಡುತ್ತಿರುವನು. ನಾನು ಮುದುಕನೊಬ್ಬನೇ ಮನೆಯಲ್ಲಿದ್ದದರಿಂದ ಇವಳನ್ನು ಈ ಫಿರಂಗಿಗಳ ಉಪಟಳದಿಂದ ಸಂರಕ್ಷಿಸಲಿಕ್ಕೆ ಅಸಮರ್ಥನಾದೆನು."

ಅಷ್ಟರಲ್ಲಿ ಆ ಮಾನನೀಯ ವೃದ್ಧನನ್ನು ಕುರಿತು ತಾನೂ ಬಂದಿಯಾಗಿದ್ದ ಒಬ್ಬ ಅಂಗಡಿಕಾರನು:—"ಹುಜೂರ, ನಿಮಗೆ ಈ ಮೊದಲೇ ತಿಳಿಸಲಿಲ್ಲವೆ ಈ ಸಪ್ತಗ್ರಾಮವನ್ನು ಬಿಟ್ಟು ಹೋಗಿರೆಂದು? ಈ ದೇಶದ ದುರವಸ್ಥೆಯನ್ನು ತಿಳಿಯದ ನೀವು ಈ ಸಂಕಟಕ್ಕೆ 'ಗುರಿಯಾಗಬೇಕಾಯಿತು" ಎಂದಂದನು. ಅದಕ್ಕೆ ಆ ವೃದ್ಧನು:—"ಹೌದಪ್ಪಾ-ಹೌದು. ಶಹಾನ್‌ಶಹಾನೂರುದ್ದೀನ ಮಹಮ್ಮದ ಜಹಾಂಗೀರ ಬಾದಶಹನ ರಾಜ್ಯದಲ್ಲಿ ಈ ಪ್ರಕಾರದ ಅನನ್ವಿತಗಳು ನಡೆದಾವೆಂಬದು ನನಗೆ ತಿಳಿಯಲಿಲ್ಲ ಕಂಡೆಯಾ?" ಎಂದು ಗಟ್ಟಿಯಾಗಿ ಒದರಿದನು.

"ಫೌಜದಾರ ಕಲಿಮುಲ್ಲಾಖಾನನು ಅಫು-ಮದಗ್ರಸ್ತನು; ಸುಭೇದಾರನಾದ ಮೊಕರಮ್‌ಖಾನನು ಇಲ್ಲಿಗೆ ಬಹು ದೂರವಾದ ಜಹಾಂಗೀರ ನಗರದಲ್ಲಿ. ಬಾದಶಹನಂತೂ ಅದಕ್ಕೂ ದೂರವಾದ ಆಗ್ರಾದಲ್ಲಿ

ಯೋ ದಿಲ್ಲಿಯಲ್ಲಿಯೋ? ಸರಕಾರೀ ಲೆಕ್ಕದಲ್ಲಿ ಮಾತ್ರ ಸಪ್ತಗ್ರಾಮವು ದಿಲ್ಲೀಬಾದಶಹನ ಫೌಜದಾರನ ವಶದಲ್ಲಿಯೆಂದು; ಆದರೆ ಇಲ್ಲಿ ಫಿರಂಗಿ ದಸ್ಯುಗಳ ಅನಿಯಂತ್ರಿತ ಸತ್ತೆಯೇ ಹೆಚ್ಚಾಗಿ ನಡೆಯುತ್ತಲಿದೆ.'' ಎಂದು ನುಡಿದ ಆ ಅಂಗಡಿಕಾರನಿಗೆ ಆ ವೃದ್ಧನು ಒಳ್ಳೇ ಆವೇಶದಿಂದ:-''ತಮ್ಮಾ ಅಂಗಡಿಕಾರನೇ, ನಾನು ಹಣ್ಣಾದ ಮುದುಕನಾಗಿದ್ದರೂ, ನನ್ನ ಆಯುಷ್ಯವೆಲ್ಲ ರಣಭೂಮಿಯಲ್ಲೇ ಕಳೆದಿದೆ. ನನ್ನ ಮಗನು ಪ್ರಸಿದ್ಧ ಗೋಲಂದಾಜನು. ಅಸದಖಾನನಿರುವ ವರೆಗೆ ಬಾದಶಹನ ಪ್ರಜೆಗಳಿಗೆ ಯಾವ ಪ್ರಕಾರದ ಭಯವೂ ಉಂಟಾಗಲಾರದೆಂದು ಅವನು ಹೇಳುತ್ತಿರುತ್ತಾನೆ.'' ''ತಾವನ್ನುವದು ನಿಜ, ಅಸದಖಾನನು ಪ್ರಖ್ಯಾತವೀರನು; ಆದರೆ ಕಲಿಮುಲ್ಲಾಖಾನನು ನೀಚನು. ರಾಜ-ಪ್ರಜಾದ್ರೋಹಿಯು. ಅವನ ಕೈಳಗಿನವರು ಅವನಿಗಿಂತಲೂ ತಾಯಿಗ್ಗಂಡರು. ಪಾಷಾಣಹೃದಯಿಗಳು. ಅಂದಮೇಲೆ ಬರೇ ಅಸದಖಾನರೊಬ್ಬರು ಮಾಡುವದೇನು?''

''ತಮ್ಮಾ, ನಿನ್ನ ಮಾತು ನಿಜವು. ನಾನು ಈ ಸಪ್ತಗ್ರಾಮಕ್ಕೆ ಬಂದು ಸಂಕಟದಲ್ಲಿ ಸಿಕ್ಕು ಈಗ ಏನನ್ನು ಕಲಿತಿರುವೆನೋ, ಜನ್ಮ-ಜನ್ಮಾಂತರದಲ್ಲಿಯೂ ನಾನು ಇದನ್ನು ಮರೆಯಲಿಕ್ಕಿಲ್ಲ. ಈ ದೇಹದೊಳಗಿನ ಪ್ರಾಣವು ಹೊರಹೊಡುವಷ್ಟರಲ್ಲಿ ಈ ಜೀರ್ಣದೇಹವು ಒಮ್ಮೆಯಾದರೂ ಬಾದಶಹನ ಬಳಿಗೆ ಹೋದದ್ದಾದರೆ, ಈ ಬಂಗಾಲಸುಭೆಯೊಳಗಿನ ಫಿರಂಗಿಗಳ ಅತ್ಯಾಚಾರವನ್ನು ಕೂಡಲೆ ನಿಲ್ಲಿಸುವ ಎತ್ತುಗಡೆ ಮಾಡುವೆನು.''

ಹೀಗೆ ಅವರಲ್ಲಿ ಸಂಭಾಷಣವು ನಡೆದಿರಲು, ಒಬ್ಬ ಪೋರ್ತುಗೀಜ ದಳವಾಯಿಯು ಕುದುರೆಯನ್ನೋಡಿಸುತ್ತ ಅಲ್ಲಿಗೆ ಬಂದನು. ಅವನನ್ನು ಕಂಡು ಎಲ್ಲ ಕೈದಿಗಳೂ ಗದಗುಟ್ಟಿ ನಡುಗಹತ್ತಿದರು. ಆಗ ಆ ದಳವಾಯಿಯು ಅಲ್ಲಿಯ ಒಬ್ಬ ಫಿರಂಗಿಪಹರೆಯವನನ್ನು ಕುರಿತು:—ಎಲೋ, ನಿಮ್ಮ ನಾಯಕನೆಲ್ಲಿ? ಎಂದು ಕೇಳಿದನು. ಕೂಡಲೆ ಆ ಪಹರೆಯವನು ಓಡುತ್ತ ಹೋಗಿ ತಮ್ಮ ಒಡೆಯನನ್ನು ಕರೆತಂದನು. ಆಗ ಆ ದಳವಾಯಿಯು ಆ ಪಹರೆಯವರ ಮುಖ್ಯಸ್ಥನನ್ನು ಕುರಿತು:—''ಈ ಎಲ್ಲ ಕೈದಿಗಳನ್ನು ಬಿಟ್ಟು ಬಿಡು'' ಎಂದು ಅಪ್ಪಣೆ ಮಾಡಿದನು. ಆ ನಾಯಕನು ವಿಸ್ಮಯದಿಂದ:—''ಅದೇಕೆ? ಆಲ್‌ಭಾರೇಜ ಪಾದ್ರಿಯು ಇವರನ್ನೆಲ್ಲ

ಹುಗ್ಗುಳಿಗೆ ಸಾಗಿಸಿಕೊಂಡೊಯ್ಯಬೇಕೆಂದು ಅಪ್ಪಣೆ ಮಾಡಿರುವನಲ್ಲ!" ಎಂದನು. "ಈ ಫಿರಂಗಿಪಾದ್ರಿಗಳ ಉತ್ಪಾತಕ್ಕಾಗಿಯೇ ನಮ್ಮ ಪೋರ್ತುಗೀಜರ ರಾಜ್ಯವು ನಾಮಶೇಷವಾಗುವ ಪ್ರಸಂಗ ಬಂದಿದೆ. ಆಡ್ಮಿರಾಲ ಡಿಸೋಝಾನ ಅಪ್ಪಣೆಯ ಮೇರೆಗೆ ನೀನು ಈಗ ಈ ಬಂದಿಗಳನ್ನು ಮುಕ್ತಮಾಡು. ನಮ್ಮ ಎದುರಿನಲ್ಲಿ ಗೋಕುಲ ಬಿಹಾರಿಯ ಸೈನ್ಯವೂ, ಹಿಂಬದಿಯಲ್ಲಿ ಅಸದಖಾನನ ಸೈನ್ಯವೂ ಕಲೆತು, ನಮ್ಮನ್ನು ನುಗ್ಗು ಮಾಡುತ್ತಲಿವೆ. ಗೋಕುಲನ ಒಬ್ಬ ಬಂಗಾಲೀ ಸೈನಿಕನಂತೂ ನಮ್ಮ ಎಲ್ಲ ತೋಫುಗಳನ್ನು ಕೈವಶ ಮಾಡಿಕೊಂಡಿರುತ್ತಾನೆ. ಆದುದರಿಂದ ಇಲ್ಲಿ ನಿನ್ನ ಬಳಿಯಲ್ಲಿ ಎಷ್ಟು ದಂಡು ಇರುವದೋ ಅದನ್ನೆಲ್ಲ ಬೇಗನೆ ಮುಂದಕ್ಕೆ ಕಳಿಸು" ಎಂದು ಹುಕುಂ ಮಾಡಿ ಕುದುರೆಯನ್ನೋಡಿಸುತ್ತ ನಡೆದನು.

ಸೇನಾಪತಿಯ ಅಪ್ಪಣೆಯ ಮೇರೆಗೆ ಎಲ್ಲ ಕೈದಿಗಳೂ ಬಂಧಮುಕ್ತರಾದರು. ಸಪ್ತಗ್ರಾಮವಾಸಿಗಳಾದ ಆಬಾಲವೃದ್ಧರೂ, ಆ ಫಿರಂಗಿ ಸೇನಾಪತಿಯಾದ ಡಿಸೋಝಾನನ್ನು ಆಶೀರ್ವದಿಸುತ್ತ ದಾರಿಸಿಕ್ಕತ್ತ ಓಡಹತ್ತಿದರು. ಫಿರಂಗಿಗಳ ದಂಡು ಸಾಲುಗಟ್ಟಿ ಸಾಗಿಹೋಯಿತು ನಮ್ಮ ಆ ಸನ್ಮಾನನೀಯ ವೃದ್ಧ ಮುಸಲ್ಮಾನನು ತನ್ನ ಸೊಸೆ, ಫತೇಮಾ ಹಾಗು ಆ ತರುಣಿಯರೊಡನೆ ಅಲ್ಲಿಯೇ ನಿಂತುಕೊಂಡಿದ್ದನು. ಅಲ್ಲಿಯ ಗುಲ್ಲು ಕಡಿಮೆಯಾದ ಬಳಿಕ ಆ ಮುದುಕನು ಆ ತರುಣಿಯನ್ನು ಕುರಿತು:- "ತಂಗೀ, ನೀವಿನ್ನು ಎಲ್ಲಿಗೆ ಹೋಗುವಿರಿ?" "ಸಮೀಪದಲ್ಲಿಯೇ ನಮ್ಮ ಮನೆಯಿದೆ. ಅಲ್ಲಿಗೇ ಹೋಗುತ್ತೇವೆ" "ಅಲ್ಲಿ ನಿಮ್ಮವರಾರು ಇರುತ್ತಾರೆ?" "ಯಾರೂ ಇರುವದಿಲ್ಲ. ಆ ನಮ್ಮ ವೃದ್ಧ ಸೇವಕನು ಇನ್ನೂ ಸತ್ತಿರದಿದ್ದರೆ ಅವನೊಬ್ಬನಿರುವನು." "ನಡೆಯಿರಿ ಹಾಗಾದರೆ, ಅವನ ಗತಿಯೇನಾಗಿದೆಯೆಂಬದನ್ನು ನೋಡುವಾ" ಎಂದಂದು ಆ ಮುದುಕ ಮುಸಲ್ಮಾನನು ಆ ಮೂವರು ಹೆಣ್ಣುಮಕ್ಕಳೊಡನೆ ಆ ತರುಣಿಯ ಮನೆಗೆ ನಡೆದನು.

ಅವರೆಲ್ಲರೂ ಮನೆಯೊಳಗೆ ಹೊಕ್ಕು ಹಬೀಬನ ಬಳಿಗೆ ಹೋಗಿ ನೋಡುತ್ತಾರೆ, ಅವನಿನ್ನೂ ಮೂರ್ಛೆಯಿಂದ ತಿಳಿದಿದ್ದಿಲ್ಲ. ಕೂಡಲೆ ಘಾತನು ಹಾಗು ಆ ತರುಣಿಯು ಅವನನ್ನು ಹಲವು ಬಗೆಯಿಂದ ಉಪಚರಿಸಲು, ಅವನು ಎಚ್ಚತ್ತನು. ಬಳಿಕ ಆ ಸನ್ಮಾನನೀಯ ಗೃಹಸ್ಥನು ಆ

ತರುಣಿಯನ್ನುದ್ದೇಶಿಸಿ:—ತಂಗೀ, ಇನ್ನು ಈ ಸಪ್ತಗ್ರಾಮದಲ್ಲಿರುವದು ಹಿತವಲ್ಲ. ಈಗಲೇ ಬೇರೆ ಕಡೆಗೆ ಹೊರಡೋಣ ನಡೆಯಿರಿ, ಎನ್ನಲು,

"ತ್ರಿವೇಣಿಯ ಸಂಗಮದ ಘಾಟನಲ್ಲಿ ನಮ್ಮ ನಾವು ಇರುತ್ತದೆ" ಎಂಬ ತರುಣಿಯ ಮಾತಿಗೆ, ಆ ವೃದ್ಧನು:—"ಹಾಗಾದರೆ ಅಲ್ಲಿಗೇ ಹೋಗೋಣ ನಡೆಯಿರಿ" ಎಂದು ಹೇಳಿ, ಅವರೊಡನೆ ಅಲ್ಲಿಂದ ಪೂರ್ವದಿಕ್ಕಿಗಿದ್ದ ತ್ರಿವೇಣೀ ಸಂಗಮದ ಕಡೆಗೆ ಸಾಗಿದನು.

ಕೆಲ ದಾರಿಯನ್ನು ಕ್ರಮಿಸಿದ ಬಳಿಕ ಅವರೆಲ್ಲರೂ ಒಂದು ವಿಸ್ತೃತವಾದ ರಾಜಬೀದಿಯನ್ನು ಸೇರಿದರು. ಆ ಮಾರ್ಗದಲ್ಲಿ ರಾಶಿಗಟ್ಟಲೆ ಹೆಣಗಳು ಅಸ್ತವ್ಯಸ್ತವಾಗಿ ಬಿದ್ದಿದ್ದವು. ತೋಫಿನ ಗುಂಡುಗಳ ಹೊಡತದಿಂದ ಮಾರ್ಗದ ಪಕ್ಕಗಳಲ್ಲಿಯ ಭವ್ಯವಾದ ಇಮಾರತುಗಳು ನಾಶಹೊಂದಿದ್ದು, ಕೆಲಕೆಲವುಗಳು ಧಗಧಗನೆ ಉರಿಯಹತ್ತಿದ್ದವು. ಆ ಮುಸಲ್ಮಾನ ವೃದ್ಧನು ಅಲ್ಲಿಂದ ತ್ರಿವೇಣಿಗೆ ಹೋಗುವ ಮಾರ್ಗವನ್ನು ಹುಡುಕಹತ್ತಿದ್ದನು. ಇಷ್ಟರಲ್ಲಿ ಘಾತಮೆಯ ಒಡತಿಯಾದ ಆ ತರುಣಿಯು ಮಾರ್ಗದಲ್ಲಿ ಬಿದ್ದಿದ್ದ ಒಬ್ಬ ಹಿಂದೂ ತರುಣ ಸೈನಿಕನ ದೇಹದ ಮೇಲೆ ಬಿದ್ದು, ಎದೆ ಎದೆ ಬಡಕೊಳ್ಳುತ್ತ ಅಳಹತ್ತಿದಳು! ಆ ಸ್ಥಿತಿಯನ್ನು ಕಂಡು ಮುದುಕನು ವಿಸ್ಮಯವಿಸ್ಫೂರಿತನಾದನು. ಕೆಲ ಕ್ಷಣಗಳ ನಂತರ ಅವನು ಅವಳನ್ನು ಕುರಿತು:—"ತಂಗೀ, ಇವನು ನಿನಗೇನಾಗಬೇಕು?" ಎಂದು ಪ್ರಶ್ನೆಮಾಡಲು, ಆಕೆಯು:—"ಇವನೇ ನನ್ನ ಗಂಡನು" ಎಂದು ಬಿಕ್ಕಿಬಿಕ್ಕಿ ಅಳುತ್ತ ಹೇಳಿದಳು.

ಸಮೀಪದಲ್ಲಿ ನಿಂತಿದ್ದ ಘಾತಮೆಯು ಆಶ್ಚರ್ಯಭರದಿಂದ ತರುಣಿಯ ಕಡೆಗೆ ನೋಡಹತ್ತಿದಳು! ಅದನ್ನು ಕಂಡು ಆ ತರುಣಿಯು ಮತ್ತೆ ಮತ್ತೆ:—"ನನ್ನ ಗಂಡನು ನನ್ನ ಮೇಲೆ ಸಿಟ್ಟಾಗಿ ನನ್ನನ್ನು ಬಿಟ್ಟುಹೋದನಲ್ಲ!" ಎಂದು ಆಕ್ರೋಶ ಮಾಡಹತ್ತಿದಳು. ಬಳಿಕ ವೃದ್ಧನು:—ತಂಗೀ, ತುಸ ಹೊತ್ತಿನ ಹಿಂದೆ ನಿನ್ನನ್ನು ರಕ್ಷಿಸುವವರಾರೂ ಇಲ್ಲೆಂದು ನೀನು ಹೇಳಿರಲಿಲ್ಲವೆ? ಎಂದು ಪ್ರಶ್ನ ಮಾಡಲು, ತರುಣಿಯು ಆ ಹಿಂದೂ ಸೈನಿಕನ-ಬಂಗಾಲೀ ತರುಣನ-ಮಯೂಖನ-ಮುಖವನ್ನು ಚುಂಬಿಸುತ್ತ:—"ನನ್ನ ಈ ಪ್ರಿಯಕರನು ಈ ಸಪ್ತಗ್ರಾಮದಲ್ಲಿರುವನೆಂಬದು ಆಗ ನನಗೆ ಗೊತ್ತಿರಲಿಲ್ಲ" ಎಂದು ಉತ್ತರವನ್ನಿತ್ತು ಮತ್ತಿಷ್ಟು ಆಕ್ರೋಶಮಾಡಹತ್ತಿದಳು.

ವೃದ್ಧ ಮುಸಲ್ಮಾನನು ಆ ತರುಣನನ್ನು ಸೂಕ್ಷ್ಮರೀತಿಯಿಂದ ಪರೀಕ್ಷಿಸಿದನು. ಆತನ ಪ್ರಾಣವಾಯುವಿನ್ನೂ ಅಡಗಿರಲಿಲ್ಲ. ಆಗ ಅವನೂ ವೃದ್ಧ ಹಬೀಬನೂ ಕೂಡಿ ಆ ಗಾಯ ಹೊಂದಿದ ಮಯೂಖನನ್ನು ತ್ರಿವೇಣೀ ಸಂಗಮದೊಳಗಿನ ಆ ತರುಣಿಯ ನಾವಿಗೆ ಹೊತ್ತುಕೊಂಡೊಯ್ದರು. ಕೆಲ ಹೊತ್ತಿನಲ್ಲಿಯೇ ಅವರ ನಾವು ಗಂಗಾ ಪ್ರವಾಹದಲ್ಲಿ ಕಾಣದಂತಾಯಿತು.

---

ಒನೆಯ ತರಂಗೆ.

—(೧)—

## ವಿಚಿತ್ರ ಘಟನೆ.

ಜಹಾಂಗೀರ ನಗರದ ಕೋಟೆಯೊಳಗಿನ ನದೀ ತೀರದ ಶೀತಲ ಮಹಾಲಿನಲ್ಲಿ ಕುಳಿತು ಬಂಗಾಲದ ಸುಭೇದಾರನಾದ ಮೊಕರಮ್‌ಖಾನನು ವಿಶ್ರಾಂತಿ ಹೊಂದುತಲಿದ್ದನು. ಆಗ ಅಸಹ್ಯವಾದ ಸೆಕೆಯಾಗುತ್ತಿತ್ತು. ಒಬ್ಬ ದಾಸಿಯು ಸುಭೇದಾರನ ಪಾದಸೇವೆ ಮಾಡುತಲಿದ್ದಳು; ಎರಡು ಮೂರು ಜನ ದಾಸಿಯರು ನವಿಲುಗರಿಯ ಬೀಸಣಿಕೆಗಳಿಂದ ಮೆಲ್ಲ ಮೆಲ್ಲನೆ ಗಾಳಿ ಬೀಸುತ್ತಿದ್ದರು; ಹಾಗು ಇನ್ನೋರ್ವ ಚಲುವೆಯಾದ ನವ ಯುವತಿಯು ಸುಗಂಧ ಮಿಶ್ರಿತ ಶೀತಲ ವಾರಿಯನ್ನು ತುಂಬಿದಂಥ ಸುಂದರ ಹೂಜಿಯನ್ನು ಹಿಡಿದುಕೊಂಡು ಸುಭೇದಾರನ ಎದುರಿಗಿನ ಒಂದು ಮೂಲೆಯಲ್ಲಿ ನಿಂತುಕೊಂಡಿದ್ದಳು. ಆಗ ಆ ಕೋಣೆಯೊಳಗಿನವರಾರೂ ಪಿಟ್ಟೆಂದು ಮಾತಾಡುತ್ತಿರಲಿಲ್ಲ. ಇಂಥ ಸಮಯದಲ್ಲಿ ಒಬ್ಬ ಖೋಜಾನು ಬಂದು ಬಾಗಿಲಲ್ಲಿಯೇ ನಿಂತು ಸುಭೇದಾರನನ್ನು ಅಭಿವಂದಿಸಿದನು. ಸೆಕೆಯ ತಾಪದಿಂದ ಸುಭೇದಾರನ ಕಣ್ಣುಗಳು ಅರ್ಧಮರ್ಧ ಮುಚ್ಚಲ್ಪಟ್ಟಿದ್ದವು. ಖೋಜಾನ ಧ್ವನಿಯನ್ನು ಕೇಳಿ ಅತ್ಯಂತ ವಿರಕ್ತನಾದ ಅವನು ಆಕಳಿಸುತ್ತ-ಆಕಳಿಸುತ್ತ:—ಯಾಕೆ ಬಂದಿರುವೆ? ಎಂದು ಪ್ರಶ್ನಮಾಡಲು, ಖೋಜಾನು ಮತ್ತೆ ಅಭಿವಂದಿಸುತ್ತ:—ಸನ್ನಿಧಿಯ ಸೇವಕನಾದ ಹರೇಕೃಷ್ಣರಾಯನು ಮಹಾಲಿನಲ್ಲಿ ತಮ್ಮ ಮಾರ್ಗ ನಿರೀಕ್ಷಿಸುತ್ತಿರುವನು, ಎಂದು ಉತ್ತರವನ್ನಿತ್ತನು.

"ಇಂಥ ಅವೇಳೆಯಲ್ಲಿ ಹರೇಕೃಷ್ಣನೇಕೆ ಬಂದಿರುವನು?"

"ಸುಭೇದಾರರು ಈಗ ಶೀತಲ ಮಹಾಲಿನಲ್ಲಿ ವಿಶ್ರಾಂತಿ ಪಡೆಯುತ್ತಿರುವರೆಂದು ನಾನು ಅವನಿಗೆ ತಿಳಿಸಿದೆನು; ಆದರೆ ಬಾದಶಹರಿಂದ ಈಗ ತಾನೆ ಒಬ್ಬ ಸವಾರನು ಅವಶ್ಯದ ಕೆಲಸಕ್ಕಾಗಿ ಬಂದಿರುವನಾದ್ದರಿಂದ ನಾನು ಈಗಲೆ ಸುಭೇದಾರರನ್ನು ಕಾಣಬೇಕಾಗಿದೆಯೆಂದು ಆತನು ಹೇಳುತ್ತಾನೆ.

ಸುಭೇದಾರನು ಮತ್ತಿಷ್ಟು ವಿರಕ್ತನಾಗಿ:—"ಹರೇಕೃಷ್ಣನು ಸಭಾಗೃಹದಲ್ಲಿ ಬಂದಿರಲಿ. ನಾವು ಈಗ ಅಲ್ಲಿಗೇ ಬರುವೆವು."

ಡೆಪೂಟಿ ಅಮಲ್‌ದಾರನಾದ ಹರೇಕೃಷ್ಣರಾಯನು ಬಂಗಾಲೀ ಕಾಯಸ್ಥ ಬ್ರಾಹ್ಮಣನು. ಕಪ್ಪು ವರ್ಣದ ಗಿಡ್ಡ ದೇಹದವನು. ಬುದ್ಧಿಶಾಲಿಯಾದುದರಿಂದ, ಸಾಮಾನ್ಯ ಅವಸ್ಥೆಯಿಂದ ಅವನು ಇಷ್ಟು ಉನ್ನತ ಸ್ಥಿತಿಗೇರಿದ್ದನು. ಆಗಿನ ಕಾಲಕ್ಕೆ ಬ್ರಾಹ್ಮಣರಿಗೆ ಇದಕ್ಕೂ ಹೆಚ್ಚಿನ ದರ್ಜೆಯ ನೌಕರಿಯು ಆ ಮುಸಲ್ಮಾನೀ ಅಮದಾನಿಯಲ್ಲಿ ಸಿಗುತ್ತಲೇ ಇರಲಿಲ್ಲ. ಇರಲಿ. ಬಾದಶಹನಿಂದ ಕಳಿಸಲ್ಪಟ್ಟ ಸವಾರನು ದಿವಾಣಖಾನೆಯಲ್ಲಿ ನಿಂತುಕೊಂಡಿದ್ದನು. ಬಾದಶಹನ ಪತ್ರ ಅಥವಾ ಫರ್ಮಾನ-ಹುಕುಮನ್ನು ಸ್ವತಃ ಸುಭೇದಾರನ ಹೊರತು ಅನ್ಯರಾರೂ ಸವಾರನಿಂದ ತಕ್ಕೊಳ್ಳುವಂತಿರಲಿಲ್ಲ. ಅದರಿಂದ ಹರೇಕೃಷ್ಣನು ಅತ್ತಿಂದ ಇತ್ತ ಇತ್ತಿಂದ ಅತ್ತ ಅಡ್ಡಾಡುತ್ತ ಸುಭೇದಾರನ ಮಾರ್ಗ ನಿರೀಕ್ಷಿಸುತ್ತಿದ್ದನು. ಇಷ್ಟರಲ್ಲಿ ಆ ದಿವಾಣಖಾನೆಯಲ್ಲಿ ಯಾರೋ ಪ್ರವೇಶಿಸಿದಂತಾಯಿತು. ಹರೇಕೃಷ್ಣನು ಬೆಚ್ಚಿಬಿದ್ದು ಎರಡು ಹೆಜ್ಜೆ ಹಿಂದಕ್ಕೆ ಸರಿದು ನಿಂತನು. ಆಗ ಆ ದಿವಾಣಖಾನೆಯ ಒಂದು ಕಂಬದ ಕಡೆಯಿಂದ:—"ಹರೇಕೃಷ್ಣಾ, ಅಂಜಬೇಡ" ಎಂಬ ಶಬ್ದವಾಯಿತು. ಧ್ವನಿ ಬಂದ ಕಡೆಗೆ ಆ ಡೆಪುಟ ಅಮಲ್ದಾರನು ದಿಟ್ಟಿಸಿ ನೋಡುತ್ತಾನೆ, ಕಾವೀ ಬಣ್ಣದ ಶಾಟಿಯನ್ನು ಹೊತ್ತಂಥ ಒಬ್ಬ ಗೌರ ವರ್ಣದ ಸಂನ್ಯಾಸಿಯು ಆ ಕಂಬದ ಮರೆಗೆ ನಿಂತುಕೊಂಡಿರುತ್ತಾನೆ. ಹರೇಕೃಷ್ಣನು ವಿಸ್ಮಯಬಡುತ್ತ ಅವನಿಗೆ ಸಾಷ್ಟಾಂಗ ನಮಸ್ಕರಿಸಿದನು; ಮತ್ತು:—ಸ್ವಾಮಿನ್, ಎಲ್ಲವೂ ಕುಶಲವಷ್ಟೆ? ಎಂದು ಪ್ರಶ್ನಮಾಡಿದನು.

"ಕುಶಲಾಕುಶಲಗಳ ಬಗ್ಗೆ ಹಿಂವಿನಿಂದ ಮಾತಾಡೋಣವಂತೆ,

ಅತ್ಯಂತ ಜರೂರಿಯು ಕೆಲಸಕ್ಕಾಗಿ ನಾನು ಈಗ ಇಲ್ಲಿಗೆ ಬಂದಿರುತ್ತೇನೆ. ನೀನು ನನಗೆ ಸುಭೇದಾರನ ಭೆಟ್ಟಿ ಮಾಡಿಸು.'' ''ಯಾರು ಬಂದಿರುವ ರೆಂದು ಹೇಳಲಿ? ತಮ್ಮ ಪೂರ್ವಾಶ್ರಮದ ಹೆಸರನ್ನು ತಿಳಿಸಲಿಯಾ?''

''ಛೇ-ಛೇ! ಹಾಗೆ ಹೇಳಬೇಡ. ನಾನು ನಿನ್ನ ಗುರುವೆಂದು ಹೇಳಿ ಭೆಟ್ಟಿಮಾಡಿಸು'' ''ಅವರ ಬಳಿಯು ಕೆಲಸವೇನು?'' ''ನನ್ನ ಆಪ್ತನೊಬ್ಬನ ಕನ್ಯೆಯುನ್ನು ಫಿರಂಗಿಗಳು ಅಪಹರಿಸಿ ಹುಗಳಿಗೆ ಹಿಡಿದೊಯ್ದಿರುತ್ತಾರೆ. ಸುಭೇದಾರನಿಗೆ ಹೇಳಿ ಅವಳ ಬಿಡುಗಡೆಯ ವ್ಯವಸ್ಥೆಯನ್ನಷ್ಟು ಮಾಡಿಕೊಡು.''

''ಸ್ವಾಮಿನ್, ಈ ಕೆಲಸವು ಸಾಮಾನ್ಯವಾದುದಲ್ಲ; ಬಹು ಕಠಿಣವಾದದ್ದು.''

''ನನಗದು ಗೊತ್ತಿದೆ.''

''ಫಿರಂಗಿಗಳು ಸುಭೇದಾರರ ಪ್ರೀತಿಪಾತ್ರರು.''

''ಅದನ್ನೂ ನಾನು ಬಲ್ಲೆನು.''

''ಹಾಗಾದರೆ ತಮ್ಮ ಕೆಲಸ ಕೈಗೂಡಲಿಕ್ಕೆ ಉಪಾಯವಾವುದನ್ನು ಮಾಡಬೇಕು?''

''ನೀನು ನಿಮ್ಮ ಸುಭೇದಾರನಿಗೆ ಹೇಳಬೇಕೇನೆಂದರೆ, ನನ್ನ ಈ ಮಾತನ್ನು ನಡಿಸಿಕೊಡದಿದ್ದರೆ ಒಂದು ತಿಂಗಳಲ್ಲಿ ಈ ಬಗ್ಗೆ ಬಾದಶಹನ ಎದುರಿಗೆ ಗುಲ್ಲು ಆಗುವದೆಂದು''

''ಸ್ವಾಮಿನ್, ತಾವು ಅನ್ನುವದಾದರೂ ಏನು? ಆ ಅತ್ಯಂತ ಕಠಿಣ ಕಾರ್ಯಕ್ಕೆ ಪ್ರವೃತ್ತರಾಗುವರಾರು?''

''ನೂರಜಹಾನ ಬೇಗಮಳಿಂದ ಇಲ್ಲವೆ ಆಶಫ್‌ಖಾನನಿಂದ ನಾನು ಇದನ್ನು ಮಾಡಿಸುವೆನು.''

''ಮಹಾಪ್ರಭೋ, ತಮಗೆ ಅಸಾಧ್ಯವಾವುದೂ ಇರುವದಿಲ್ಲ.''

''ಹರೀಕೃಷ್ಣ, ನನ್ನದಿನ್ನೊಂದು ಅಪ್ಪಣೆಯಿದೆ''

''ಅದಾವುದು ಸ್ವಾಮಿನ್?''

''ಇಂದು ಸುಭೇದಾರನು ನಾವನ್ನೇರಿ ಹೊಳೆಯಲ್ಲಿ ವಿಹರಿಸಲಿಕ್ಕೆ ಹೋಗಬಾರದೆಂದು. ನನ್ನ ಆಜ್ಞೆ ಮೀರಿ ಹೋದದ್ದಾರೆ, ಅವನು ಖಂಡಿತ ವಾಗಿ ವಿಪತ್ತಿಗೀಡಾಗುವನು.''

"ಹಾಗೇ ಆಗಲಿ; ಈ ತಮ್ಮ ಆಜ್ಞೆಯನ್ನು ಅವರಿಗೆ ತಿಳಿಸುತ್ತೇನೆ."

ಹೀಗೆ ಅವರೀರ್ವರಲ್ಲಿ ಮೆಲ್ಲಮೆಲ್ಲನೆ ಸಂಭಾಷಣವು ನಡೆದಿರಲು, ನಗಾರಖಾನೆಯಲ್ಲಿ ನಗಾರಿಯು ಬಾರಿಸಹತ್ತಿ ಸುಭೇದಾರನು ದಿವಾಣ ಖಾನೆಯಲ್ಲಿ ಬರುವ ಸೂಚನೆಯಾಯಿತು. ಇಷ್ಟರಲ್ಲಿ ಭಟ್ಟಂಗಿಗಳಿಂದ ಹೊಗಳಿಸಿಕೊಳ್ಳುತ್ತ ಬಂದ ಸುಭೇದಾರ ನೊಕರಮ್‌ಖಾನನು ತನ್ನ ಉಚ್ಚಾಸನವನ್ನೇರಿ ಕುಳಿತನು. ಹರೇಕೃಷ್ಣರಾಯನು ಅವನಿಗೆ ಪದ್ಧತಿಯ ಮೇರೆಗೆ ಕುರ್ನಿಸಾತ್ ಮಾಡಿ, ಬಾದಶಹನಿಂದ ಬಂದ ಸವಾರನನ್ನು ಕರೆದು ಅವನ ಎದುರಿಗೆ ನಿಲ್ಲಿಸಿದನು. ಸವಾರನು ಸುಭೇದಾರನನ್ನು ಅಭಿವಂದಿಸಿ, ಸಂಗಡ ತಂದಿದ್ದ ಥೈಲಿಯನ್ನು ಅಲ್ಲಿಯ ಒಂದು ಉಚ್ಚಾಸನದಲ್ಲಿ ಮಂಡಿಸಿದ್ದ ಬೆಳ್ಳಿಯ ತಬಕದಲ್ಲಿ ಇಟ್ಟನು. ಬಳಿಕ ಸುಭೇದಾರನು ಎದ್ದುನಿಂತು ಆ ಥೈಲಿಗೆ ಮೂರು ಮೂರು ಸಾರೆ ಕುರ್ನಿಸಾತ್ ಮಾಡಿ, ಅದನ್ನು ತನ್ನ ಕೈಯಿಂದ ಮುಟ್ಟಿ, ಹರೇಕೃಷ್ಣನ ಕೈಗಿತ್ತನು. ಕೂಡಲೆ ಸವಾರನೂ ಉಳಿದವರೆಲ್ಲರೂ ಅಲ್ಲಿಂದ ಬೇರೆ ಕಡೆಗೆ ಹೊರಟು ಹೋದರು. ಅಲ್ಲಿಯ ಸೆಕೆಯನ್ನು ತಾಳಲಾರದೆ, ಸುಭೇದಾರನು ತನ್ನ ಸ್ಥಾನದಿಂದೆದ್ದು, ಹರೇಕೃಷ್ಣನನ್ನು ಕುರಿತು:—ಹರೇಕೃಷ್ಣ, ಈ ಥೈಲಿಯನ್ನು ನನ್ನ ನಾವಿಗೆ ತಕ್ಕೊಂಡು ಬಾ. ಇಲ್ಲಿ ಬಹಳ ಸೆಕೆಯಿದೆ. ಅಲ್ಲಿಯೇ ಓದುವಿಯಂತೆ, ಎಂದೆಂದು ಹೊಡಲುದ್ಯುಕ್ತನಾದನು.

ನಾವಿನ ಸಂಗತಿಯು ಕಿವಿಗೆ ಬಿದ್ದ ಕೂಡಲೆ ಹರೇಕೃಷ್ಣನು ನಡುಗುತ್ತ ಹೋಗಿ ಸುಭೇದಾರನಿಗೆ ಅಡ್ಡಾದನು. ಆಗ ಸುಭೇದಾರನು ಅವನ ನಡಗುವಿಕೆಯನ್ನು ಕಂಡು ಹೀಗೇಕೆಂದು ಪ್ರಶ್ನೆ ಮಾಡಿದನು.

"ನಮ್ಮ ಗುರುಗಳು ಬಹು ದೊಡ್ಡ ವಿಪತ್ತಿಗೀಡಾಗಿ ಈ ಜಹಾಂಗೀರ ನಗರಿಗೆ ಬಂದಿರುತ್ತಾರೆ. ಜನಾಬ ಆಲಿಯವರ ಹುಕುಮು ಆದರೆ ಅವರನ್ನು ಎದುರಿಗೆ ಕರೆತಂದು ನಿಲ್ಲಿಸುತ್ತೇನೆ."

"ನಿನ್ನ ಗುರುವಿನ ಇಚ್ಛೆಯೇನಿದೆ?"

"ಹಜರತರೆದುರಿಗೆ ಬಂದು ಅವರು ಸ್ವತಃ ಅರ್ಜಮಾಡಿಕೊಳ್ಳ ಬೇಕೆಂದಿರುವರು"

"ಅವನು ಎಲ್ಲಿರುವನು?" "ಇಲ್ಲಿಯೇ ಇರುವರು" 'ಕರೆಮುಂದಕ್ಕೆ.'

ಆಗ ಆ ಸಂನ್ಯಾಸಿಯು ಕಂಬದ ಮರೆಯಿಂದ ಸುಭೇದಾರನೆ ಎದು

ರಿಗೆ ಬಂದು:—“ನಾರಾಯಣನು ಸುಭೇದಾರನಿಗೆ ಮಂಗಲವನ್ನೀಯಲಿ” ಎಂದು ಹರಸಿ ನಿಂತುಕೊಂಡನು.

ಸುಭೇದಾರನು ಅವನನ್ನು ಕಂಡು ಹರೇಕೃಷ್ಣನನ್ನು ಕುರಿತು:— ನಿನ್ನ ಗುರುವು ಫಕೀರನೇನು? ಎಂದು ಕೇಳಲು, ಹರೇಕೃಷ್ಣನು ಸಲಾಮು ಮಾಡಿ, “ಅಹುದೆ”ಂದು ಗೋಣು ಹಾಕಿದನು.

ಬಳಿಕ ಸುಭೇದಾರನು ಮತ್ತೆ:—ಫಕೀರನು ಸುಭೇದಾರನೆದುರಿಗೆ ಪ್ರಾರ್ಥಿಸುವದೇನು?

ಸಂನ್ಯಾಸಿಯು ತುಸ ಮುಂದಾಗಿ:—ನನ್ನ ಪ್ರಾರ್ಥನೆಯು ತಮ್ಮ ಸಲುವಾಗಿ.

ಸುಭೇದಾರನು ವಿಸ್ಮಿತನಾಗಿ:—ನನ್ನ ಸಲುವಾಗಿಯೇ? ಕಾಫರ, ನಿನಗೆ ಹುಚ್ಚುಗಿಚ್ಚು ಹಿಡಿದಿಲ್ಲವಷ್ಟೆ?

“ಹೀಗೆ ಹುಚ್ಚು ಹಿಡಿಯದಿದ್ದರೆ ಸಂಸಾರವನ್ನು ತ್ಯಜಿಸಿ ಸಂನ್ಯಾಸಿ ಯೇಕಾಗುತ್ತಿದ್ದೆನು? ನನ್ನ ಪ್ರಾರ್ಥನೆಯು ಸತ್ಯವಾಗಿ ತಮಗೋಸ್ಕರ ವಾಗಿಯೇ.”

ಆಗ ಹರೇಕೃಷ್ಣನು ನಡುವೇ ಬಾಯಿಹಾಕಿ:—ಹುಜೂರ, ಇವರು ಕಾಲಜ್ಞರಾದ ಮಹಾತ್ಮರು. ಇವರು ಏನನ್ನು ಹೇಳಬಂದಿರುವರೋ, ವಿಟ್ಟು ಅದನ್ನು ಕೇಳಿಕೊಳ್ಳಬೇಕು.

ದಕ್ಕೆ ಸುಭೇದಾರನು:—ಫಕೀರ, ಏನನ್ನು ಹೇಳಬಂದಿರುವೆಯೋ ಳಿ ಬಿಡು.

ನ್ಯಾಸಿ:—ತಾವು ಇಂದು ನಾವನ್ನು ಆರೋಹಿಸಕೂಡದು.

ೀದಾರ:—ಅದೇಕೆ? ನಾನು ಈಗ ಅಲ್ಲಿಗೇ ಹೊರಟರುತ್ತೇನೆ.

ನ್ಯಾಸಿ:—ಇಂದು ನೌಕಾಯಾನಭ್ರಮಣದಿಂದ ನಿಮಗೆ ವಿಶೇಷ ತ್ತು ಉಂಟಾಗುವ ಯೋಗವಿರುತ್ತದೆ.

ೀದಾರ:—ನಿನಗೆ ಖಂಡಿತವಾಗಿಯೂ ಹುಚ್ಚು ಹಿಡಿದಿದೆ. ಸುವದಕ್ಕಾಗಿ ನೀನು ನಿನ್ನ ಊರಿಂದ ಬಹು ದೂರವಾದ ಈ ಗರಕ್ಕೆ ಬಂದಿರುವೆಯಲ್ಲವೆ?

—ಇಷ್ಟಕ್ಕಾಗಿಯೇ ನಾನು ಬಂದವನಲ್ಲ, ನನ್ನದಿ ಸನೆಯಿದೆ. ನನ್ನ ಆಪ್ತನೊಬ್ಬನ ಮಗಳನ್ನು ಫಿರಂಗಿ

ದಸ್ಯುಗಳು ಅಪಹರಿಸಿಕೊಂಡು ಹುಗುಳಿಗೆ ಒಯ್ದಿರುತ್ತಾರೆ. ಬಾದಶಹ ನೆಂದರೆ ಈಶ್ವರನ ಪ್ರತಿಛಾಯೆಯು. ತಾವು ಅವರ ಪ್ರತಿನಿಧಿಗಳು. ತಮ್ಮ ಅನುಗ್ರಹದ ವಿನಃ ಆ ಅಸಹಾಯ ಬಾಲಿಕೆಯು ಉದ್ಧಾರವಾಗ ಲಾರದು.

ಸುಭೇದಾರ:—ಫಕೀರ, ಫಿರಂಗಿಗಳು ಕಾಳಗದಲ್ಲಿ ರಣಶೂರರು. ಅವರು ಬಾದಶಹನ ಹುಕುಮನ್ನೇ ಇಂಥ ಸಣ್ಣಪುಟ್ಟ ಬಾಬುಗಳಲ್ಲಿ ಮನ್ನಿ ಸುವದಿಲ್ಲ; ಅಂದ ಬಳಿಕ ಅಂಥ ಉದ್ದಾಮರು ನನ್ನ ಹುಕುವನ್ನು ಮನ್ನಿ ಸುವರೇ?

ಸಂನ್ಯಾಸಿ:—ತಾವು ಪ್ರಯತ್ನವನ್ನು ಮಾಡಿಯಂತೂ ನೋಡ ಬೇಕು. ಅವರು ಈ ಪ್ರಸಂಗದಲ್ಲಿ ತಮ್ಮ ಅಪ್ಪಣೆಯನ್ನು ನಿಶ್ಚಯವಾಗಿ ಪಾಲಿಸುವರು.

ಆಗ ಹರೇಕೃಷ್ಣನು ಸುಭೇದಾರನ ಎದುರಿಗೆ ಮೊಣಕಾಲೂರಿ ನಿಂತು ಬೇಡಿಕೊಂಡನೇನಂದರೆ:—ಜನಾಬಆಲಿಯವರು ಹಿಂದುಸ್ತಾನದ ಘನವೀರರು; ಬಾದಶಹನ ದರಬಾರದ ಚಾಲಕರು. ಬಂಗಾಲ ಸುಭೆ ಯಲ್ಲಿ ತಮ್ಮ ಹುಕುಮನ್ನು ಪಾಲಿಸದಂತಹ ಅದಾವ ಉದ್ದಾಮನು ತಲೆಯೆತ್ತಿಕೊಂಡಿರುವನು? ಜನಾಬಆಲಿಯವರ ಬಾಯಿಂದ ಹುಕುಮು ಹೊರಹೊರಡುವಷ್ಟರಲ್ಲಿ ಸಪ್ತಗ್ರಾಮ, ಚಟ್ಟಗ್ರಾಮ, ಹುಗಳಿ ಮುಂ ತಾದವುಗಳಿಂದ ಫಿರಂಗಿ ದಸ್ಯುಗಳನ್ನು ನಾಮಶೇಷ ಮಾಡಬಹುದು.

ಸುಭೇದಾರನು ಗಡ್ಡದ ಮೇಲೆ ಕೈಯೆಳೆಯುತ್ತ:—ಹರೇಕೃಷ್ಣ, ನಿನ್ನ ಮುರವತ್ತಿಗಾಗಿ ನಾನು ಈ ಫಕೀರನ ಅರ್ಜಿಯನ್ನು ಮಂಜೂರಮಾಡಿ ರುತ್ತೇನೆ; ಆದರೆ ಇವನು ಆ ಬಾಲಿಕೆಯನ್ನು ಫಿರಂಗಿಗಳಿಂದ ಕೊಂಡು ಕೊಂಡು ತರತಕ್ಕದ್ದು.

ಸಂನ್ಯಾಸಿಯು ನಡುವೇ ಬಾಯಿಹಾಕಿ:—ಅವರು ಅವಳನ್ನು ಮಾರ ಲಿಕ್ಕೆ ಒಪ್ಪದಿದ್ದರೆ?

ಸುಭೇದಾರ:—ಆಗ ಸಪ್ತಗ್ರಾಮದ ಫೌಜದಾರ ಕಲಿಮುಲ್ಲಾ ಖಾನನಿಗೆ ಹುಕುಂ ಮಾಡಿ, ನಿನ್ನ ಆತ್ಮೀಯಳನ್ನು ಅವರಿಂದ ಬಿಡಿಸಿತಂದು ಕೊಡಿಸುವೆನು.

ಸಂನ್ಯಾಸಿ:—ದುಡ್ಡಿನ ಆಶೆಯಿಂದಾಗಲಿ, ಸುಭೇದಾರರ ಅಂಜಿಕೆ

ಯಿಂದಾಗಲಿ ಪೋರ್ತುಗೀಜ ಸೈನಿಕರು ಆ ಬಾಲಿಕೆಯನ್ನು ಬಿಟ್ಟುಕೊಡ ಲಿಕ್ಕೆ ಒಪ್ಪಿದರೂ ಫಿರಂಗಿಪಾದ್ರಿಗಳು ಅದಕ್ಕೆ ಒಪ್ಪಲಾರರು.

ಸುಭೇದಾರ:—ನೀನು ಅವರಿಂದ ಆಕೆಯನ್ನು ಒಂಡುಕೊಳ್ಳುವ ಪ್ರಯತ್ನ ಮಾಡಿದ್ದೆಯೇನು?

ಸಂನ್ಯಾಸಿ:—ಈ ಹುಡುಗಿಯ ಬಗ್ಗೆ ಪ್ರಯತ್ನಿಸಿಲ್ಲ; ಆದರೆ ಈ ಮೊದಲಿನ ಒಂದೆರಡು ಪ್ರಸಂಗಗಳಲ್ಲಿ ನನಗೆ ಮೇಲಿನಂತೆಯೇ ಅನುಭವ ಬಂದಿರುತ್ತದೆ.

ಸುಭೇದಾರ:—ಫಕೀರ, ನನಗಾಗಿ ಇನ್ನೊಂದು ಸಲ ಪ್ರಯತ್ನ ಮಾಡಿ ನೋಡು, ಹೀಗೆಂದು ಹೇಳಿ ಅವನು ಅಲ್ಲಿಂದ ಹೊರಡಲುದ್ಯುಕ್ತ ನಾದನು. ಅದನ್ನು ಕಂಡು ಹರೇಕೃಷ್ಣನು ಕೇವಲ ನಮ್ರಭಾವ ದಿಂದ:—ಹುಜೂರ, ನನಗೇಕೋ ತಲೆತಿರುಗಹತ್ತಿದೆ. ಸನ್ನಿಧಿಯ ಅಪ್ಪಣೆ ಯಾದರೆ ಮುಖ್ಯ ಕಾರಕೂನನನ್ನು ಪತ್ರ ಓದುವದಕ್ಕಾಗಿ ಕಳಿಸುತ್ತೇನೆ, ಎಂದೆನ್ನಲು, ‘‘ಈ ಕಾಫರನ ಮಾತಿಗೆ ಬೆದರಿರುವೆಯೇನು?’’ ಎಂಬ ಸುಭೇದಾರನ ಪ್ರಶ್ನೆಗೆ:—‘‘ಇಲ್ಲ-ಇಲ್ಲ. ಮೂರು ದಿನಗಳಿಂದಲೂ ನನಗೆ ಮೈಯಲ್ಲಿ ನೆಟ್ಟಗಿಲ್ಲ,’’ ಎಂದು ಹರೇಕೃಷ್ಣನು ಮೆಲ್ಲನೆ ನುಡಿದನು.

‘‘ಹೋಗು ಹಾಗಾದರೆ, ಮುಹಮ್ಮದ ಅಮೀನನನ್ನು ಬೇಗನೆ ಕಳಿಸಿ ಕೊಡು’’ ಎಂದು ಹೇಳಿ ಹೊರಡಲು, ಹರೇಕೃಷ್ಣನಿಗೆ ಒಂದು ಬಗೆಯ ಹಾಯ್ ಎನಿಸಿತು.

ಸುಭೇದಾರನು ಹೊರಟು ಹೋಗುತ್ತಲೇ ಸಂನ್ಯಾಸಿಯು ಹರೇ ಕೃಷ್ಣನನ್ನುದ್ದೇಶಿಸಿ:—‘‘ಸ್ವತಃ ಯಮನೇ ಬಂದು ಎಳೆದೊಯ್ಯುತ್ತಿರು ವಾಗ, ಸಾಮಾನ್ಯ ಮನುಷ್ಯ ಪ್ರಾಣಿಯಾದ ಈ ನಿಮ್ಮ ಸುಭೇದಾರನು ಮಾಡುವದೇನು?’’ ಎಂದನು.

ಒಳ್ಳೇ ಗಾಬರಿಯಿಂದ ಹರೇಕೃಷ್ಣನು:—ಸ್ವಾಮಿನ್, ಮೊಕರಮ್ ಖಾನನು ಸಾಯುವನೇ? ಅದೆಂತು?

‘‘ಹೊರಗೆ ಬಂದು ನೋಡು’’ ಎಂದು ಸಂನ್ಯಾಸಿಯು ನುಡಿಯಲು, ಅವರಿಬ್ಬರೂ ಆ ಸಭಾಗೃಹದಿಂದ ಹೊರಗೆ ಬಂದು ನಿಂತರು. ದೂರ ದಲ್ಲಿ ಗಂಗಾನದಿಯ ಪ್ರಶಸ್ತವಾದ ಪ್ರವಾಹದಲ್ಲಿ ಸುಭೇದಾರನ ಬಹು ದೊಡ್ಡ ನಾವೆಯು ಲಂಗರ ಹಾಕಿಕೊಂಡು ನಿಂತುಕೊಂಡಿತ್ತು. ಸುಭೇ

ದಾರನ ಅಪ್ಪಣೆಯಾಗುತ್ತಲೇ ಅದು ಕೋಟೆಯ ಘಾಟಿಗೆ ಬಂದಿತು. ಸ್ವಲ್ಪ ವೇಳೆಯಲ್ಲಿಯೇ ಸುಭೇದಾರನೂ, ಆತನ ಸೇವಕಗಣಗಳೂ ನಾವ ನ್ನೇರಿದರು. ನಾವು ಘಾಟಿನಿಂದ ಹೊರಟಿತು. ಆ ಕೂಡಲೆ ಸಂನ್ಯಾಸಿಯು ಹರೇಕೃಷ್ಣನನ್ನು ಕುರಿತು:—“ಹರೇಕೃಷ್ಣ, ನೊಕರಮ್ ಖಾನ ನೆಂತೂ ತಿರುಗದ ದಾರಿಗೆ ಹೊರಟನು. ಮುಖ್ಯ ಡೆಪೂಟಿ ಅವಲ್ದಾರನಾದ ಅಸದಖಾನನೆಲ್ಲಿ?” ವಿಸ್ಮಯದಿಂದ ಹರೇಕೃಷ್ಣನು:—“ಅದೇಕೆ ಸ್ವಾಮಿನ್?” “ಇನ್ನು ಅಸದಖಾನನೇ ಈ ಬಂಗಾಲದ ಸುಭೇದಾರನಾಗುತ್ತಾನೆ”

ಹೀಗೆ ಅವರೀರ್ವರೂ ಕೋಟೆಯಲ್ಲಿ ನಿಂತುಕೊಂಡು ಮಾತಾಡುತ್ತಿರಲಿಕ್ಕೆ ಒಮ್ಮಿಂದೊಮ್ಮೆಲೆ ಪ್ರಚಂಡವಾದ ಸೊಂಟರಗಾಳಿಯೆದ್ದು, ನೆಲದಿಂದ ಆಕಾಶದ ವರೆಗೂ ಬಹು ಎತ್ತರವಾದ ಹಾಗು ಬಹು ವಿಸ್ತೃತವಾದ ಒಂದು ವಾಲುಕಾಸ್ತಂಭವು ಕಾಣಿಸಿಕೊಂಡಿತು. ಈ ವರೆಗೆ ಒಳ್ಳೇ ಶಾಂತವಾಗಿ ಪ್ರವಹಿಸುತ್ತಿದ್ದ ಗಂಗಾನದಿಯು ಒಮ್ಮೆಲೆ ಪ್ರಕ್ಷುಬ್ಧವಾಯಿತು! ನಾಲ್ಕೂ ಕಡೆಯಿಂದ ಕಾರ್ಮೋಡಗಳು ಕವಿದು ಆಕಾಶವನ್ನು ಮುತ್ತಿಬಿಟ್ಟವು. ಬಿರುಗಾಳಿಯು ಬೀಸಲಾರಂಭಿಸಿತು ಹೊಳೆಯೊಳಗಿನ ಸುಭೇದಾರನ ಆ ಪ್ರಚಂಡವಾದ ನಾವು ಕುಣಿದಾಡಹತ್ತಿತು ಅದನ್ನು ಕಂಡು ಕಿಲ್ಲೆಯೊಳಗಿನವರೆಲ್ಲರೂ ಹಾ ಹಾ ಕಾರ ಮಾಡಲಾರಂಭಿಸಿದರು. ಮುಸುಲಧಾರವಾದ ಮಳೆಯು ಬೀಳಹತ್ತಿತು. ಪರ್ವತಪ್ರಮಾಣದ ತೆರೆಗಳು ಪ್ರವಾಹದಲ್ಲಿ ಏಳಹತ್ತಿದವು ಇಷ್ಟರಲ್ಲಿ ಆ ಬೃಹತ್‌ನೌಕೆಯು ನೀರಲ್ಲಿ ಮುಳುಗಿ ಕಾಣದಾಯಿತು! ಅದನ್ನು ಕಂಡು ಸಂನ್ಯಾಸಿಯು ಮುಗುಳುನಗೆಯಿಂದ:—“ಹರೇಕೃಷ್ಣಾ, ನೋಡಿದೆಯಾ ಈ ವಿಚಿತ್ರ ಘಟನೆಯನ್ನು!” “ಸ್ವಾಮಿನ್, ತಮ್ಮ ವಾಣಿಯ ಅನುಭವವು ಪ್ರತ್ಯಕ್ಷವಾಗಿ ಬಂದಂತಾಯಿತು ಇನ್ನು ಮುಂದೇನು ಮಾಡತಕ್ಕದ್ದು.” “ನೀನು ಕೊಂಚವೂ ಅಂಜಬೇಡ. ಈ ಸುಭೇದಾರನ ಮರಣದಿಂದ ನಿನಗಾವ ಕ್ಷತಿಯೂ ಉಂಟಾಗಲಾರದು.”

ಕೂಡಲೆ ಹರೇಕೃಷ್ಣನು ಸಂನ್ಯಾಸಿಯ ಪಾದದ್ವಯಗಳನ್ನು ಗಟ್ಟಿಯಾಗಿ ಹಿಡಿದುಕೊಂಡು:—“ಸ್ವಾಮಿನ್, ನಿಮಗೆ ಮುಂದಾಗುವದೆಲ್ಲವೂ ತಿಳಿದಿರಲಿಕ್ಕೆ ನೀವು ಇಂಥ ಅನರ್ಥಗಳನ್ನು ತಪ್ಪಿಸಲಿಕ್ಕೇಕೆ ಯತ್ನಿಸುವದಿಲ್ಲ?” ಎಂದು ಪ್ರಶ್ನೆಮಾಡಲು, “ತಮ್ಮಾ, ಹರೇಕೃಷ್ಣಾ, ವಿಧಿಲಿಖಿತವನ್ನು ಸುಳ್ಳುಮಾಡುವದು ಅಶಕ್ಯವು. ಅಂತೇ ಇಂಥ ಪ್ರಸಂಗಗಳಿಗೆ

ವಿಚಿತ್ರಘಟನೆಯೆನ್ನಬೇಕಾಗುತ್ತದೆ. ಅದಿರಲಿ. ಈಗ ಂಸದಖಾನನೆಲ್ಲಿ ರುತ್ತಾನೆ?' "ಅವನು ಬಹುಶಃ ಸಪ್ತಗ್ರಾಮದಲ್ಲಿರಬಹುದಾಗಿದೆ." "ಹಾಗಾದರೆ ನಾನೀಗ ಹೋಗುತ್ತೇನೆ. ಅವನೊಡನೆಯೇ ಮರಳಿ ಬರುತ್ತೇನೆ," ಎಂದವನೇ ಆ ಸಂನ್ಯಾಸಿಯು ಅಲ್ಲಿಂದ ಮಾಯವಾದನು.

---

## ೮ನೆಯ ತರಂಗ.

—(೧)—

## ಚೈತನ್ಯದಾಸ.



ಕಾಡಿಗೆಯಂಥ ಕಪ್ಪು ವರ್ಣದ, ಕುಳ್ಳ ಆಕೃತಿಯುಳ್ಳ, ಇಷ್ಟುದ್ದ ಹೊಟ್ಟೆಯ ಹಾಗು ಹಲಬೋಳನಾದ ಒಬ್ಬ ಬೈರಾಗಿಯು ಗಂಗಾ-ಸರಸ್ವತಿಗಳ ಸಂಗಮದ ಬಳಿಯ ಆ ಹುಣಸೇಗಿಡದ ಕೆಳಗೆ ಕುಳಿತು, ತನ್ನ ಇಷ್ಟುದ್ದ ಮೂಗಿನ ಹೊರಳೆಗಳಲ್ಲಿ ಅಳೆಯುವ ಪಾಪಿನಂತಹ ಡಬ್ಬಿಯೊಳಗಿನ ನಸ್ಯವನ್ನು ತೆಗೆದು ಚಿಮುಟಗೆಗಟ್ಟಲೆ ತುಂಬುತ್ತಿದ್ದನು. ಹೊರಳೆಗಳು ಚೆನ್ನಾಗಿ ತುಂಬಿದವೋ ಇಲ್ಲವೋ ಎಂಬ ಅಭರವಸೆಯಿಂದ ಅವನು ತನ್ನ ತರ್ಜನೀ ಬೆರಳಿನಿಂದ ಆಗಾಗ್ಗೆ ಆ ಹೊರಳೆಗಳಿಗೆ ಪಟಪಟನೆ ಒಡಿಯುತ್ತಿದ್ದನು. ಅವನ ಹಿಮ್ಮಗ್ಗಲಿನಲ್ಲಿ ಅವನಂತೆಯೇ ಕಪ್ಪುವರ್ಣದ ಆದರೆ ಸೊರಗಿದ ಶರೀರದ ಹುಡುಗನೊಬ್ಬನು ನಿಂತುಕೊಂಡಿದ್ದನು. ಘಾಟಿನಲ್ಲಿ ಬರಹೋಗುವ ಪ್ರತಿಯೊಂದು ಡೋಣಿಯ ಅಂಬಿಗನನ್ನೂ ಹುಗಳಿಯವರೆಗೆ ಬಾಡಿಗೆ ಕಟ್ಟುವೆಯೇನೆಂದು ಆ ಬೈರಾಗಿಯು ಕೇಳುತ್ತಿದ್ದನು; ಆದರೆ ಅವರೊಬ್ಬರೂ ಅವನ ಮಾತಿಗೆ ಒಪ್ಪಲಿಲ್ಲ. ಕಾರಣವೇನೆಂದು ಅವನು ಅವರಲ್ಲಿಯ ಒಬ್ಬನನ್ನು ಕೇಳಲು, ಆ ಮುದುಕ ಧೀವರನು:— ಹುಗಳಿಗೇತಕ್ಕೆ ಸಾಯಲಿಕ್ಕೆ ಹೋಗಬೇಕೆ? ನಿನ್ನೆ ರಾತ್ರಿ ಸಪ್ತಗ್ರಾಮದಲ್ಲಾದ ಯುದ್ಧದಲ್ಲಿ ಫಿರಂಗಿಗಳು ಸೋತು ಓಡಿ ಹೋಗಿರುವರು. ಈ ದಿನ ರಾತ್ರಿ ಮತ್ತೆ ಅವರು ತಮ್ಮ ಸನ್ನಾಹದೊಡನೆ ಇಲ್ಲಿಗೆ ಬರಬಹುದಾಗಿದೆ. ಅವರು ಇಲ್ಲಿಯವರನ್ನು ಕಂಡರೆ ಸಿಟ್ಟುಬೆಂಕಿಯಾಗುವದು ಸಹಜವಿದೆ. ಇಂಥ ಪ್ರಸಂಗದಲ್ಲಿ ನಾವು ಹುಗಳಿಗೆ ಹೊರಡುವ ಬಗೆ ಹೇಗೆ?

ಬೈರಾಗಿಯು ಅವನಿಗೆ ಉತ್ತರವನ್ನು ಕೊಡಲಾರದೆ ಮತ್ತೆ ತನ್ನ ದೀರ್ಘವಾದ ಡಬ್ಬಿಯಿಂದ ನಸ್ಯವನ್ನು ತೆಗೆತೆಗೆದು ಮೂಗಿನಲ್ಲಿ ತುಂಬಹತ್ತಿದನು.

ಇಷ್ಟರಲ್ಲಿ ಆ ಹುಣಸೇಗಿಡದ ಕೆಳಗೆ ದೀರ್ಘಕಾಯದ ಹತ್ತಿಪ್ಪತ್ತು ಮಂದಿ ಬ್ರಾಹ್ಮಣರು ಕಲೆತರು. ತನ್ನಂತೆ ಅವರೂ ಎಲ್ಲಿಗೋ ಹೊರಟರುವ ಪ್ರಯಾಣಿಕರೆಂದು ತಿಳಿದು ಬೈರಾಗಿಯೂ ಅವರೊಡನೆ ಎದ್ದುನಿಂತನು; ಹಾಗು ಅವರಲ್ಲಿಯ ಒಬ್ಬನನ್ನು ಕುರಿತು:—ಠಾಕೂರಮಹಾಶಯರಿಗೆ ನಮಸ್ಕಾರಗಳು. ತಾವು ಹೊರಟಿರುವದೆಲ್ಲಿಗೆ?

ಬ್ರಾಹ್ಮಣ:—ಎಲ್ಲಿಗೆ ಹೋಗಬೇಕೆಂಬದನ್ನು ನಾವಿನ್ನೂ ನಿಶ್ಚಯಿಸಿರುವದಿಲ್ಲ. ನೀವು ಹೊರಟಿರುವದೆತ್ತ?

ಬೈರಾಗಿ:—ನಾನು ಹೊರಡಬೇಕೆಂದೆಲ್ಲಿಗೆ ಕೃಷ್ಣಪರಮಾತ್ಮನು ಒಯ್ಯುವನೋ ಇಲ್ಲವೋ ತಿಳಿಯದು. ನಾನು ಹುಗಳಿಗೆ ಹೋಗಬೇಕೆಂದಿದ್ದೆನು; ಆದರೆ ಅಲ್ಲಿಗೆ ಒಬ್ಬ ಡೋಣಿಯವನೂ ಬರಲೊಲ್ಲನು. ತಾವು ಈ ಸಪ್ತಗ್ರಾಮಕ್ಕೆ ಹೊಸದಾಗಿ ಬಂದಂತೆ ಕಾಣುವದಲ್ಲ?

ಬ್ರಾಹ್ಮಣ:—ಅದು ಹೇಗೆ?

ಬೈರಾಗಿ:—ನಿಮ್ಮ ನಡೆ-ನುಡಿಗಳ ಮೇಲಿಂದ ನೀವು ಹಳ್ಳಿಯವರೆಂಬಂತೆ ತೋರುತ್ತಿದೆ. ನಾನೂ ಹಳ್ಳಿಗಾಡಿನವನೇ. ಪಟ್ಟಣವಾಸಿಗಳ ನಡವಳಿಕೆಗೂ, ಹಳ್ಳಿಯವರ ನಡವಳಿಕಗೂ ಹೆಚ್ಚು ಕಡಿಮೆ ಇರುವದಿಲ್ಲವೆ?

ಬ್ರಾಹ್ಮಣ:—ಇರಬಹುದು. ನಿಮ್ಮ ಊರು ಯಾವದು?

ಬೈರಾಗಿ:—ಮಥುರೆಯ ಬಳಿಯ ಹಳ್ಳಿ. ತಮ್ಮ ವಾಸಸ್ಥಳವಾವುದು?

ಬ್ರಾಹ್ಮಣ:—ಮಖಸೂಸಾಬಾದದ ಬಳಿಯ ಭೀಮೇಶ್ವರ.

ಆ ಬೈರಾಗಿಯ ಹೆಸರು ಚೈತನ್ಯದಾಸನೆಂದು. ಅವನು ಚೈತನ್ಯಪಂಥದವನು. ಮನೆಗೆಲಸ ಮಾಡಿ ಹೊಟ್ಟೆತುಂಬಿಕೊಳ್ಳಲಾರದೆ ಅವನು ಆ ಪಂಥದ ಅನುಯಾಯಿಯಾಗಿದ್ದನು. ಅವನು ಹೆಸರಿಗೆ ಮಾತ್ರ ಬೈರಾಗಿಯಾಗಿದ್ದನೇ ಹೊರತು, ತ್ಯಾಗದ ಯಾವ ಲಕ್ಷಣವೂ ಅವನಲ್ಲಿರಲಿಲ್ಲ. ಅವನಿಗೆ ದಿನಾಲು ನಾನಾ ಬಗೆಯ ಸುಮಿಷ್ಟ ಅನ್ನವು ಬೇಕು; ತಲಬಿಗೆ ನಸ್ಯ-ಗುಡುಗುಡಿಗಳು ಬೇಕು; ಹಾಗು ನಿಶೆಯಾಗುವದಕ್ಕೆ ಭಂಗಿ-ಮದಿರೆಗಳೂ ಬೇಕು. ಚೈತನ್ಯಪಂಥದವರು ಬೈರಾಗಿಯು ಎಂಥವನೇ ಇರಲಿ, ಅವನ ಇಚ್ಛಾಪೂರ್ತಿ ಮಾಡುವದು ತಮ್ಮ ಕರ್ತವ್ಯವೆಂದು ತಿಳಿಯುತ್ತಿದ್ದ

ದರಿಂದ ಆಗಿನ ಕಾಲಕ್ಕೆ ಇಂಥ ಬೈರಾಗಿಗಳ ಸುಳಿದಾಟವು ನಾಡ ತುಂಬೆಲ್ಲ ಆಗಿತ್ತು. ಬೈರಾಗಿಯ ಅವಲಕ್ಷಣಮುಖ, ಅವಾಚ್ಯಾವಾಚ್ಯ ನುಡಿ, ಮೈಯ ದುರ್ಗಂಧ, ಕಂಡಕಂಡಲ್ಲಿ ಪಿಚಿಪಿಚಿ ಉಗುಳುವಿಕೆ ಇವು ಗಳನ್ನೆಲ್ಲ ನೋಡುತ್ತಿದ್ದ ಆ ಭೀಮೇಶ್ವರದ ಶುಚಿರ್ಭೂತ ಬ್ರಾಹ್ಮಣರಿಗೆ ಅವನ ಸಹವಾಸವು ಬೇಡಾಯಿತು. ಆದರಿಂದ ಅವರು ಅವನನ್ನು ಬಿಟ್ಟು ಆದಷ್ಟು ದೂರ ಇರಲಿಕ್ಕೆ ಪ್ರಯತ್ನಿಸುತ್ತಿದ್ದರು; ಆದರೆ ಆ ನಾಚಿಕೆ ಗೇಡಿ-ಸ್ವಪಚ ಬೈರಾಗಿಯು ಮತ್ತೆ ಮತ್ತೆ ಅವರ ಹತ್ತರವೇ ಹೋಗಿ ಅವರ ಮೈತಡವಿ-ತಡವಿ ಕೂಡ್ರುಹತ್ತಿದನು.

ಆಗ ಆ ಬ್ರಾಹ್ಮಣರ ತಂಡದ ಮುಖ್ಯಸ್ಥನು ಕೆಕ್ಕರಿಸಿದ ಕಣ್ಣಿನಿಂದ ಆ ಬೈರಾಗಿಯ ಕಡೆಗೆ ನೋಡುತ್ತ:—ಎಲೋ ಪಾಷಂಡ ಬೈರಾಗಿಯೇ, ಹೀಗೇಕೆ ಮೈಮೇಲೆ ಬರುತ್ತಿರುವೆ? ಒತ್ತಟ್ಟಿಗೆ ಸರಿದು ನಿಲ್ಲು, ಎಂದನು.

ಇವರು ಎಲ್ಲಿಗೋ ಹೊರಟಿರುವರು. ತಾನೂ ಇವರ ಗುಂಪಿನಲ್ಲಿ ದ್ದರೆ ಡೋಣಿಯವರು ತನಗೆ ಪ್ರತ್ಯೇಕವಾಗಿ ಬಾಡಿಗೆ ಕೇಳದೆ ಡೋಣಿ ಯಲ್ಲಿ ಹತ್ತಿಸಿಕೊಳ್ಳುವರಲ್ಲದೆ, ತನ್ನ ಊಟ-ಪಾಟಗಳಿಗೂ ಕೊರತೆಯಾಗ ಲಿಕ್ಕಿಲ್ಲೆಂಬ ಭಾವನೆಯಿಂದ, ನಿಶಾಗ್ರಸ್ತನಾದ ಬೈರಾಗಿಯು ಹಾಗೆ ಆ ಬ್ರಾಹ್ಮಣರ ಗುಂಪಿನಲ್ಲಿ ಕಲೆತು ಕೂಡ್ರುಹತ್ತಿದ್ದನು. ವಿಪ್ರಶ್ರೇಷ್ಠನ ಆ ಬಿರಿನುಡಿಯಿಂದ ಬೈರಾಗಿಯ ನಿಶೆಯಿಳಿಯಿತು. ಅವನು ತುಸ ಸರಿದು ನಿಂತು:—ಮಹಾನುಭಾವರೇ, ಈ ಅಜ್ಞಾನ ಅಪರಾಧಗಳನ್ನು ಕ್ಷಮಿಸಿರಿ, ಎಂದು ಅನ್ನಲು, ಸದಾದಯಾಪರನಾದ ಆ ಹಾರುವನ ಸಿಟ್ಟು ಇಳಿಯಿತು. ಅವನು ಬೈರಾಗಿಗೆ ಮತ್ತೇನೋ ಹೇಳಬೇಕೆಂದಿದ್ದನು. ಅಷ್ಟರಲ್ಲಿ ಅವನು ಈ ವರೆಗೆ ಯಾರನ್ನು ನಿರೀಕ್ಷಿಸುತ್ತಿದ್ದನೋ ಅವನ ಆ ಏಳೆಂಟು ಜನ ಆಳುಗಳು ಊರಕಡೆಯಿಂದ ಬಂದರು. ಆಗ ಅವನು ಒಳ್ಳೇ ಉತ್ಸುಕತೆ ಯಿಂದ:—ಭುವನ, ಪತ್ತೆಹತ್ತಿತೊ? ಎಂದು ಕೇಳಲು, ಆ ವೃದ್ಧ ಅಂಬಿ ಗನು:-ತರ್ಕರತ್ನಮಹಾಶಯರೇ, ಜಂಗುಕಟ್ಟಿಕೊಂಡು ಇಡಿ ಪಟ್ಟಣವನ್ನು ಅಲೆದೆವು. ಎಲ್ಲಿಯೂ ಮಹಾರಾಜರ ಪತ್ತೆಯಾಗಲಿಲ್ಲ. ಇಷ್ಟೇ ಅಲ್ಲ, ಅಲ್ಲಿ ಸತ್ತುಬಿದ್ದಿರುವ ಹಾಗು ಗಾಯಹೊಂದಿರುವ ಎಲ್ಲರನ್ನೂ ಉರುಳಿಸಿ ಉರುಳಿಸಿ ನೋಡಿದೆವು. ನಮ್ಮ ಪ್ರಯತ್ನಗಳೆಲ್ಲ ನಿರರ್ಥಕವಾದವು, ಎಂದು ನುಡಿದು, ಉಸುರ್ಗರೆದನು.

ಭುವನನ ಆ ಸುದ್ದಿಯನ್ನು ಕೇಳಿ, ಬ್ರಾಹ್ಮಣನು ಕ್ಷಣಕಾಲ ಯೋಚಿಸಿ:—ಭುವನ, ನನ್ನ ಅನುಮಾನವು ತಪ್ಪಿತಲ್ಲವೆ? ನಮ್ಮ ಡೋಣಿ ಯೆಲ್ಲಿರುವದು?

ಭುವನ:—ಸಮೀಪದ ಬಾದಶಾಹೀ ಪೂಲಿನ ಬುಡದಲ್ಲಿರುತ್ತದೆ. ಇಗೋ ತರುವೆನು, ಎಂದಂದು ಅಲ್ಪಾವಧಿಯಲ್ಲಿಯೇ ನೌಕೆಯನ್ನು ಅಲ್ಲಿಗೆ ತಂದು ನಿಲ್ಲಿಸಿದನು. ಆ ಬ್ರಾಹ್ಮಣರೆಲ್ಲರೂ ಆ ಡೋಣಿಯನ್ನು ಏರಿದರು. ಕೂಡಲೆ ಅಲ್ಲಿಯೇ ನಿಂತಿದ್ದ ಚೈತನ್ಯದಾಸನು ಆ ಬ್ರಾಹ್ಮಣರ ಹಿರಿಯ ನನ್ನು ಕುರಿತು:—ಮಹಾನುಭಾವರೇ, ತಾವೆಲ್ಲರೂ ಹುಗುಳಿಗೆ ನಡೆದಿ ರೇನು? ಎಂದು ಮೆಲ್ಲನೆ ಪ್ರಶ್ನೆ ಮಾಡಲು, "ಚೈತನ್ಯದಾಸರೇ, ನಿಮ್ಮನ್ನು ಳಿದು ನಾವೇನೂ ಹುಗುಳಿಗೆ ಹೋಗುವದಿಲ್ಲ. ಹತ್ತಿರಿ ಬೇಗನೆ ಡೋಣಿ ಯನ್ನು" ಎಂದು ತರ್ಕರತ್ನನು ನುಡಿಯಲು, ಬೈರಾಗಿಯು ಧಡಪಡಿಸು-ತ್ತೊಮ್ಮೆ ನೌಕೆಯನ್ನು ಆರೋಹಿಸಿದನು. ಹಿಡನೆಯೇ ನೌಕೆಯು ತ್ವರಿತ ಗತಿಯಿಂದ ಹುಗುಳಿಗಭಿಮುಖವಾಗಿ ಹೊರಟಿತು.

ಬಳಿಕ ಮತ್ತೊಬ್ಬ ಬ್ರಾಹ್ಮಣನು:—"ಚೈತನ್ಯದಾಸರೇ, ಹುಗುಳಿ ಯಲ್ಲಿ ನಿಮ್ಮ ಊಟ-ಪಾಟಗಳ ವ್ಯವಸ್ಥೆಯೇನು?" ಎಂದು ಕೇಳಲು, "ಅಲ್ಲಿ ನನಗೆ ಅನೇಕ ಜನ ಶಿಷ್ಯರಿರುವದರಿಂದ ಅವರು ಅತ್ಯಾದರದಿಂದ ನನ್ನನ್ನು ಬರಮಾಡಿಕೊಳ್ಳುತ್ತಾರೆ. ನೀವೆಲ್ಲರೂ ಇಂದು ನನ್ನೊಡನೆಯೇ ನನ್ನ ಶಿಷ್ಯರ ಮನೆಗೆ ಬನ್ನಿರಿ. ಅಲ್ಲಿಯೇ ಭೋಜನವನ್ನು ತೀರಿಸಿಕೊಂಡು ನಿಮ್ಮ ಉದ್ಯೋಗಕ್ಕೆ ಹೋಗುವಿರಂತೆ," ಎಂದು ಚೈತನ್ಯದಾಸನು ಒಳ್ಳೇ ಆಪ್ತತೆಯಿಂದಲೂ, ಆದರದಿಂದಲೂ ಅವರೆಲ್ಲರಿಗೆ ಆಮಂತ್ರಣಕೊಟ್ಟನು. ಆಗ ಇನ್ನೋರ್ವ ಹಾರುವನು:-"ನಿಮ್ಮ ಆ ಶಿಷ್ಯರು ಯಾವ ಮತಸ್ಥರು?" ಎಂದು ಪ್ರಶ್ನ ಮಾಡಲು, "ಅವರೇ-ಅವರು ದೇವಾಂಗದವರು" "ಛೇ-ಛೇ ನಾವು ಅವರಲ್ಲಿ ಊಟಮಾಡುವದೆಂತು? ನಾವು ಬೇರೆ ಕಡೆಗೆ ನಮ್ಮ ವ್ಯವಸ್ಥೆಮಾಡಿಕೊಳ್ಳುವೆವು. ನೀವೂ ಇಂದು ನಮ್ಮಲ್ಲಿಯೇ ಊಟಮಾಡಿ, ಬಳಿಕ ನಿಮ್ಮ ಶಿಷ್ಯರ ಮನೆಗೆ ಹೋಗುವಿರಂತೆ" ಎಂದ ಆ ಹಾರುವನ ಮಾತಿಗೆ ಚೈತನ್ಯದಾಸನು ಸಂತೋಷಪಟ್ಟು:—"ರಾಧೇಕೃಷ್ಣ-ರಾಧೇ ಕೃಷ್ಣ! ಪರಮಾತ್ಮನು ನಿಮ್ಮ ಇಷ್ಟಾರ್ಥವನ್ನು ಕೈಗೂಡಿಸಲಿ!" ಎಂದೆನ್ನುತ್ತ ಮತ್ತೆ ತನ್ನ ಮೂಗಿನ ಆಹುತಿಯ ಉದ್ಯೋಗಕ್ಕೆ ಆರಂಭಿಸಿದನು.

+ + + + + + +

ಅಂದೇ ಮಧ್ಯಾಹ್ನ ಮೂರುಗಂಟೆಯು ಸಮಯಕ್ಕೆ ಸಪ್ತಗ್ರಾಮದ ತ್ರಿವೇಣಿಯ ಘಾಟನಲ್ಲಿಯ ಒಂದು ನೌಕೆಯಲ್ಲಿ ಸುಮಧುರವಾದ ಸಂಗೀತಾಲಾಪವೂ, ಸತಾರಿನ ನಾದವೂ ಕೇಳಬರಹತ್ತಿತು. ತೀರದಲ್ಲಿ ನಿಂತುಕೊಂಡಿದ್ದ ಸಾವಿರಾರು ಜನರು ಕೊಂಚವೂ ಗದ್ದಲ ಮಾಡದ ಹಾಗೆ ಆ ಸುಮಿಷ್ಟ ವಾದ್ಯರವವನ್ನು ಕೇಳುತ್ತಿದ್ದರು. ಆ ನಾವೆಯು ಒಂದು ಪ್ರಶಸ್ತಾದ ಕೋಣೆಯಲ್ಲಿ ಕುಳಿತು ಆ ನಮ್ಮ ಪೂರ್ವಪರಿಚಿತ ಯುವನತರುಣಿಯು ಸತಾರನ್ನು ಬಾರಿಸುತ್ತಿದ್ದಳು. ಅವಳ ಪಕ್ಕದಲ್ಲೇ ಕುಳಿತಿದ್ದ ಇನ್ನೊಬ್ಬ ಪ್ರೌಢೆಯು ಹಾಡುತ್ತಿದ್ದಳು. ತರುಣಿಯು ಹತ್ತರವೇ ಅನೇಕೋರೆಯಿಂದ ಮಾಡಿದ ಒಂದು ಪಲ್ಲಂಗದ ಮೇಲೆ ಒಬ್ಬ ಗೌರವರ್ಣದ ತರುಣನು ಮಲಗಿಕೊಂಡಿದ್ದನು. ಯುವಕನು ಚೇತನಾವಿಹೀನನಾಗಿದ್ದನು. ಆತನ ಸರ್ವಾಂಗಗಳಲ್ಲೂ ಕ್ಷತಚಿಹ್ನಗಳು ತೋರುತ್ತಿದ್ದವು. ಅವುಗಳಿಗೆಲ್ಲ ಬೇರೆಬೇರೆಯಾಗಿ ಶುಭ್ರವಸ್ತ್ರಗಳಿಂದ ಬಿಗಿದಿದ್ದರು ಆದರೂ ಅವುಗಳೊಳಗಿಂದ ಆಗಾಗ್ಗೆ ರಕ್ತವು ಹೊರಚಿಮ್ಮುತಲಿತ್ತು. ಕೆಲಹೊತ್ತಿನ ನಂತರ ಆ ಯುವಕನು ಅಸ್ಫುಟ ದನಿಯಿಂದ ಏನೋನೋ ನುಡಿದನು. ಅದನ್ನು ನೋಡಿ ಆ ಯುವತಿಯು ತನ್ನ ಕೈಯೊಳಗಿನ ಸತಾರನ್ನು ತೆಗೆದಿಟ್ಟು, ತೀರ ಅವನ ಹತ್ತರ ಸರಿದು ಕುಳಿತನು.

ತರುಣನು ಕಣ್ಣುಗಳನ್ನು ತೆರೆದು ಅವಳನ್ನು ದಿಟ್ಟಿಸಿ ನೋಡುತ್ತ:- ‘‘ಯಾರು? ಲಲಿತಾ, ಯಾವಾಗ ಬಂದೆ?’’

ತರುಣಿಯು ಅವನ ಎರಡೂ ಕೈಗಳನ್ನು ತನ್ನ ಕೈಯಲ್ಲಿ ಹಿಡಿದುಕೊಂಡು:—‘‘ಏನೆನ್ನುವಿರಿ? ನನ್ನ ಗುರುತ್ತು ಹತ್ತಲೊಲ್ಲದೆ?’’

‘‘ಗುರುತು ಹತ್ತದೇನು ಮಾಡೀತು?’’ ಎಂದು ಮುಗುಳು ನಗೆಯಿಂದ ಆ ತರುಣನು ಅಂದನು.

‘‘ಹೇಳಿರಿ ನೋಡೋಣ, ನಾನಾರೆಂಬದನ್ನು?’’ ‘‘ನೀನು ಲಲಿತೆಯಲ್ಲದೆ ಮತ್ತಾರು?’’ ‘‘ಲಲಿತೆ ಯಾರು? ನನ್ನ ಹೆಸರಂತೂ ಗುಲ್‌ರುಖ’’ ‘‘ಸುಳ್ಳು-ಸುಳ್ಳು, ನೀನು ಲಲಿತೆಯೇ. ನಾವಿರುವದೀಗ ಭೀಮೇಶ್ವರದಲ್ಲಿ. ಲಲಿತಾ, ನೀನು ಯಾವಾಗ ಬಂದೆ? ನನಗೆ ನಿದ್ದೆ ಹತ್ತಿತ್ತಲ್ಲವೆ? ‘‘ನೀವು ಅನ್ನುವದಾದರೂ ಏನು? ಇದು ಸಪ್ತಗ್ರಾಮವು, ಗಂಗಾ-ಸರಸ್ವತಿಗಳ ಮುಖದಲ್ಲಿ ನಮ್ಮ ನಾವೆಯು ನಿಂತಿದೆ. ನಾನು ಗುಲ್‌ರುಖಳೇ. ನಿಮಗೆ ಈ ವರೆಗೂ ನನ್ನ ಗುರುತು ಹತ್ತಲೊಲ್ಲದೆ?’’

"ನಿನ್ನ ಗುರುತು ಹತ್ತದೇನು ಮಾಡೀತು? ಆದರೆ ಲಲಿತಾ, ನೀನು ಈ ಮುಸಲ್ಮಾನೀ ವೇಷವನ್ನು ಎಂದಿನಿಂದ ಧರಿಸ ಕಲಿತೆ? ಯುವನರ ವೇಷ ವನ್ನು ತೊಡಹತ್ತಿ, ಯುವನರ ಹೆಸರನ್ನೂ ಇಟ್ಟುಕೊಂಡೆಯೇನು?"

"ಈಗ ಹೆಚ್ಚು ಮಾತಾಡಬೇಡಿರಿ. ನೀವಿನ್ನೂ ಸಂಪೂರ್ಣವಾಗಿ ಎಚ್ಚತ್ತಿಲ್ಲ." "ಲಲಿತಾ, ನನಗೇ ಎಚ್ಚರವಿಲ್ಲವೇ!" ಎಂದಂದು ಆ ತರುಣನು ಹಾಸಿಗೆಯಿಂದ ಏಳತೊಡಗಿದನು; ಆದರೆ ಏಳಗೊಡದಂತೆ ಅವಳು ಅವನನ್ನು ಹತ್ತಿಕ್ಕಿ ಹಿಡಿದು:—"ಏಳಬೇಡಿರಿ-ಏಳಬೇಡಿರಿ; ಎದ್ದರೆ ಗಾಯಗಳಿಂದ ಮತ್ತೆ ಹೆಚ್ಚು ರಕ್ತಸ್ರಾವವಾದೀತು.?" ಎಂದು ಹೇಳು ವಷ್ಟರಲ್ಲಿ ಅವನು ಕೊಸರಿಕೊಂಡು ಏಳಹೋಗಲು, ಗಾಯಗಳಿಂದ ಹೆಚ್ಚಾಗಿ ರಕ್ತಸ್ರಾವವಾಗಹತ್ತಿತು. ಕೂಡಲೆ ಒಂದು ಬಗೆಯ ಕಟ್ಟ ದನಿ ಯಿಂದ ಚೀರಿ ಅವನು ದೊಪ್ಪನೆ ಬಿದ್ದು ಮತ್ತೆ ಚೇತನಾವಿಹೀನನಾದನು.

ಇದೇ ಸಮಯಕ್ಕೆ ಆ ಕೋಣೆಯ ಬಾಗಿಲದ ಪರದೆಯನ್ನು ಬದಿಗೆ ಸರಿಸಿ, ಪೂರ್ವರಾತ್ರಿಯಲ್ಲಿ ಆ ತರುಣಿಯನ್ನು ದೋಣಿಗೆ ಕರೆತಂದಿದ್ದ ಆ ಸನ್ಮಾನನೀಯ ವೃದ್ಧಯುವನನು ಅಲ್ಲಿಗೆ ಬಂದನು. ಅವನು ಆ ತರು ಣನ ಆ ಅವಸ್ಥೆಯನ್ನು ಕಂಡು:—"ತಂಗೀ, ಹಕೀಮರು ಬಂದಿದ್ದರೇನು?" ಎನ್ನಲು, "ಇಲ್ಲ; ಈ ವರೆಗೂ ಬಂದಿಲ್ಲ. ಬೇಗನೆ ಕರೆಸಿರಿ" ಎಂದು ತರುಣಿಯು ಗಾಬರಿಯಿಂದ ಉತ್ತರ ಕೊಟ್ಟಳು. ಇಷ್ಟರಲ್ಲಿ ಹಬೀಬನು ಹಕೀಮನನ್ನು ಕರೆತಂದು ಅವರೆದುರಿಗೆ ನಿಲ್ಲಿಸಿದನು. ಹಕೀಮನು ತರು ಣನ ನಾಡಿಯನ್ನು ನೋಡಿ ಚಿಂತಿತನಾಗಿ:—ಗಾಯಗಳು ಭಯಂಕರವಾ ಗಿವೆ. ಆದರೂ ಹೊಸರಕ್ತವಾದ್ದರಿಂದ ಗುಣವಾಗುವ ಆಶೆಯಿದೆ. ಈತನು ಕಾಫರನೆಂಬಂತೆ ಕಾಣುತ್ತಾನೆ. ಬಾದಶಹನ ಸೈನಿಕನಾಗಿರಬಹುದಾದ್ದ ರಿಂದ ನೀವು ಇವನನ್ನು ತಂದಿರುವಿರಲ್ಲವೆ? ಇರಲಿ. ನಾನು ಈಗ ಇವನಿಗೆ ಕೆಲವು ಗುಳಿಗೆಗಳನ್ನೂ, ಗಾಯಗಳಿಗೆ ಹಚ್ಚುವದಕ್ಕಾಗಿ ಲೇಪವನ್ನೂ ಕೊಡುವೆನು. ಈ ಗುಳಿಗೆಗಳನ್ನು ಪ್ರಹರಕ್ಕೊಮ್ಮೆ ತಪ್ಪದೆ ಹಗಲು-ರಾತ್ರಿ ಕೊಡಬೇಕು. ಈ ಮಲಮನ್ನು ಎಲ್ಲ ಗಾಯಗಳಿಗೆ ೨-೩ ಸಾರೆ ಹಚ್ಚ ತಕ್ಕದ್ದು. ರೋಗಿಯನ್ನು ಹಾಸಿಗೆಯಿಂದ ಒಂದಿಷ್ಟೂ ಚಲಿಸಗೊಡಬಾ ರದು. ಇವನಿಗೆ ಈಗ ವಾಯುವಿಕಾರವಾಗಿದೆ. ರಾತ್ರಿಯಲ್ಲಿ ಈ ವಿಕಾ ರವು ಹೆಚ್ಚಾಗುವದು. ಆದರೂ ನಾನು ಹೇಳಿದಂತೆ ಚಿಕಿತ್ಸೆ ಮಾಡಿದರೆ

ನಾಳೆ ಬೆಳಗ್ಗೆ ಈತನು ಖಾತ್ರಿಯಿಂದ ಗುಣಹೊಂದುವನು. ಅಲ್ಲದೆ ನಾನು ಇವನಿಗೊಂದು ಬಗೆಯ ಶರಬತ್ತನ್ನು ಕೊಡುವೆನು. ಅದನ್ನು ತಾಸು ತಾಸಿಗೊಮ್ಮೆ ಕುಡಿಸಬೇಕು. ಆ ಶರಬತ್ತಿನ ಹೊರತು ಇವನಿಗೆ ಬೇರೆ ಯಾವ ಆಹಾರ-ಪೇಯಗಳನ್ನೂ ನಾಳಿನ ವರೆಗೆ ಕೊಡಲಾಗದು. ಈತನ ಬಳಿಯಲ್ಲಿ ಅಷ್ಟೌಪ್ರಹರ ಯಾರಾದರೂ ಕುಳಿತೇ ಇರಬೇಕು. ಉದ್ದೇಶವಿಷ್ಟೇ, ಔಷಧ-ಪೇಯಗಳನ್ನು ವೇಳೆಗೆ ತಪ್ಪದೆ ಕೊಡುವದಕ್ಕಾಗಿ.''

ಹೀಗೆಂದು ಹೇಳಿ ಹಕೀಮನು ಕೊಡತಕ್ಕ ಎಲ್ಲ ಔಷಧಗಳನ್ನು ಆ ತರುಣಿಯ ಕೈಗೆ ಕೊಟ್ಟು ಹೊರಟು ಹೋದನು. ಬಳಿಕ ತರುಣಿಯು ಕಾಲಕಾಲಕ್ಕೆ ಔಷಧಗಳನ್ನು ಕೊಡುತ್ತ ಅಲ್ಲಿಯೇ ಕುಳಿತಳು ಸಾಯಂಕಾಲದ ೫ ಗಂಟೆಯ ಸಮಯಕ್ಕೆ ಆ ತರುಣನು ಮತ್ತೊಮ್ಮೆ ಹಾಸಿಗೆಯಿಂದ ಏಳಲಿಕ್ಕೆ ಪ್ರಯತ್ನಿಸಿದನು; ಆದರೆ ತರುಣಿಯು ವೈದ್ಯನ ಆದೇಶದಂತೆ ಅವನನ್ನು ಆ ಪಲ್ಲಂಗಕ್ಕೆ ಬಿಗಿದೇ ಬಿಟ್ಟಿದ್ದಳು. ಅದರಿಂದ ವಿಫಲಮನಸ್ಕನಾಗಿ ಅವನು ಮತ್ತೆ ಮಲಗಿದನು. ಅವಳು ಅವನಿಗೆ ಆ ಕಾಲಕ್ಕೆ ಆ ಪೇಯವನ್ನು ಚೆನ್ನಾಗಿ ಕುಡಿಸಿದ್ದರಿಂದ, ತುಸಹೊತ್ತಿನಲ್ಲಿಯೇ ಅವನು ಗಾಢನಿದ್ರಾಸಕ್ತನಾದನು.

ಆಗ ಆ ತರುಣಿಯು ತುಸಸಮಾಧಾನಗೊಂಡು ಅಲ್ಲಿಂದೆದ್ದು ಸಮೀಪದ ಬೇರೆ ಕೋಣೆಗೆ ಹೋದಳು. ಅಲ್ಲಿ ಆ ವೃದ್ಧನು ಪತ್ರಬರೆಯುತ್ತಿದ್ದನು. ''ಯಾರಿಗ''ೆದು ತರುಣಿಯು ಕೇಳಲು, ''ಅಸದಖಾನನಿಗೆ. ನಾನು ನನ್ನ ಮಗನೊಡನೆ ದಿಲ್ಲಿಗೆ ಹೋಗಬೇಕೆಂದಿರುವೆನು. ಸಂಜೆಯೊಳಗಾಗಿ ಅವನನ್ನು ಈ ನಾವೆಗೆ ಕಳಿಸಲಿಕ್ಕೆ ತಿಳಿಸಿರುವೆನು'' ಎಂದು ಮುದುಕನು ಹೇಳಿದನು.

ಅದನ್ನು ಕೇಳಿ ಯುವತಿಯು ಗೊಂದಲದಲ್ಲಿ ಬಿದ್ದಳು. ವೃದ್ಧನ ಮಗನಾಗಲಿ, ಅವನ ಜೊತೆಗೆ ಅಸದಖಾನನಾಗಲಿ ಇಲ್ಲಿಗೆ ಬಂದು ಈ ತರುಣನನ್ನು ನೋಡಿದರೆ ಅವರಿಗೆ ಈತನ ಗುರುತು ಹತ್ತುವದು ಖಂಡಿತವು. ಬಳಿಕ ಅವರು ಇವನನ್ನು ತಿರುಗಿ ತಮ್ಮಲ್ಲಿಗೆ-ಸಪ್ತಗ್ರಾಮಕ್ಕೆ ಹಿಯ್ಯುವರು. ಹೀಗೆ ಆಗದಂತೆ ಏನು ಮಾಡಬೇಕೆಂದು ಅವಳು ಯೋಚಿಸಹತ್ತಿದಳು. ಕೆಲಕ್ಷಣಗಳ ನಂತರ ಅವಳು:—

“ಅಜ್ಜಾ, ನಿಮ್ಮ ಈ ಪತ್ರವನ್ನು ಈಗಲೆ ಕಳಿಸುವ ಕಾರಣವಿಲ್ಲ. ಯಾಕಂದರೆ ಇವರಿಗೆ ಸಂಪೂರ್ಣ ಗುಣವಾಗದ ಹೊರತು ನಾವು ಇಲ್ಲಿಂದ ದಿಲ್ಲಿಗೆ ಹೊರಡದಿರುವದೇ ನೆಟ್ಟಗೆ. ನಡುವೆ ದಾರಿಯಲ್ಲಿ ನಮಗೆ ಹಕೀಮರೆಲ್ಲಿ ದೊರೆಯಬೇಕು? ಆದ್ದರಿಂದ ತುಸ ಗುಣವಾದ ಬಳಿಕ ಹೊರಡೋಣ. ಈಗ ಹೇಗೂ ಸಂಜೆಯು ಹೊತ್ತಾಗಿದೆ. ನಾವೆಯನ್ನು ಗಂಗಾ ಪ್ರವಾಹದಲ್ಲಿ ತುಸ ಅಡ್ಡಾಡಿಸಿಕೊಂಡು ಬಂದರೆ, ಅದರಿಂದ ಇವರ ಪ್ರಕೃತಿಗೆ ತುಸ ಗುಣವಾದೀತು,” ಎಂದು ನುಡಿದಳು. “ಹಾಗೆಯೇ ಆಗಲೆ”ಂದು ಮುದುಕನು ಒಪ್ಪಲು, ಅಂಬಿಗರಿಗೆ ಹೇಳಿ ನಾವೆಯನ್ನು ಬಿಡಿಸಿದಳು. ನಾವೆಯು ಭರದಿಂದ ಪ್ರವಾಹದೊಡನೆ ಹೊರಟಿತು,

ಮಕಮಕ ಮುಊರೂಸಂಜೆಯು. ಗಂಗಾವಕ್ಷದ ಮೇಲೆಲ್ಲ ದಟ್ಟವಾದ ಮಂಜು ಬಿದ್ದಿದೆ. ಪೂರ್ವರಾತ್ರಿಯ ಫಿರಂಗಿಗಳ ಉಪಟಳದ ಮೂಲಕ ಗಂಗಾಪ್ರವಾಹದಲ್ಲೊಂದೂ ನೌಕೆಯು ಹರಿದಾಡುತ್ತಿರಲಿಲ್ಲ. ನಮ್ಮ ಆ ತರುಣಿಯ ನೌಕೆಯು ಸಪ್ತಗ್ರಾಮದಿಂದ ೩-೪ ಮೈಲು ದೂರ ಪ್ರವಾಹದ ಕೂಡ ಹೋಗಿರಬಹುದು. ಇಷ್ಟರಲ್ಲಿ ತಮ್ಮ ಹಿಂದಿನಿಂದ ಒಂದು ವಿಶಾಲವಾದ ನಾವೆಯು ಒತ್ತರದಿಂದ ತಮ್ಮ ಕಡೆಗೇ ಬರುತ್ತಿರುವದೆಂದು ಅಂಬಿಗರು ಆ ವೃದ್ಧನಿಗೆ ತಿಳಿಸಿದರು. ಅಲ್ಪಾವಧಿಯಲ್ಲೇ ಆ ಹಿಂದಿನ ನಾವು ಇವರ ಡೋಣಿಗೆ ಹತ್ತರವೇ ಬಂದಿತು. ಅದರಲ್ಲಿ ೪೦-೫೦ ಜನ ಶಸ್ತ್ರಧಾರಿಗಳಾದ ಅಂಬಿಗರು ಹುಟ್ಟು ಹಾಕುತ್ತಿದ್ದರು. ಅವರ ಹಿಂದುಗಡೆಯಲ್ಲಿ ಹತ್ತಿಪ್ಪತ್ತು ಜನ ಶುಭ್ರವಸನಾವೇಷ್ಟಿತರಾದ ಬ್ರಾಹ್ಮಣರು ಕುಳಿತುಕೊಂಡಿದ್ದರು. ಅವರನ್ನು ಕಂಡು ಆ ವೃದ್ಧಯವನನು ವಿಸ್ಮಯದಿಂದ:—ಇದು ಎಲ್ಲಿಯ ನೌಕೆಯು? ಎಲ್ಲಿಗೆ ಸಾಗಿದೆ? ಎಂದು ಪ್ರಶ್ನೆ ಮಾಡಿದ್ದಕ್ಕೆ ಆ ಬ್ರಾಹ್ಮಣರಲ್ಲಿಯ ಹಿರಿಯನು:-“ಇದು ಪಶ್ಚಿಮದೇಶದ್ದು, ಹುಗುಳಿಗೆ ನಡೆದಿದೆ. ನೀವು ಎಲ್ಲಿಂದ ಬಂದಿರಿ? ಎಲ್ಲಿಗೆ ನಡೆದಿರುವಿರಿ?” “ನಾವು ಸಪ್ತಗ್ರಾಮಕ್ಕೆ ಬಂದವರು. ವಾಯುವಿಹಾರಕ್ಕೆ ಬಂದಿದ್ದೆವು. ತಿರುಗಿ ಸಪ್ತಗ್ರಾಮಕ್ಕೇ ಹೋಗತಕ್ಕವರು” ಎಂದು ವೃದ್ಧನು ಹೇಳಿದನು. ಆಗ ಬ್ರಾಹ್ಮಣನು:—ಹಾಗಾದರೆ ಬೇಗನೆ ತಿರುಗಿ ಹೋಗಿರಿ. ಇಂದು ರಾತ್ರಿ, ಇತ್ತಕಡೆಗೆಲ್ಲ ಫಿರಂಗಿಗಳ ಉಪಟಳವಾಗಬಹುದಾಗಿದೆಯಾದ್ದರಿಂದ ಬೇಗನೆ ಹೋಗಿ ಮನೆ ಸೇರಿರಿ” “ಕಾಫರ, ನಿಮ್ಮನ್ನು ಫಿರಂಗಿಗಳು

ಹಿಂಸಿಸಲಾರರೇ?" "ನಾವು ಬೇಕಂತ ಅವರ ಕಡೆಗೇ ಹೋಗಿ, ಅವರಿಗೆ ದುಡ್ಡು ಕೊಡುವವರಿದ್ದೇವೆ"

ಬ್ರಾಹ್ಮಣನು ಹೀಗೆಂದ ಬಳಿಕ ಆ ನಾವೆಯು ಭರದಿಂದ ಮುಂದೆ ಸಾಗಿತು. ವೃದ್ಧಯುವನನ ನಾವೆಯು ಸಪ್ತಗ್ರಾಮದ ಕಡೆಗೆ ತಿರುಗಿ ಮಂದಗತಿಯಿಂದ ಸಾಗಿತು. ಆಗ ಗಂಗಾಪ್ರವಾಹದ ಇತ್ತಂಡಗಳ ಹಿಂದು ಗ್ರಾಮದಲ್ಲಿ ಕೂಡ ಹಿಂದು ದೀಪವೂ ಕಾಣಿಸುತ್ತಿರಲಿಲ್ಲ. ಎಲ್ಲ ಕಡೆಗೂ ನಿಶ್ಶಬ್ದವಿದ್ದಿತು. ಕಾರ್ಗತ್ತಲೆಯು ಬಿದ್ದುದರಿಂದ ತುಸ ಅಂತರದ ಮೇಲಿನ ಪದಾರ್ಥವೊಂದೂ ಕಾಣುವಂತಿರಲಿಲ್ಲ. ಇಷ್ಟರಲ್ಲಿ ಹಿಂದು ದೊಡ್ಡ ನಾವು ತೀರಗತಿಯಿಂದ ಬಂದು ಆ ವೃದ್ಧಯುವನನ ನೌಕೆಗೆ ತಗಲಿತು. ಕೂಡಲೆ ಅದರೊಳಗಿನ ೪-೬ ಜನ ಸಶಸ್ತ್ರ ಫಿರಂಗಿಗಳು ಇವರ ನೌಕೆಗೆ ಇಳಿದು, ಎಲ್ಲ ಅಂಬಿಗರನ್ನೂ ಕೈದು ಮಾಡಿ, ಆ ಡೋಣಿಯನ್ನು ತಮ್ಮ ನಾವಿಗೆ ಹಗ್ಗದಿಂದ ಬಿಗಿದರು. ಯವನರ ನಾವಿನೊಳಗಿನ ಕೋಣೆಯ ಬಾಗಿಲಿಗೆ ಆ ಎಲ್ಲ ಶಸ್ತ್ರಧಾರಿಗಳು ನಿಂತುಕೊಂಡರು ಬಳಿಕ ಆ ನಾವುಗಳು ಭರದಿಂದ ಹುಗುಳಿಯ ಕಡೆಗೆ ನಡೆದವು.

ಫಿರಂಗಿಗಳ ಆ ನಾವು ಅಂದು ಮಧ್ಯರಾತ್ರಿಗೆ ಹುಗುಳಿಯ ಕೋಟೆಯ ಹತ್ತರ ಹೋಗಲು, ನಾವಿನೊಳಗಿನ ಹಿಂದು ತೋಫು ಹಾರಿಸಲ್ಪಟ್ಟಿತು. ಆ ಕೂಡಲೆ ದುರ್ಗದೊಳಗಿಂದಲೂ ಹಿಂದು ಗುಂಡು ಹಾರಿಸಲ್ಪಟ್ಟಿತು. ಆ ನಾವುಗಳು ಹಾಗೆಯೇ ಮುಂದೆ ನಡೆದವು. ಹತ್ತರವೇ ಮೂರೂ ಸಂಜೆಯ ಹೊತ್ತಿನಲ್ಲಿ ಯವನರ ಡೋಣಿಗೆ ಭೆಟ್ಟಿಯಾಗಿದ್ದ ಆ ಪಶ್ಚಿಮ ದೇಶದ ಬ್ರಾಹ್ಮಣರ ನಾವು ಲಂಗರ ಹಾಕಿಕೊಂಡು ನಿಂತಿತ್ತು. ಈ ಡೋಣಿಯನ್ನು ಕಂಡು ತರ್ಕರತ್ನನು:—"ಭುವನ, ಈ ಡೋಣಿಯು ಸಪ್ತಗ್ರಾಮಕ್ಕೆ ತೆರಳದೆ ಇಲ್ಲಿಗೇಕೆ ಬಂದಿದೆ? ಇದು ಬಹುಶಃ ಫಿರಂಗಿಗಳಿಂದ ಕೈದು ಮಾಡಲ್ಪಟ್ಟಿರಬೇಕು. ಭುವನ, ಬಿಡು ನಮ್ಮ ನಾವೆಯನ್ನು" ಎಂದ ಕೂಡಲೆ ಭುವನನ ಆದೇಶದಂತೆ ಆ ನಾವೆಯು ಆ ಡೋಣಿಯ ಹತ್ತರ ಹೋಯಿತು. ಆಗ ಫಿರಂಗಿಗಳು ಜಾಗರೂಕರಾಗಿರಲಿಲ್ಲ. ಅದರಿಂದ ಈ ಬ್ರಾಹ್ಮಣರ ನಾವೆಯವರು ಆ ಎಲ್ಲ ಫಿರಂಗಿಗಳನ್ನು ಸೆರೆಹಿಡಿದರು. ಯವನರ ಡೋಣಿಯನ್ನು ಫಿರಂಗಿಗಳ ಡೋಣಿಯಿಂದ ಬಿಚ್ಚಿ ಅವರಿಗೆ ಸಪ್ತಗ್ರಾಮಕ್ಕೆ ಹೋಗಲಪ್ಪಣೆಯನ್ನಿತ್ತರು.

ಯವನರ ಡೋಣಿಯಲ್ಲಿ ಈ ಮೊದಲೇ ಸಾವಧನಾಗಿದ್ದ ಆ ತರುಣನು ಭುವನನ ದನಿಯನ್ನು ಗುರ್ತಿಸಿ, ಗಟ್ಟಿಯಾಗಿ:—"ಭುವನ" ಎಂದು ಕೂಗಿದನು. ಆ ದನಿಯನ್ನು ಕೇಳಿ, ಆ ಮಧ್ಯರಾತ್ರಿಯಲ್ಲಿ ತಮ್ಮ ಜನರೊಡನೆ ಶತ್ರುಪಕ್ಷದ ತೀರ ಅಳವಿನಲ್ಲಿ ಸಿಕ್ಕಿದ್ದ ಭುವನನು, ಗಾಬರಿಗೊಂಡನು. ಕ್ಷಣಕಾಲದವರೆಗೆ ಅವನ ಕೈಕಾಲುಗಳು ಲಟಪಟಿಸಿದವು. ದನಿಯು ಏಳದಾಯಿತು. ಆದರೂ ಅವನು ಒಳ್ಳೇ ಉತ್ಸುಕತೆಯಿಂದ:—"ಮಹಾರಾಜ, ಎಲ್ಲಿರುವಿರಿ? ಬನ್ನಿರಿ" ಎಂದಂದನು.

ಇಷ್ಟರಲ್ಲಿ ದುರ್ಗದ ಮೇಲಿಂದ ೩-೪ ದೊಡ್ಡ ದೊಡ್ಡ ತೋಫಿನ ಗುಂಡುಗಳು ಬಂದು ಇವರ ನೌಕೆ-ಡೋಣಿಗಳ ಮೇಲೆ ಬಿದ್ದವು. ಕೂಡಲೆ ಅವುಗಳು ನದಿಯ ಗರ್ಭವನ್ನು ಪ್ರವೇಶಿಸಲಾರಂಭಿಸಿದರು. ಇದೇ ಕಾಲಕ್ಕೆ ನಾಲ್ಕೂ ಕಡೆಯಿಂದ ಬಂದ ೫-೬ ಚಿಕ್ಕ ಚಿಕ್ಕ ಡೋಣಿಗಳಲ್ಲಿಯ ಸಶಸ್ತ್ರ ಫಿರಂಗಿಗಳು ಆರೋಹಿಗಳನ್ನೆಲ್ಲ ಎಳೆಎಳೆದು ತಮ್ಮ ಡೋಣಿಗೆ ಹಾಕಿ ಕೈದು ಮಾಡಿದರು. ಪಾಪ! ಆ ಹಾರುವರ ಜೊತೆಗೆ ಬಾಡಿಗೆಯಿಲ್ಲದೆ ನೌಕೆಯನ್ನೇರಿದ್ದ ನಮ್ಮ ಚೈತನ್ಯದಾಸ ಬೈರಾಗಿಯೂ ಅವರೊಡನೆ ಬಾಡಿಗೆಯಿಲ್ಲದ ಮನೆಗೆ ಕಳುಹಲ್ಪಟ್ಟನು!!

---

೯ನೇಯ ತರಂಗ.

—(೦)—

## ವಿನೋದಿನಿ.



ದುರ್ಗದ ಕೋಟೆಯ ಹೊರಬದಿಯಲ್ಲಿ ಒಂದು ಸುಂದರವಾದ ಪುಟ್ಟ ಕುಟೀರವಿದ್ದಿತು. ಅದರಲ್ಲಿ ತಾರುಣ್ಯಾವಸ್ಥೆಯನ್ನು ಮೀರಿದಂಥ ಒಬ್ಬ ವೈಷ್ಣವಿಯು ವಾಸಿಸುತ್ತಿದ್ದಳು. ವೈಷ್ಣವಿಯು ತಾರುಣ್ಯದಲ್ಲಿ ಅತ್ಯಂತ ಸುಂದರಿಯಾಗಿದ್ದಳು. ಈಗಲೂ ಅವಳು ಅದನ್ನು ಸಂರಕ್ಷಿಸಿಕೊಳ್ಳುವ ಬಗ್ಗೆ ಪ್ರಯತ್ನಿಸುತ್ತಿದ್ದಳು. ಇವಳು ಬ್ರಾಹ್ಮಣ ಕನ್ಯೆಯೆಂದೂ ಫಿರಂಗಿಗಳು ಇವಳನ್ನು ದೂರದೇಶದಿಂದ ಹಿಡಿತಂದರೆಂದೂ ಜನವಾರ್ತೆಯಿದ್ದಿತು ಒಬ್ಬ ಫಿರಂಗಿ ದಳಪತಿಯು ಇವಳ ಲಾವಣ್ಯಕ್ಕೆ ಮುಗ್ಧನಾಗಿ

ಇವಳನ್ನು ತನ್ನ ಉಪವಸ್ತ್ರವನ್ನಾಗಿಟ್ಟುಕೊಂಡಿದ್ದನು; ತನ್ನ ಇಲ್ಲಿಯ ನೌಕರಿಯ ಅವಧಿಯು ತೀರುತ್ತಲೆ ಅವನು ಸ್ವದೇಶಕ್ಕೆ ಹೊರಟು ಹೋಗೆಲು, ಇವಳು ಕೋಟೆಯಿಂದ ಹೊರಗೆ ಬಂದು ಆ ಕುಟೀರವನ್ನು ಕಟ್ಟಿಸಿಕೊಂಡು ಇರಹತ್ತಿದ್ದಳು. ಆಕೆಯು ಈಗ ಮುದಿಕೆಯಾಗಲಿಕ್ಕಿದ್ದರೂ ಆ ಫಿರಂಗಿಗಳಲ್ಲಿ ಅವಳಿಗೆ ಯಥೇಷ್ಟ ಸನ್ಮಾನವಿದ್ದಿತು. ಆದುದರಿಂದ ಹುಗುಳಿಯ ಹಿಂದುಗಳೆಲ್ಲರೂ ಇವಳನ್ನು ಕಂಡರೆ ಕೃತಾಂತನನ್ನು ಕಂಡಂತೆ ಅಂಜುತ್ತಿದ್ದರು. ಈಕೆಯು ಹುಗಳಿ ದುರ್ಗದ ಹೊರಗಿನ ಫಿರಂಗಿಗಳ ಫೌಜದಾರಳೆಂದೇ ಜನರೆನ್ನುತ್ತಿದ್ದರು.

ಒಂದು ದಿನ ಪ್ರಭಾತದಲ್ಲಿ ವೈಷ್ಣವಿಯು ತನ್ನ ಮನೆಯ ಅಂಗಳದೊಳಗಿನ ತುಳಸೀಕಟ್ಟೆಯ ಮೇಲೆ ಕುಳಿತು ಜಪ ಮಾಡುತ್ತಿದ್ದಳು. ಇಷ್ಟರಲ್ಲಿ ಹೊಳೆಯಲ್ಲಿ ಸ್ನಾನ ಮಾಡಿ ಬಂದ ಒಬ್ಬ ಸುಂದರ ಯುವತಿಯು ಮನೆಯನ್ನು ಪ್ರವೇಶಿಸಿದಳು.

ಅವಳನ್ನು ಕಂಡೊಡನೆ ವೈಷ್ಣವಿಯು ತನ್ನ ಜಪಮಾಲೆಯನ್ನು ತೆಗೆದಿಟ್ಟು:—"ತಂಗೀ, ಬಂದೆಯಾ? ಬಹಳ ತಡವಾಯಿತಲ್ಲ? ತಂಗೀ, ಚೆನ್ನಾಗಿ ಸೆರಗು ಹೊದ್ದುಕೋ" ಎಂದು ಅಂದಳು. ಬಂದ ತರುಣಿಯು ತನ್ನ ನಡಕ್ಕಷ್ಟು ಹೇಗಾದರೊಂದು ವಸ್ತ್ರವನ್ನು ಸುತ್ತಿಕೊಂಡಿದ್ದಳೇ ಹೊರತು, ಮಿಕ್ಕ ಸ್ತನ, ಉರು ಮುಂತಾದ ಭಾಗಗಳನ್ನೆಲ್ಲ ಹಾಗೆಯೇ ಬಿಟ್ಟಿದ್ದಳು. ಆಗ ಆ ಬಂಗಾಲದಲ್ಲಿ ಅವಳಂತಹ ಸುಂದರ ತರುಣಿಯು ಅಷ್ಟು ಲಜ್ಜಾಹೀನಳಾದುದು ಅವಳೇ ಸರಿ. ವೈಷ್ಣವಿಯ ಮಾತಿಗೆ ಆ ತರುಣಿಯು ಆ ಕುಟೀರವು ಹಾರಿಬೀಳುವ ಹಾಗೆ ಗಹಗಹಿಸಿ ನಕ್ಕು:— ಅದೇಕವ್ವಾ ಸೆರಗುಹೊತ್ತುಕೊಳ್ಳುವದು? ಎಂದು ಕೇಳಲು, ವೈಷ್ಣವಿಯು ಒಂದು ನಿಟ್ಟುಸಿರುಗರೆದು ತನ್ನಷ್ಟಕ್ಕೆ ತಾನೆ:—"ನಿನಗೆ ಅದನ್ನೆಲ್ಲ ಹೇಳುವದೆಂತು? ನಿನಗೆ ಹುಚ್ಚು ಹಿಡಿದಿದೆಯೆಂದೇ ಸರಿಹೋಗಿದೆ; ಇಲ್ಲದಿದ್ದರೆ ಈ ಫಿರಂಗಿಗಳ ದಂಡಿನ ಠಾಣ್ಯದಲ್ಲಿ ನಿನ್ನಂತಹ ರೂಪವತಿಯಾದ ತರುಣಿಯ ದುರ್ಗತಿಯು ಆಗದೆ ಹೋಗುತ್ತಿತ್ತೇ? ತಂಗೀ, ನೀನು ಈ ಒದ್ದೆವಸ್ತ್ರವನ್ನು ಬಿಟ್ಟು ಒಣವಸ್ತ್ರವನ್ನುಟ್ಟುಕೊಂಡು ಹೂಗಳನ್ನೆತ್ತಿಕೊಂಡು ಬಾ," ಎಂದು ಅನ್ನಲು, ಆ ಹುಚ್ಚಿಯು ಮತ್ತಿಷ್ಟು ಗಟ್ಟಿಯಾಗಿ ನಕ್ಕು:— "ಅವ್ವಾ, ನನಗೀ ರೂಪ-ತಾರುಣ್ಯಗಳು ಎಲ್ಲಿಂದ ಬಂದವು? ನನಗೆ ಹುಚ್ಚು

ಹೇಗೆ ಹಿಡಿಯಿತು?'' ಇತ್ಯಾದಿ ಪ್ರಶ್ನಮಾಡತೊಡಗಿದಳು. ''ತಂಗೀ, ನಿನ್ನ ಮೇಲೆ ಕೃಪೆಯಿಟ್ಟು ಯಾವನು ನಿನಗೆ ಹುಚ್ಚು ಹಿಡಿಸಿರುವನೋ, ಅದೇ ಪರಮಾತ್ಮನೇ ನಿನಗೀ ಸೌಂದರ್ಯ-ತಾರುಣ್ಯಗಳನ್ನಿತ್ತಿರುವನು. ಅದಿರಲಿ. ನೀನು ಈಗ ಹೂವಿಗೆ ಹೋಗು. ನಾನು ನನ್ನ ಉಳಿದ ಜಪವನ್ನು ಮಾಡುತ್ತೇನೆ'' ಎಂದಂದು ವೈಷ್ಣವಿಯು ಮತ್ತೆ ತುಳಸಿಯಕಟ್ಟೆಯ ಮೇಲೆ ಕುಳಿತು ಜಪಮಾಲೆಯ ಮಣಿಗಳನ್ನೆಳೆಯಲಾರಂಭಿಸಿದಳು.

ಬಳಿಕ ಆ ಹುಚ್ಚ ತರುಣಿಯು ಒದ್ದೆಯನ್ನು ಬಿಟ್ಟು ಬೇರೊಂದು ಕ್ಯಾವೀಬಣ್ಣದ ವಸ್ತ್ರವನ್ನು ಸುತ್ತಿಕೊಂಡಳು; ಹಾಗು ಅಲ್ಲಿಯೇ ಇದ್ದ ಹೂವಿನ ಬುಟ್ಟಿಯನ್ನು ತಕ್ಕೊಂಡು ನದೀತಟಾಕದಲ್ಲಿಯ ಹೂಗಳನ್ನೆತ್ತ ಹೋದಳು. ಕೆಲಕ್ಷಣಗಳ ನಂತರ ಆ ಹುಚ್ಚಿಯು ''ಅವ್ವಾ-ಅವ್ವಾ'' ಎಂದು ಚೀರುತ್ತ ಓಡಿ ಬಂದಳು. ಹುಚ್ಚಿಯ ಕೂಗಾಟಕ್ಕೆ ಗಾಬರಿಗೊಂಡು ನೆರೆಹೊರೆಯ ಆಬಾಲವೃದ್ಧರೂ ಅಲ್ಲಿ ಕಲೆತರು. ಆ ದನಿಯನ್ನು ಕೇಳಿ ವಿನೋದಿನಿಯ ಸೊಂಡೆಯು ಒಣಗಿ ಹೋಯಿತು. ಆಕೆಯು ಮತ್ತೆ ತನ್ನ ಜಪಮಾಲೆಯನ್ನು ತೆಗೆದಿಟ್ಟು ಎದ್ದುನಿಂತಳು. ಅಷ್ಟರಲ್ಲಿ ಆ ಹುಚ್ಚಿಯು ಸಮೀಪಕ್ಕೇ ಬಂದಿದ್ದಳು. ವೈಷ್ಣವಿಯನ್ನು ಕಂಡು ಹುಗುಳಿಯ ಎಲ್ಲ ಜನರು ಹೆದರುತ್ತಿದ್ದರೂ, ಆ ಹುಚ್ಚಿಯನ್ನು ಅವರೆಲ್ಲರೂ ಪ್ರೀತಿಸುತ್ತಿದ್ದರು. ಹುಚ್ಚಿಯು ಓಡಿ ಬಂದವಳೇ ವೈಷ್ಣವಿಯನ್ನು ತೆಕ್ಕೆಬಿದ್ದು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ''ಏನಾಯಿತು-ಏನಾಯಿತು?'' ಎಂದು ಯಾರು ಕೇಳಿದರೂ ಅವಳು ಉತ್ತರ ಕೊಡದಾದಳು.

ಹೀಗೆ ಎಷ್ಟೋ ನಿಮಿಷಗಳು ಕಳೆದು ಹೋದಬಳಿಕ ವಿನೋದಿನಿಯು ಅವಳನ್ನು ಕುಟೀರದೊಳಗೆ ಕರೆದೊಯ್ದು ಹಲವು ಬಗೆಯಿಂದ ಸಂತಯಿಸಿದಳು. ಆಗ ಹುಚ್ಚಿಯ ಶೋಕವು ತುಸ ಕಡಿಮೆಯಾಯಿತು. ''ತಂಗೀ, ಏನಾಯಿತು? ಅಳುವೆಯೇಕೆ?'' ಎಂಬ ವಿನೋದಿನಿಯ ಪ್ರಶ್ನೆಗೆ ''ಅವ್ವಾ, ಅವರು ಬಂದಿರುವರು'' ಎಂದಂದು ಮತ್ತೆ ಅಳಹತ್ತಿದಳು. ''ಯಾರು ಬಂದಿರುವರವ್ವಾ?'' ''ಅವರು-ಅವರೇ ಬಂದಿರುವರವ್ವಾ'' ''ಅವರೆಂದರೆ ಯಾರೇ? ಅವರು ನಿನಗೇನಾಗಬೇಕು?'' ''ಏನಾಗಬೇಕೆಂಬದನ್ನು ನಾನರಿಯೆ. ಅವರ ಗುರುತು ಮಾತ್ರ ಹತ್ತಿದ್ದರಿಂದ ಅವರೇ ಅವರೆಂದು ತಿಳಿದೆನು'' ''ಅವರನ್ನು ಎಲ್ಲಿ ಕಂಡೆ? ಈಗ ಅವರೆಲ್ಲಿರುತ್ತಾರೆ?'' ''ಹೊಳೆಯ

ದಂಡೆಯು ಹಸರು ಹುಲ್ಲಿನ ಮೇಲೆ ಮಲಗಿಕೊಂಡಿರುತ್ತಾರೆ'' ''ಅವರನ್ನು ಇಲ್ಲಿಗೆ ಕರೆತರಲಿಲ್ಲೇಕೆ' ''ಎಷ್ಟೋ ಸಾರೆ ಕರೆದೆನು. ಅವರು ಏಳಲೇ ಇಲ್ಲವಮ್ಮಾ'' ''ಅವರ ಹೆಸರೇನು?'' ''ನನಗೆ ನೆನಪಿಲ್ಲ'' ''ಅವರು ಎಲ್ಲಿಯವರು?'' ''ಅವರು ನಮ್ಮ ಊರವರಲ್ಲದೆ ಮತ್ತೆಲ್ಲಿಯವರು?'' ''ನಿಮ್ಮ ಊರು ಯಾವದು?'' ''ಊರ ಹೆಸರು ನೆನಪಿಲ್ಲ. ಅದೂ ಹೊಳೆಯ ದಂಡೆಯೇ'' ''ನಡೆ ನೋಡೋಣ, ಅವರಾರೆಂಬದನ್ನು'' ಎಂದಂದು ವೈಷ್ಣವಿಯು ಹುಚ್ಚಿಯೊಡನೆ ನದೀತಟಾಕಕ್ಕೆ ನಡೆದಳು. ನೆರೆದ ಜನರ ಗುಂಪೂ ಅವರೊಡನೆ ಹೋಯಿತು. ಎಲ್ಲರೂ ಹೊಳೆಯ ದಂಡೆಗೆ ಹೋಗಿ ನೋಡುತ್ತಾರೆ, ಹಸರು ಚಿಗುರು ಹುಲ್ಲಿನ ಮೇಲೆ ಒಬ್ಬ ಗೌರವರ್ಣದ ತರುಣನು ನಿಶ್ಚೇಷ್ಟಿತನಾಗಿ ಬಿದ್ದುಕೊಂಡಿದ್ದಾನೆ ಯುವಕನ ಸರ್ವಾಂಗ ಗಳಲ್ಲೂ ಅಸ್ತ್ರಘಾತದ ಸಣ್ಣದೊಡ್ಡ ಚಿಹ್ನಗಳಿದ್ದು, ಅವುಗಳಿಗೆಲ್ಲ ಬಿಳೀ ಬಟ್ಟೆಯಿಂದ ಕಟ್ಟಿದ್ದಾರೆ ಆ ಯುವಕನ ಆಗಿನ ದೇಹಸ್ಥಿತಿಯನ್ನು ಕಂಡು ಇದು ಹೊಳೆಯೊಳಗೆ ತೇಲಿಬಂದ ಹೆಣವೆಂದು ತಿಳಿದು, ಯಾರೂ ಅದರ ಹತ್ತರ ಹೋಗದಾದರು; ಆದರೆ ಹುಚ್ಚಿಯು ಮಾತ್ರ ಒಳ್ಳೇ ಸಂಭ್ರಮ ದಿಂದ ಹೋಗಿ ಅದರ ಮಗ್ಗಲಲ್ಲಿ ಕುಳಿತುಕೊಂಡಳು. ಅವಳು ಆ ಯುವ ಕನ ಬಲಗೈಯನ್ನು ಎತ್ತಿ ಹಿಡಿದು:—''ಅವ್ವಾ, ಇವರು ಸತ್ತಿರುವದಿಲ್ಲ; ನೀವೆಲ್ಲರೂ ಅಷ್ಟು ದೂರ ನಿಂತಿರ ವುದೇಕೆ? ಅವ್ವಾ, ಇವರನ್ನು ಮನೆಗೆ ಕರೆದೊಯ್ಯಬೇಕು'' ಎಂದಂದಳು.

ಆಗ ವಿನೋದಿನಿಯು ಅಲ್ಲಿಗೆ ಹೋಗಿ ಆ ದೇಹಕ್ಕೆ ಕೈ ಹಚ್ಚಿ ನೋಡಿ ದಳು; ನಾಡಿ ಹಿಡಿದು ಪರೀಕ್ಷಿಸಿದಳು; ಮೂಗಿನ ಬಳಿಗೆ ಕೈ ಹಿಡಿದು ಪರೀಕ್ಷಿಸಿದಳು ಪ್ರಾಣವಿರುವದೆಂದು ಖಾತ್ರಿಯಾದ ಕೂಡಲೆ ಅವಳು ನೆರೆದ ಜನರ ಸಹಾಯದಿಂದ ಅವನನ್ನು ತನ್ನ ಕುಟೀರಕ್ಕೆ ಕರೆದೊಯ್ದಳು. ಮನೆಗೆ ತಂದಬಳಿಕ ವೈಷ್ಣವಿಯು ಅವನ ಮೈಮೇಲಿನ ಒದ್ದೆ ಬಟ್ಟೆಗಳ ನ್ನೆಲ್ಲ ಬಿಚ್ಚಿ, ಒಣ ವಸ್ತ್ರಗಳನ್ನು ಉಡಿಸಿ-ತೊಡಿಸಿ, ಅವನನ್ನು ತನ್ನ ಸ್ವಂತದ ಪಲ್ಲಂಗದ ಮೇಲೆ ಮೆತ್ತನ್ನ ಹಾಸಿಗೆ ಮಾಡಿ ಮಲಗಿಸಿದಳು. ನಂತರ ಹುಚ್ಚಿಯನ್ನು ಅವನ ಹತ್ತರವೇ ಕುಳ್ಳಿರಿಸಿ, ತಾನು ಹಕೀಮನನ್ನು ಕರೆಯ ಲಿಕ್ಕೆ ಹೊರಟಳು. ಇಷ್ಟರಲ್ಲಿ ಹುಚ್ಚಿಯು ''ಅವ್ವಾ-ಅವ್ವಾ'' ಎಂದು ಕೂಗಿದಳು. ಕೆಲದೂರ ಹೋಗಿದ್ದ ವಿನೋದಿನಿಯು ಕೂಡಲೆ ಧಾವಿಸುತ್ತ

ಮನೆಗೆ ಬರಲು, “ಅವ್ವಾ, ನೀನು ಫಿರಂಗೀ ಡಾಕ್ಟರನನ್ನು ಕರೆತರಬೇಡ. ಊರೊಳಗಿನ ಹಿಂದೂ ವೈದ್ಯನನ್ನು ಕರೆದುಕೊಂಡು ಬಾ” ಎಂದು ಹೇಳಿದಳು. ಹುಚ್ಚಿಯು ಆ ನುಡಿಯನ್ನು ಕೇಳಿ, ನೆರೆದ ಜನರೆಲ್ಲರೂ ಹಿಂದು ವಿಶಿಷ್ಟ ಭಾವನೆಯಿಂದ ಪ್ರೇರಿತರಾಗಿ ಖೊಳ್ಳೆಂದು ನಕ್ಕರು. ವಿನೋದಿನಿಯು ಮನಸ್ಸಿನಲ್ಲಿ ಹೆಚ್ಚಾಗಿ ನೊಂದುಕೊಂಡರೂ, ಹುಚ್ಚಿಯ ಸೂಚನೆಯ ಪ್ರಕಾರ ಊರ ಕಡೆಗೆ ಭರದಿಂದ ಸಾಗಿದಳು

ಕೆಲಹೊತ್ತಿನ ಮೇಲೆ ಯುವಕನು ಕಣ್ಣು ತೆರೆದನು. ಆಗ ಆ ಹುಚ್ಚಿಯು ಅವನ ಹತ್ತಿರ ಕುಳಿತು ತಲೆಯನ್ನು ಒತ್ತುತ್ತಿದ್ದಳು. ತರುಣನು ಅವಳನ್ನು ಕಂಡು:—“ಲಲಿತಾ, ಇದು ಸ್ವಪ್ನವಲ್ಲವಷ್ಟೇ?” ಹುಚ್ಚಿಗೆ ಅವನ ಮಾತು ತಿಳಿಯದ್ದರಿಂದಲೋ ಏನೋ ಅವಳು ಅವನ ಮುಖದ ಕಡೆಗೆ ಕಟಕಮುಕ ನೋಡುತ್ತ ಸುಮ್ಮನೆ ಕುಳಿತಿದ್ದಳು. ಅವಳಿಂದ ಉತ್ತರವು ದೊರೆಯದಾಗಲು ಅವನು ಮತ್ತೆ:—ಲಲಿತಾ, ಈ ವೇಷವನ್ನು ನೀನು ಎಲ್ಲಿ ಧರಿಸಕಲಿತೆ? ಎಂದು ಅಂದನು.

ಹಿಂದು ತಿಂಗಳಿನಿಂದಲೂ ಆ ಹುಚ್ಚಿಯನ್ನು “ಲಲಿತಾ” ಎಂದು ಯಾರೂ ಕರೆದಿರಲಿಲ್ಲ. ಇಂದು ತನ್ನ ಆ ನಿಜವಾದ ಹೆಸರಿನಿಂದ ತನ್ನನ್ನು ಸಂಬೋಧಿಸುತ್ತಲೆ, ಅವಳಲ್ಲಿಯ ಮುಬ್ಬು ತುಸ ಬಯಲಾಯಿತು. ಆಗ ಆ ಹುಚ್ಚಿಯು ಅಲ್ಲ-ಅಲ್ಲ ಲಲಿತೆಯು:—“ನೀವು ಏನು ಅನ್ನುವಿರೋ ನನಗೆ ತಿಳಿಯಲೊಲ್ಲದು” “ಲಲಿತಾ, ನೀನು ಸೆರಗನ್ನೇಕೆ ಹೊದ್ದುಕೊಂಡಿಲ್ಲ? ಹೀಗೇಕೆ ಹುಚ್ಚಿಯ ಹಾಗೆ ಕುಳಿತಿರುವೆ? ಇಂಥ ಸ್ಥಿತಿಯಲ್ಲೂ ನೀನು ಎಷ್ಟು ಮನೋಹರಳಾಗಿ ತೋರುತ್ತೀಯಲ್ಲ! ಕೆಲಹೊತ್ತಿನ ಮುಂಚೆ ನೀನು ಆ ನಾವಿನ ಮೇಲೆ ಎಂಥ ಭವ್ಯವಾದ ಪೋಷಾಕನ್ನು ಯುವನಿಯ ಹಾಗೆ ಎಷ್ಟು ಸುಂದರವಾಗಿ ಉಟ್ಟಿದ್ದೆ, ಯಾವ ಹೆಸರನ್ನಿಟ್ಟುಕೊಂಡಿದ್ದೆ, ಕೈಯಲ್ಲಿ ಸತಾರನ್ನೇನು ಹಿಡಿದಿದ್ದೆ, ಸುಮಿಷ್ಟವಾಗಿ ಗಾಯನವನ್ನೇನು ಮಾಡುತ್ತಿದ್ದೆ ಹಾಗು ಈಗ ಕೇವಲ ಹುಚ್ಚಿಯಂತೆ ಇದೇನು ವೇಷಧರಿಸಿರುವೆ? ಲಲಿತಾ, ನೀನು ಈ ಬಹುರೂಪೀ ಕಲೆಯನ್ನೆಲ್ಲಿ ಕಲಿತೆ, ಸತಾರ ಬಾರಿಸಲಿಕ್ಕೆಂದಿನಿಂದ ಆರಂಭಿಸಿದೆ?”

“ನನಗೆ ಸತಾರ ಬಾರಿಸಲೂ ಬರುವದಿಲ್ಲ, ವೇಷಧರಿಸಲೂ ಬರುವದಿಲ್ಲ; ಹಾಗು ಎಷ್ಟೋ ದಿನಗಳಿಂದ ನಾನು ಹೋಣೆಯನ್ನೂ ಹತ್ತಿರುವ

ದಿಲ್ಲ.'' ''ಹಾಗಾದರೆ ಇದೆಲ್ಲವೂ ಸ್ವಪ್ನವೇ ಏನು?'' ಎಂದವನೇ ಆ ತರುಣನು ಮತ್ತೆ ಕಣ್ಣು ಮುಚ್ಚಿದನು. ಅನೇಕ ಮಾನಸಿಕ ಹಾಗು ದೈಹಿಕ ಸಂತಾಪದಿಂದ ಅವನಿಗೆ ಮತ್ತೆ ಬವಳಿ ಬಂದಿತು. ಹೀಗೆ ಅವನು ಆ ಚೇತನಾವಿಹೀನ ಸ್ಥಿತಿಯಲ್ಲಿ ಮತ್ತೆ ಅರ್ಧಗಂಟೆ ಕಳೆಯಲು, ಅವನಿಗೆ ಸ್ಮೃತಿಯುಂಟಾಗಿ ಕಣ್ಣು ತೆರೆದನು. ಆಗಲೂ ಆ ಹುಚ್ಚಿಯು ಅವನ ತಲೆಯ ಬಳಿಯಲ್ಲಿ ಕುಳಿತೇ ಇದ್ದಳು ಅವನು ಕಣ್ಣು ತೆರೆದದ್ದನ್ನು ನೋಡಿ ದೊಡನೆ ಲಲಿತೆಯು:—''ನಿಮ್ಮ ನಿದ್ದೆಯು ಇನ್ನೂ ತೀರಲೊಲ್ಲದೋ?'' ''ತೀರಿತು-ತೀರಿತು. ಈಗ ನಾವೆಲ್ಲಿರುವೆವು? ಭೀಮೇಶ್ವರದಲ್ಲಿಯೋ-ಗೌರೀ ಪುರದಲ್ಲಿಯೋ?''

ಆ ಊರ ಹೆಸರುಗಳನ್ನು ಕೇಳಿದೊಡನೆಯೇ ಲಲಿತೆಯ ಮಬ್ಬು ಮತ್ತಿಷ್ಟು ಹರಿಯಿತು. ಆಗ ಅವಳಿಗೆ ತಮ್ಮ ಊರು, ತಮ್ಮ ಊರ ಹೊಳೆ, ನದಿಯ ಘಾಟು, ಕಡೆಗೆ ತನ್ನನ್ನು ಆ ಘಾಟನಿಂದ ಫಿರಂಗಿಗಳು ಅಪಹರಿಸಿದ ವರೆಗಿನ ಸಮಸ್ತ ಸಂಗತಿಗಳ ನೆನಪಾಯಿತು; ಆದರೆ ಅಂದು ತಾನು ಆ ನಾವಿನಲ್ಲಿ ಸ್ಮೃತಿದಪ್ಪಿ ಬಿದ್ದ ಬಳಿಕ ಇಂದಿನ ವರೆಗೆ ಏನಾಯಿ ತೆಂಬದೊಂದೂ ಅವಳಿಗೆ ತಿಳಿಯಲೊಲ್ಲದು. ಅವಳು ಮಹಾ ಗೊಂದಲ ದಲ್ಲಿ ಬಿದ್ದಳು!

ಇಷ್ಟರಲ್ಲಿ ವಿನೋದಿನಿಯು ವೈದ್ಯನೊಡನೆ ಅಲ್ಲಿಗೆ ಬಂದಳು. ವೈದ್ಯ ನನ್ನು ಕಂಡೊಡನೆ ಲಲಿತೆಯು ಮೈತುಂಬ ಸೆರಗು ಹೊತ್ತುಕೊಂಡು ಒತ್ತಟ್ಟಿಗೆ ಮೋರೆ ತಿರುವಿ ಕುಳಿತಳು ಹುಚ್ಚಿಯ ಆ ಮುರಕವನ್ನು ಕಂಡು ವೈಷ್ಣವಿಯು ಬೆರಗಾದಳು; ಆದರೆ ಆಗ ಅವಳು ಆ ಬಗ್ಗೆ ಏನೂ ಮಾತಾ ಡಲಿಲ್ಲ. ವೈದ್ಯನು ತರುಣನ ನಾಡಿಪರೀಕ್ಷೆ ಮಾಡಿ, ಔಷಧ ಹಾಗು ಲೇಪ ಗಳನ್ನು ಕೊಟ್ಟು ತನ್ನ ದಕ್ಷಿಣೆಯನ್ನು ಪಡಕೊಂಡು ಹೊರಟು ಹೋದನು. ನಂತರ ವಿನೋದಿನಿಯು:—ತಂಗೀ, ಫಿರಂಗಿಗಳ ಉಪಟಳಕ್ಕಾಗಿ ಈ ಹುಗು ಳಿಯಲ್ಲಿ ಒಬ್ಬ ಚಲೋ ವೈದ್ಯನೂ ಉಳಿದಿರುವದಿಲ್ಲ. ಇವನನ್ನು ಹುಡುಕಿ ಕರೆತರಬೇಕಾದರೆ ಸಾಕು ಸಾಕಾಯಿತು. ಅದಿರಲಿ ತಂಗೀ, ನೀನಿಂದು ಸೆರಗುಹೊತ್ತು ಅತ್ತ ಮೋರೆ ಮಾಡಿ ಕುಳಿತಕಾರಣವೇನು? ಎಂದು ಪ್ರಶ್ನೆ ಮಾಡಿದಳು. ಲಲಿತೆಯು ತನ್ನ ದುಃಖವನ್ನು ಬಚ್ಚಿಡಲಿಕ್ಕೆ ಅಸಮ ರ್ಥಳಾಗಲು, ಅವಳು ಒಮ್ಮೆಲೆ ಬಂದು ವೈಷ್ಣವಿಯ ಕೊರಳಿಗೆ ತೆಕ್ಕೆಬಿದ್ದು

ಘೋರೆಂದು ಅಳಹತ್ತಿದಳು. ವಿನೋದಿನಿಯು ಅವಳನ್ನು ಪರಿಪರಿಯಾಗಿ ಸಮಾಧಾನಪಡಿಸಿದ ಬಳಿಕ ಅವಳು:—“ಅವ್ವಾ, ನೀನು ಯಾರವ್ವಾ? ನಾನು ನಿನಗೆಲ್ಲಿ ದೊರೆತೆನು? ಇಂದು ನನ್ನ ಕಣ್ಣಿನ ಮಬ್ಬೆಲ್ಲ ಬಯಲಾಗಿ ಹೋಗಿದೆ. ನಾನು ಗೌರೀಪುರದ ರಾಧಾಮೋಹನ ಗೋಸ್ವಾಮಿಯ ಮಗಳು. ಭೀಮೇಶ್ವರದ ಘಾಟಗೆ ಸ್ನಾನಕ್ಕಾಗಿ ಬಂದಿರುವಾಗ ಫಿರಂಗಿಗಳು ನನ್ನನ್ನು ಅಪಹರಿಸಿ ತಂದಿರುವರು; ಆದರೆ ಅವ್ವಾ, ನಾವು ಈಗ ಇರುವದು ಯಾವ ಊರವ್ವಾ?”

ಲಲಿತೆಯು ಆ ಆತ್ಮವೃತ್ತವನ್ನು ಕೇಳಿ ವಿನೋದಿನಿಯು ಹಣೆ ಹಣೆ ಬಡಕೊಳ್ಳುತ್ತ ಒಮ್ಮೆಲೆ ನೆಲಕ್ಕೆ ಕುಸಿಕುಳಿತಳು!

\+ \+ \+ \+ \+ \+

ಯಾವಾಗ ವೈಷ್ಣವಿಯು ವೈದ್ಯನೊಡನೆ ತನ್ನ ಕುಟೀರವನ್ನು ಪ್ರವೇಶಿಸಿದಳೋ, ಅದೇ ಕಾಲಕ್ಕೆ ಹುಗಳಿಯ ದುರ್ಗದಲ್ಲಿ ಒಂದು ಕಗ್ಗತ್ತಲೆಯ ಕೋಣೆಯಲ್ಲಿ ಕೆಲವು ಜನ ಫಿರಂಗಿಪಾದ್ರಿಗಳು ಸೇರಿ ಎರಡು ಜನ ಪರಧರ್ಮೀಯರಿಗೆ ತಮ್ಮ ಅತ್ಯುತ್ತಮ ಕ್ರಿಸ್ತೀಧರ್ಮದ ದೀಕ್ಷೆಕೊಡಲಿಕ್ಕೆ ಪ್ರಯತ್ನಿಸುತ್ತಿದ್ದರು. ಆ ಪರಧರ್ಮೀಯರಲ್ಲಿ ಒಬ್ಬನು ಸ್ಥೂಲಕಾಯದ ಕಪ್ಪುವರ್ಣದ ಬೈರಾಗಿಯು; ಇನ್ನೊಬ್ಬನು ಶ್ಯಾಮವರ್ಣದ ಕೃಶಕಾಯದ ಪಾರುವನು. ಬೈರಾಗಿಯು ಪಾದ್ರಿಗಳ ಉಪದೇಶವನ್ನು ಕೇಳಲಾರದೆ ಒತ್ತಟ್ಟಿಗೆ ಮೋರೆ ತಿರುವಿ ಕಿವಿಗಳಲ್ಲಿ ಬೊಟ್ಟು ಹಾಕಿಕೊಂಡಿದ್ದನು; ಬ್ರಾಹ್ಮಣನು ಅವರು ಏನೇನು ನುಡಿಯುತ್ತಿದ್ದರೋ ಅದನ್ನು ಕೇಳುತ್ತ ವಿಚಾರಮಗ್ನನಾಗಿದ್ದನು ಸ್ಥೂಲಕಾಯದ ಬೈರಾಗಿಯ ಆ ಮುಠ್ಠಾಳತನವನ್ನು ಕಂಡು ಪಾದ್ರಿಗಳಿಗೆ ಅನಿವಾರವಾದ ಕೋಪವುಂಟಾಯಿತು. ತಮ್ಮ ಪ್ರಯತ್ನವು ಇವನಲ್ಲಿ ಸಫಲವಾಗಲಾರದೆಂಬದು ಖಾತ್ರಿಯಾದೊಡನೆ ಆ ಪಾದ್ರಿಗಳ ಮುಖ್ಯಸ್ಥನು ಬೈರಾಗಿಯನ್ನುದ್ದೇಶಿಸಿ:—“ಚೈತನ್ಯದಾಸ, ನೀನು ಯೇಸೂಕ್ರಿಸ್ತನ ಪವಿತ್ರ ಸಂದೇಶವನ್ನು ಕೇಳಲೊಲ್ಲೆ; ಅದರಿಂದ ನಿನ್ನ ಹಣೇಬರಹದಲ್ಲಿ ಅನಂತ ಕ್ಲೇಶಗಳು ಬರೆಯಲ್ಪಟ್ಟಂತೆ ತೋರುತ್ತದೆ” ಎಂದೆನ್ನಲು, “ಸಾಹೇಬ, ಹುಟ್ಟಿದಂದಿನಿಂದಲೂ ನಾನು ದುಃಖಕೂಪದಲ್ಲಿಯೇ ತೊಳಲಾಡುತ್ತಿರುವೆನು. ಬೈರಾಗಿಯಾಗಿಯೂ ನನ್ನಲ್ಲಿಯ ದುಡ್ಡಿನ ಲೋಭವು ಹೋಗದ್ದರಿಂದ, ನಾನು ಕಡುದುಃಖಕ್ಕೆ ಪಾತ್ರನೇ

ಆಗಿರುತ್ತೇನೆ.'' ಎಂದು ಚೈತನ್ಯದಾಸನು ಮುಗುಳು ನಗೆಯಿಂದ ನುಡಿದನು. ''ನೀನು ನಿನ್ನ ಮನಸ್ಸಿಗೆ ಬಾರದ್ದನ್ನು ತಿನ್ನುಣ್ಣಬೇಡ, ಕುಡಿಯಬೇಡ; ಆದರೆ ಪರಮದಯಾಲುವೂ, ಸರ್ವಜಗದುದ್ಧಾರಕರ್ತನೂ ಆಗಿರುವ ಯೇಸುವಿನ ಸತ್ಪಥವನ್ನು ಅವಲಂಬಿಸು; ಅಂದರೆ ತೀರಿತು''

''ಸಾಹೇಬ, ನಾನು ಈಗ ಯಾವ ಪಂಥವನ್ನು ಸ್ವೀಕರಿಸಿರುವೆನೋ, ಅದರ ಮಾರ್ಗದಿಂದಲೇ ನಡೆಯಲಾರದವನಾಗಿದ್ದೇನೆ. ಇಂಥದರಲ್ಲಿ ನಿಮ್ಮ ಹೊಸಪಂಥವನ್ನು ಸ್ವೀಕರಿಸಿ ಮಾಡುವದೇನು? ಸಾಹೇಬ, ನಿಮ್ಮ ಕ್ರಿಸ್ತನೂ ದೇವರೇ; ನಮ್ಮ ಕೃಷ್ಣನೂ ದೇವರೇ. ವಸ್ತುಸ್ಥಿತಿಯು ಹೀಗಿರಲು, ನೀವು ಸುಮ್ಮನೆ ನನ್ನನ್ನೇಕೆ ಪೀಡಿಸುತ್ತಿರುವಿರಿ?''

''ನಿಮ್ಮ ಕೃಷ್ಣನು ದೇವರಲ್ಲ; ಕಪಟಿಯಾದ ಮನುಷ್ಯನು. ಅವನಂತಹ ಪರಸ್ತ್ರೀರತನು ದೇವರಾಗಬಲ್ಲನೆ?...........''

ಚೈತನ್ಯದಾಸನು ಕಿವಿಯಲ್ಲಿ ಬೊಟ್ಟುಹಾಕಿಕೊಂಡು:—''ಕೃಷ್ಣನಿಂದೆಯನ್ನು ಕೇಳಲಾಗದು. ಪಾದ್ರೀ, ನಿನ್ನ ಮನಸ್ಸಿಗೆ ಬಂದ ಹಾಗೆ ಅಂದುಕೋ, ನಮ್ಮ ಕೃಷ್ಣನು ನಾನಂದಂತೆ ಪರಮದೈವತವೇ ಆಗಿರುವನು.''

ಪಾದ್ರಿಯು ಸಿಟ್ಟಿನಿಂದ ನಡುಗಹತ್ತಿದನು. ಅವನು ಯಮದೂತಸದೃಶರಾದ ಇಬ್ಬರು ಕರೀವರ್ಣದ ಮನುಷ್ಯರನ್ನು ಕೂಗಿದನು. ಅವರು ಧಾವಿಸುತ್ತ ಬಂದವರೇ, ಚೈತನ್ಯದಾಸ ಬೈರಾಗಿಯನ್ನು ಒಂದು ಬಹುದೊಡ್ಡದಾದ ಚಕ್ರಕ್ಕೆ ಬಿಗಿದರು. ಅದನ್ನು ಕಂಡು ಅಲ್ಲಿದ್ದ ಆ ಹಾರುವನು ಕಣ್ಣುಮುಚ್ಚಿದನು. ಚಕ್ರಕ್ಕೆ ಬಿಗಿಯಲ್ಪಟ್ಟ ಬಳಿಕ ಚೈತನ್ಯದಾಸನು ಕಣ್ಣುಮುಚ್ಚಿಕೊಂಡು:—''ರಾಧೇಕೃಷ್ಣ-ರಾಧೇಕೃಷ್ಣ'' ಎಂದು ನಾಮಸಂಕೀರ್ತನ ಮಾಡಹತ್ತಿದನು ಅದನ್ನು ಕಂಡು ಬೆರಗಾದ ಪಾದ್ರಿಯು: ''ಎಲೈ ಬೈರಾಗಿಯೇ ಈಗಲಾದರೂ ನಿನ್ನ ಆ ನೀಚ ಕೃಷ್ಣನನ್ನು ಮರೆತು, ನಮ್ಮ ಪರಮ ದಯಾಲು ಯೇಸುವಿನನ್ನು ಸ್ತುವಿಸು'' ಎಂದು ಹೇಳಿದನು. ಬೈರಾಗಿಯು ಅವನ ಮಾತಿನ ಕಡೆಗೆ ಲಕ್ಷ್ಯಗೊಡದೆ ಕೃಷ್ಣನಾಮಸಂಕೀರ್ತನವನ್ನು ಗಟ್ಟಿಗಟ್ಟಿಯಾಗಿ ಮಾಡಹತ್ತಿದನು. ಆಗ ಪಾದ್ರಿಯ ಅಪ್ಪಣೆಯ ಮೇರೆಗೆ ಆ ಚಕ್ರವು ಭರದಿಂದ ತಿರುಗಹತ್ತಿತು. ಆ ಚಕ್ರಭ್ರಮಣದ ಕೂಡ ಚೈತನ್ಯದಾಸನ ಕೈ ಕಾಲು ಟೊಂಕ ಮುಂತಾದವುಗಳಲ್ಲಿಯ ಎಲ್ಲ ಎಲುವುಗಳೂ ಪುಡಿಪುಡಿಯಾದವು! ಭೀಷಣವಾದ ಕ್ಲೇಶದಿಂದ ಬೈರಾ

ಗಿಯ ಕಣ್ಣೊಳಗಿಂದ ಅಶ್ರುಗಳು ಧಾರೆಗಟ್ಟಿ ಸುರಿಯಲಾರಂಭಿಸಿದವು. ಆದರೂ ಅವನು ತನ್ನ ನಾಮಸಂಕೀರ್ತನವನ್ನು ಬಿಡಲಿಲ್ಲ! ಅವನ ಬಾಯಿಂದ ಕ್ಲೇಶದ್ಯೋತಕವಾದ ಒಂದು ಶಬ್ದವೂ ಹೊರಡಲಿಲ್ಲ.

ಕೆಲಕಾಲದ ನಂತರ ಚೈತನ್ಯದಾಸನು ನಡುಗುವ ದನಿಯಿಂದ:— "ಕೃಷ್ಣಾ, ನನಗೆ ಇನ್ನೊಮ್ಮೆ ದರ್ಶನ ಕೊಡು. ನನಗೆ ಕ್ಲೇಶವಿಲ್ಲ, ದುಃಖವಿಲ್ಲ. ಪರಮಾತ್ಮಾ, ಇದೇ ರೀತಿಯಾಗಿ ಇನ್ನೊಮ್ಮೆ ನನಗೆ ನಿನ್ನ ದರ್ಶನವಾಗಲಿ" ಬೈರಾಗಿಯ ನುಡಿ ಕೇಳಿ ಬ್ರಾಹ್ಮಣನ ಅಂಜಿಕೆಯು ಬಯಲಾಯಿತು. ಅಷ್ಟರಲ್ಲಿ ಆ ಚಕ್ರಭ್ರಮಣವು ನಿಲ್ಲಲು, ಅವನು ಚೈತನ್ಯದಾಸನ ಬಳಿಗೆ ಹೋಗಿ ಅವನ ಮೈಗೆ ಕೈಹಚ್ಚಿ ನೋಡಿದನು. ಆಗ ಬೈರಾಗಿಯು ಮತ್ತೆ:—"ಪ್ರಭೋ, ಇದಂತೂ ನಿನ್ನ ಹಸ್ತಸ್ಪರ್ಶವಲ್ಲ; ಇದು ಯಾರದೋ ಕಠೋರ ಹಸ್ತವಾಗಿದೆ. ಗೋಪೀಮನವಿನೋದಾ, ನಿನ್ನ ಬೆಣ್ಣೆಯಂತಹ ಕೋಮಲ ಕರವನ್ನು ಇನ್ನೊಮ್ಮೆ ನನ್ನ ಬೆನ್ನ ಮೇಲೆ ಎಳೆ. ರಾಧೇಕೃಷ್ಣ-ರಾಧೇಕೃಷ್ಣ," ಎಂದು ಅಂದನು.

ಆಗ ಬ್ರಾಹ್ಮಣನು ಅವನನ್ನು ಕುರಿತು:-"ಬೈರಾಗಿ, ನಿನಗೆ ಈಗ ಏನು ಕಾಣಿಸುತ್ತದೆ?" "ಕೃಷ್ಣಪರಮಾತ್ಮನು ಒಳ್ಳೇ ನಯನಮನೋಹರವಾಗಿರುವನು ಇನ್ನು ನನಗೆ ಹೆದರಿಕೆಯಿಲ್ಲ. ರಾಧೇಕೃಷ್ಣನ್ನು ಬಂದಿರುವನು; ನನ್ನ ತಲೆಯ ಹತ್ತರ ನಿಂತುಕೊಂಡಿರುತ್ತಾನೆ. ಆತನ ಕರಸ್ಪರ್ಶದಿಂದ ನನ್ನ ಎಲ್ಲ ಯಾತನೆ-ಕ್ಲೇಶಗಳೂ ನಿರ್ನಾಮವಾಗಿವೆ."

ಬೈರಾಗಿಯ ಈ ಸಂಭಾಷಣವನ್ನು ಕೇಳಿ, ಬ್ರಾಹ್ಮಣನ ಶರೀರವು ಪುಲುಕಿತವಾಯಿತು. ಪಾದ್ರಿಯು ಚೈತನ್ಯದಾಸನನ್ನು ಕಟ್ಟಿ ತಿರುಗಿಸುತ್ತಿದ್ದ ಆ ಚಕ್ರವೇ ಕೃಷ್ಣಪರಮಾತ್ಮನಾಗಿ ಅವನಿಗೆ ಭಾಸವಾಯಿತು. ಅವನು ನಿಂತಲ್ಲಿಯೇ ಸಾಷ್ಟಾಂಗ ನಮಸ್ಕಾರ ಹಾಕಿ ಆ ಅಶರೀರ ಪರಮಾತ್ಮನನ್ನು ಸ್ತುತಿಸಿದನು. ಇಷ್ಟರಲ್ಲಿ ಆ ದುರ್ಗಂಧಪೂರ್ಣ ಕಗ್ಗತ್ತಲೆಯ ಕಾರಾಗೃಹದಲ್ಲಿ ಸುಗಂಧಯುಕ್ತ ನಸುಗಾಳಿಯು ಸುಳಿಯಹತ್ತಿದಂತೆಯೂ, ಕೋಣೆ ತುಂಬೆಲ್ಲ ಉತ್ತಮ ಪ್ರಕಾಶವು ಬಿದ್ದಂತೆಯೂ ಆ ಪಾರುವನಿಗೆ ತೋರಿತು. ಆ ಚೈತನ್ಯದಾಸ ಬೈರಾಗಿಯಲ್ಲೇ ಕೃಷ್ಣಪರಮಾತ್ಮನು ಒಡಮೂಡಿದಂತೆ ಅವನಿಗೆ ಕಂಡಿತು. ಕೂಡಲೆ ಅವನು ಬೈರಾಗಿಯ ನೆತ್ತರ ಒಡೆದ ಎರಡೂ ಕಾಲುಗಳನ್ನು ಗಟ್ಟಿಯಾಗಿ ಹಿಡಿದು:—"ಬೈರಾಗೀ, ನಿನಗೆ

ಕಂಡದ್ದೇನು? ಇಡೀ ಆಯುಷ್ಯವನ್ನು ಧ್ಯಾನ-ಧಾರಣೆಗಳಲ್ಲಿ ಕಳೆದರೂ ಯಾವ ರೂಪವು ಒಂದು ಕ್ಷಣವೂ ನನಗೆ ಗೋಚರವಾಗಲಿಲ್ಲವೋ ಅದನ್ನು ನೀನು ಒಂದು ಮುಹೂರ್ತದ ನಾಮಸಂಕೀರ್ತನಿಂದ ಕಂಡ ಬಗೆ ಹೇಗೆ? ಚೈತನ್ಯದಾಸಾ, ವೈಷ್ಣವಾ, ನಾನು ಬ್ರಾಹ್ಮಣನಲ್ಲ; ಚಾಂಡಾಲನು. ನಿನ್ನ ದೃಷ್ಟಿಯಲ್ಲಿ ಜಾತಿಭೇದವಿಲ್ಲ, ಕುಲಮರ್ಯಾದೆಯಿಲ್ಲ. ನೀನು ಏನನ್ನು ನೋಡಿದೆಯೋ ನನಗದನ್ನಷ್ಟು ತೋರಿಸು'' ಎಂದು ಅಂಗಲಾಚಿ ಬೇಡಿಕೊಂಡನು.

ಕೂಡಲೆ ಚೈತನ್ಯದಾಸನು:—''ವಿಪ್ರಶ್ರೇಷ್ಠರೇ, ನೀವೂ ನೋಡಿರಿ. ಅಗೋ ಕೃಷ್ಣಪರಮಾತ್ಮನು ಎದುರಿಗೆ ನಿಂತಿರುವನು.'' ಆಗ ಆ ಬ್ರಾಹ್ಮಣನಿಗೂ ಶ್ರೀ ಕೃಷ್ಣಪರಮಾತ್ಮನ ದರ್ಶನವಾಗಲು, ಹಾರುವನ ಕಣ್ಣೊಳಗಿಂದ ಆನಂದಾಶ್ರುಗಳು ಪ್ರವಹಿಸಹತ್ತಿದವು. ಆ ಬೈರಾಗಿ ಹಾಗು ಬ್ರಾಹ್ಮಣನ ಆ ಅವಸ್ಥೆಯನ್ನು ಕಂಡು, ಪಾದ್ರಿಯೂ, ಅವನ ಅನುಚರರೂ ವಿಸ್ಮಯ-ವಿಸ್ಫೂರಿತ ನೇತ್ರಗಳಿಂದ ಅವರನ್ನು ಟಕಮಕ ನೋಡುತ್ತ ನಿಂತು ಕೊಂಡರು.

ಇದೇ ಸಮಯಕ್ಕೆ ಇನ್ನೊಬ್ಬ ತರುಣ ಫಿರಂಗಿಯು ಆ ಕಗ್ಗತ್ತಲೆಯ ಕೋಣೆಯನ್ನು ಪ್ರವೇಶಿಸಿ:—''ಆಲಭಾರೇಜ,'' ಎಂದು ಕೂಗಿದನು. ಪಾದ್ರಿಯು ಗಾಬರಿಗೊಂಡು ಕೋಣೆಯ ಬಾಗಿಲಿಗೆ ಹೋದನು ಬಳಿಕ ಆ ಯುವಕನು ಅವನನ್ನು ಕುರಿತು:—''ಪಾದ್ರೀ, ನಿನ್ನ ರಕ್ತಪಿಪಾಸೆಯು ಇನ್ನೂ ಶಾಂತವಾಗಿಲ್ಲವೆ? ನೀನು ನನ್ನ ಅಪ್ಪಣೆಯ ಹೊರತು ಈ ಕೈದಿಗಳನ್ನು ಕಾರಾಗೃಹದಿಂದ ಇಲ್ಲಿಗೆ ಕರೆತಂದೆಯೇಕೆ?'' ಎಂದು ಅವಡುಗಚ್ಚಿ ನುಡಿಯಲು, ಪಾದ್ರಿಯು ನಾಚಿಕೊಂಡು:—''ಪೋರ್ತುಗೀಜ ರಾಜ್ಯದಲ್ಲಿ ನಮ್ಮ ಪುರೋಹಿತರ-ಪಾದ್ರಿಗಳ ಅಪ್ಪಣೆಯೇ ಮುಖ್ಯವು; ಆದುದರಿಂದ ಇವರಿಗಾಗಿ ಶಾಸನಕರ್ತನ ಅಪ್ಪಣೆಪಡಕೊಳ್ಳುವ ಕಾರಣವಿಲ್ಲ.''

''ನೀನು ಈ ಕೈದಿಗಳಿಗೆ ಹಿಂಸೆಪಡಿಸುತ್ತಿರುವೆಯೇನು?''

''ಈ ಇಬ್ಬರೂ ಕೈದಿಗಳು ಸೈತಾನನ ಅನುಚರರು. ಇಂಥವರ ಉಪದೇಶದಿಂದಲೇ ಹಿಂದುಸ್ತಾನದ ಜನರು ನಮ್ಮ ಕ್ರೈಸ್ತಮತಾನು ಯಾಯಿಗಳಾಗಲೊಲ್ಲರು.''

ಆ ತರುಣ ಫಿರಂಗಿಯು ಇನ್ನಿಷ್ಟು ಮುಂದಕ್ಕೆ ಹೋಗಿ ನೋಡು ತ್ತಾನೆ, ಚೈತನ್ಯದಾಸಬೈರಾಗಿಯು ಚಕ್ರಕ್ಕೆ ಬಿಗಿಯಲ್ಪಟ್ಟಿದ್ದು, ಅವನ ಹತ್ತಿರವೇ ಬ್ರಾಹ್ಮಣನು ಅಲ್ಲಿಯ ಧೂಳದಲ್ಲಿ ಬಿದ್ದುಕೊಂಡಿದ್ದಾನೆ. ಕೂಡಲೆ ಅವನು ಸಂಜ್ಞೆ ಮಾಡಲು, ಪಾದ್ರಿಯ ಆ ಇಬ್ಬರು ಅನುಚರರು ಚೈತನ್ಯದಾಸನನ್ನು ಚಕ್ರದಿಂದ ಬಿಚ್ಚಿದರು; ಆದರೆ ಆಗ ಬೈರಾಗಿಗೆ ಎದ್ದು ನಿಲ್ಲಲಿಕ್ಕೆ ಬರುವಂತಿರದ್ದರಿಂದ ಅವನು ದೊಪ್ಪನೆ ನೆಲಕ್ಕೆ ಬಿದ್ದುಬಿಟ್ಟನು! ಅದನ್ನು ಕಂಡು ಆ ತರುಣ ಫಿರಂಗಿಯು:—"ಪಾದ್ರೀ, ಇವನನ್ನು ಕೊಂದು ಬಿಟ್ಟೆಯಾ?" ಎಂದು ಕೇಳಲು,

ಪಾದ್ರಿಯು:—ನೀವು ಶಾಸನಕರ್ತೃಗಳು; ಅಂತೇ ನಿಮ್ಮನ್ನು ಸನ್ಮಾನಿಸುವದು; ಆದರೆ ನಾನು ನನ್ನ ಕರ್ತವ್ಯಕ್ಷೇತ್ರದಲ್ಲಿ ಯಾವ ಅಧಿ ಕಾರಿಯ ಭಯವನ್ನೂ ಲೆಕ್ಕಿಸದೆ ಕೆಲಸ ಮಾಡತಕ್ಕವನು. ಸ್ವತಃ ಪೋರ್ತುಗಾಲದ ಅರಸನಿಗೆ ಕೂಡ ನಾನು ನನ್ನ ಕೆಲಸದಲ್ಲಿ ಕೈಹಾಕಿ ಕೊಡುವವನಲ್ಲ. ನಾನು ಯೇಸುವಿನ ಪ್ರತಿನಿಧಿಯು. ನನ್ನ ಒಡೆಯ ನೆಂದರೆ ಆ ದಯಾಳು ಯೇಸುವೊಬ್ಬನೇ ಆಗಿರುವನು.

"ಪಾದ್ರೀ, ನಿನ್ನ ಮನಸ್ಸಿಗೆ ಬಂದಂತೆ ನಡೆಯಲು, ಸ್ಪೇನದೇಶ ವಲ್ಲ; ಇದು ಭರತಖಂಡವು ನೀನು ಹಿಂಸಿಸುತ್ತಿರುವ ಈ ಇಬ್ಬರು ಜನರು ನಮ್ಮ ಪೋರ್ತುಗಾಲದ ಪ್ರಜೆಗಳಲ್ಲ; ಇವರು ಇಲ್ಲಿಯ ದಿಲ್ಲೀ ಬಾದಶಹನ ಪ್ರಜೆಗಳು, ತಿಳಿಯಿತೇ?" "ತಿಳಿಯಿತು"

"ಪಾದ್ರೀ, ನೀನು ಸತ್ಯಧರ್ಮವನ್ನು ಪ್ರಸಾರ ಮಾಡಲಿರುವೆಯೋ, ನರಹತ್ಯೆಯನ್ನು ಮಾಡಬಂದಿರುವೆಯೋ?"

"ನಾನು ನರಹತ್ಯ ಮಾಡುವವನಲ್ಲ; ಯೇಸುವಿನ ಸತ್ಯಧರ್ಮ ಪ್ರಸಾರಕನು."

"ಹಾಗಾದರೆ ನೀನು ಈಗ ಮಾಡಿರುವದೇನಿದು?"

"ಸತ್ಯಧರ್ಮವನ್ನು ಪ್ರಸಾರಗೊಳಿಸಲಿಕ್ಕೆ ಯಾವ ಮಾರ್ಗದ ಅವಶ್ಯ ಕತೆಯೋ ನಾನದನ್ನು ಅವಲಂಬಿಸತಕ್ಕವನು ಡಿಸೋಝಾ, ನೀನು ಈಗ ಇಲ್ಲಿಯ ಪೋರ್ತುಗೀಜರ ರಾಜ್ಯದ ಅಧಿಕಾರಿಯಾಗಿದ್ದರೂ, ತೀವ್ರ ದಲ್ಲಿಯೇ ನೀನು ಸ್ಪೇನದೇಶಕ್ಕೆ ಮರಳಿ ಹೋಗಬೇಕಾದೀತು; ಆದರೆ ಈ ಅಲಭಾರೇಜ ಪಾದ್ರಿಯು ಸಾಮಾನ್ಯನಲ್ಲ. ಇಡೀ ಪೋರ್ತುಗಾಲದ

ಅಧಿಕಾರಸತ್ತೆಯೇ ನನ್ನ ಕೈಯಲ್ಲಿದ್ದಂತೆ ಇದೆ. ಎಚ್ಚರದಿಂದ ಮಾತಾಡು.''

"ಪಾದ್ರೀ, ಬಿಡು, ನಿನ್ನೀ ಬಿಂಕವನ್ನು! ನಾನೇನು ಹೇಳಿ-ಕೇಳಿ ಸೈನಿಕನು. ಮೃತ್ಯುವನ್ನು ಸದಾ ಆಲಿಂಗಿಸಿದವನೇ. ಅದರಿಂದ ನಾನು ಯಾವ ಶಿಕ್ಷೆಗೂ ಅಂಜುವದಿಲ್ಲ; ಆದರೆ ಪಾದ್ರೀ, ನಿನ್ನಂತಹ ನೀಚ ನರ ಘಾತಕನು ಯೇಸುವಿನ ಪವಿತ್ರವಾದ ಧರ್ಮಪ್ರಸಾರಕ್ಕೆ ತೀರ ಅಯೋಗ್ಯನು. ನಿಮ್ಮಂಥ ತಲೆತಿರುಕ ಧರ್ಮಪ್ರಚಾರಕರಿಂದ ಈ ಭರತಖಂಡದೊಳಗಿನ ಪೋರ್ತುಗೀಜರ ಸತ್ತೆಯು ಮಣ್ಣುಗೂಡಲಿಕ್ಕೆ ತಡವಾಗಲಾರದು. ಪಾದ್ರೀ, ಈ ಬಗ್ಗೆ ನಿನಗೆ ನಾನು ಎರಡನೇ ಸಾರೆ ಹೇಳುತ್ತೇನೆ. ಇನ್ನು ಮುಂದೆ ನಿನ್ನ ಇಂಥ ಯಾವುದೊಂದು ಕೃತ್ಯವು ನನ್ನ ಕಣ್ಣಿಗೆ ಬಿದ್ದರೆ ನಿನಗೆ ತಕ್ಕ ಶಾಸನವನ್ನು ಮಾಡದಿರಲಾರೆನು. ಜೋಕೆ'' ಎಂದು ಆ ಅಧಿಕಾರಿಯು ಕಣ್ಣು ಕೆಕ್ಕರಿಸಿ ನುಡಿಯಲು,

ಆ ಪಾದ್ರಿಯು ಇನ್ನೇನೋ ಅನ್ನತಕ್ಕವನು; ಆದರೆ ಅಷ್ಟರಲ್ಲಿ ಒಬ್ಬ ಶಿಪಾಯಿಯು ಬಂದು ಡಿಸೋಝನನ್ನು ಕುರಿತು:—ಹುಜೂರ, ನಿನ್ನಿನ ದಿವಸ ನಮ್ಮ ಜನರು ಸಪ್ತಗ್ರಾಮದ ಬಳಿಯಿಂದ ಯಾವ ಯವನರ ಡೋಣಿಯನ್ನು ಹಿಡಿದು ತಂದಿರುವರೋ, ಅದು ನಬಾಬ ಶಹಾನವೋಯಾಜಖಾನನೆಂಬ ದಿಲ್ಲಿಯ ಶಹಾಜಹಾನ ಬಾದಶಹನ ಪರಮ ಆಪ್ತನ ಡೋಣಿಯಾಗಿದೆ ಈ ಸುದ್ದಿಯು ಒಂದು ವೇಳೆ ಬಾದಶಹನಿಗೆ ತಿಳಿದರೆ ಈ ದೇಶದೊಳಗಿನ ನಮ್ಮ ಬಂದರಗಳೆಲ್ಲ ನಿರ್ನಾಮವಾಗುವವು, ಎಂದನು.

"ಹಾಗಾದರೆ ಈಗಲೆ ಆ ಡೋಣಿಯನ್ನು ಬಿಟ್ಟು ಅವರನ್ನು ಸನ್ಮಾನದಿಂದ ಮರಳಿ ಕಳಿಸಬೇಕು; ಹಾಗು ಈ ಇಬ್ಬರು ಹಿಂದುಗಳನ್ನು ಕಿಲ್ಲೆಯ ಹೊರಗಿನ ವಿನೋದಿನಿ ವೈಷ್ಣವಿಯ ಬಿಡಾರಕ್ಕೆ ಕಳಿಸಿ, ಅವಳಿಗೆ ಇವರನ್ನು ಉಪಚರಿಸ ತಿಳಿಸಬೇಕು. ಎಲೈ ಸೇವಕನೇ, ಈ ಆಲಭಾರೇಜ ಪಾದ್ರಿಯನ್ನು ಸೆರೆ ಹಿಡಿ; ಆದರೆ ಅವನ ಮೈಗೆ ಹಚ್ಚಬೇಡ; ಅವನನ್ನು ನಜರಕೈದಿಯನ್ನಾಗ ಮಾಡಿ ಎಲ್ಲಿಯೂ ಹೋಗಗೊಡಬೇಡ,'' ಎಂದು ಅಪ್ಪಣೆ ಮಾಡಿ ಡಿಸೋಝನು ಅಲ್ಲಿಂದ ಹೊರಟು ಹೋದನು. ತುಸ ಹೊತ್ತಿನಲ್ಲಿಯೇ ಅವನ ಅಪ್ಪಣೆಯು ಅಮಲಿನಲ್ಲಿ ಬಂದಿತು.



೧೦ನೆಯ ತರಂಗೆ.

—(೦)—

# ಭಾಗ್ಯಚಕ್ರ.

ಸಪ್ತಗ್ರಾಮದ ದುರ್ಗದಲ್ಲಿ ಅಮೀರ ಉಲ್-ಬಹರ ಅಸದಖಾನನು ವಿಷಣ್ಣವದನದಿಂದ ನಿಂತುಕೊಂಡಿದ್ದನು. ಅವನ ಹತ್ತರ ಹಲಕೆಲವು ಸೇನಾನಾಯಕರೂ, ಸಚಿವ ಶ್ರೇಷ್ಠರೂ, ಊರೊಳಗಿನ ಪ್ರಮುಖ ಸೆಟ್ಟ-ಸಾವುಕಾರರೂ ನಿಂತಿದ್ದರು. ಪೂರ್ವರಾತ್ರಿಯಲ್ಲಿ ಫಿರಂಗಿಗಳಿಂದ ಗಾಯಪಟ್ಟ ಜನರು ಸಾಲುಸಾಲಾಗಿ ಅಸದಖಾನನ ಎದುರಿಗೆ ನಿಲ್ಲಿಸಲ್ಪಟ್ಟಿದ್ದರು; ಆದರೆ ಮಯೂಖನ ಪತ್ತೆಯೇ ಹತ್ತಲಿಲ್ಲ ಆಗ ನಮ್ಮ ವಾಚಕರ ಪೂರ್ವಪರಿಚಿತನಾದ ಗೋಕುಲಬಿಹಾರಿಶ್ರೇಷ್ಠಿಯು:—ಹುಜೂರ, ಹೇಡಿಯಾದ ಕಲಿಮುಲ್ಲಾಖಾನನು ಫಿರಂಗಿಗಳ ಉಪಟಳಕ್ಕೆ ಅಂಜಿ ಓಡಿ ಹೋದುದರಿಂದ ಸಪ್ತಗ್ರಾಮದ ಜನರೆಲ್ಲರೂ ಹೌಹಾರಿದರು; ಫೌಜದಾರನ ಸೈನ್ಯವೂ ಅವನೊಡನೆ ಓಡಿ ಹೋಗುತ್ತಿರಲು, ಆ ಯುವಕನು-ಮಯೂಖನು-ಊರ ಜನರಿಗೆಲ್ಲ ಧೈರ್ಯ ಹೇಳಿ, ಗ್ರಾಮರಕ್ಷಣೆಯ ಉದ್ಯೋಗಕ್ಕೆ ತೊಡಗಿದನು. ಅವನು ಸ್ವತಃ ತೋಪುಖಾನೆಯನ್ನು ಪ್ರವೇಶಿಸಿ, ಹತ್ತೆಂಟು ತೋಫಿನ ಗುಂಡುಗಳನ್ನು ಶತ್ರುಗಳ ಆಯಕಟ್ಟಿನ ಸ್ಥಳಗಳ ಮೇಲೆ ಬಿಟ್ಟಿದ್ದರಿಂದ ಶತ್ರುಗಳು ಈ ತ್ರಿವೇಣಿ ಘಾಟಿನ ಕಡೆಗೆ ಬರಲಿಲ್ಲ. ಆದರಿಂದ ಬಂದರದೊಳಗಿನ ಕೋಟ್ಯವಧಿ ಬೆಲೆಯ ಸರಕುಗಳು ಸಂರಕ್ಷಿಸಲ್ಪಟ್ಟವು. ಆ ಯುವಕನ ಸಲಹೆಯಿಂದಲೇ ನಾನು ನನ್ನ ಸೈನ್ಯದೊಡನೆ ಡಿಸೋಝನ ಮೇಲೆ ಏರಿ ಹೋದೆನು. ಅಂತೇ ಆ ಫಿರಂಗಿಗಳು ಹಿಮ್ಮೆಟ್ಟಿದರು; ಆದರೆ ಹುಜೂರ, ಆಗಿನಿಂದಲೂ ಆ ತರುಣನ ಭೆಟ್ಟಿಯಾಗಲಿಲ್ಲ. ಅವನು ಗಾಯಪಟ್ಟನೋ-ಮಡಿದನೋ ಯಾವುದೂ ತಿಳಿಯಲಿಲ್ಲ ಗಾಯಪಟ್ಟವರನ್ನೆಲ್ಲ ಶೋಧಿಸಿದಂತಾಯಿತು. ಸತ್ತುಬಿದ್ದಿದ್ದ ಹೆಣಗಳ ರಾಶಿಗಳಲ್ಲೂ ಹುಡುಕಿದ್ದಾಯಿತು; ಆದರೆ ಎಲ್ಲವೂ ವ್ಯರ್ಥವೇ ಎಂದನು.

ಆಗ ಅಸದಖಾನನು ನಿಟ್ಟುಸಿರುಗರೆದು:—ಹರಿನಾರಾಯಣಾ, ಆ ತರುಣನು ಯಾರೆಂಬದು ನಿನಗೆ ತಿಳಿದಿದೆಯೋ?

"ನನಗೆ ಗೊತ್ತಿಲ್ಲ."

"ಆತನು ಪಶ್ಚಿಮ ಬಂಗಾಲದೊಳಗಿನ ಸುಪ್ರಸಿದ್ಧ ಜಮೀನದಾರನಾಗಿದ್ದ ದೇವೇಂದ್ರನಾರಾಯಣನ ಮಗನು."

"ಭೀಮೇಶ್ವರದ ಮಹಾರಾಜಾ ದೇವೇಂದ್ರನಾರಾಯಣನ ಮಗನೇ?"

"ಅಹುದು. ಯಾವನ ಪರಾಕ್ರಮವನ್ನು ಕಂಡು ಒಂದಾನೊಂದು ದಿವಸ ಸ್ವತಃ ಶಾಹಾಜಾದಾ ಖುರ್ರಮನು ಸಹ ಬೆರಗಾಗಿದ್ದನೋ ಅದೇ ಆ ದೇವೇಂದ್ರನಾರಾಯಣನ ಮಗನು."

ಇಷ್ಟರಲ್ಲಿ ಒಬ್ಬ ವೃದ್ಧ ಹಕೀಮನು ಅಲ್ಲಿಗೆ ಬಂದು:—ತಾನು ನಿನ್ನೆ ಸಾಯಂಕಾಲದಲ್ಲಿ ತ್ರಿವೇಣಿಯ ಸಂಗಮದೊಳಗಿನ ಒಂದು ಡೋಣಿಯಲ್ಲಿ ಅಂಥ ಒಬ್ಬ ಗಾಯಪಟ್ಟ ಹಿಂದೂ ತರುಣನಿಗೆ ಔಷಧೋಪಚಾರ ನಡಿಸಿದೆನೆಂದು ಹೇಳಿದನು. ಹಾಗಾದರೆ ಆ ಡೋಣಿಯು ನವಾಬ ಶಹಾನವ್ರೋಯಾಜಖಾನನದೆಂದು ಎಲ್ಲರೂ ಅಂದರು ಕೂಡಲೆ ಅಸದಖಾನನು ಅಲ್ಲಿಯೇ ಇದ್ದ ಶಹಾನವ್ರೋಯಾಜಖಾನನ ಮಗನಿಗೆ ನಿಮ್ಮ ತಂದೆಯ ಡೋಣಿಯು ಈಗೆಲ್ಲಿದೆ? ಎಂದು ಕೇಳಲು, ಅವನು-ಬಾರಂದಾಜಖಾನನು-ನಿನ್ನೆ ಸಾಯಂಕಾಲದಲ್ಲಿಯೇ ಅವರು ಸಪ್ತಗ್ರಾಮವನ್ನು ಬಿಟ್ಟು ತೆರಳಿದರಂತೆ. ಮುಂದಿನ ಸಮಾಚಾರವು ಇದು ವರೆಗೂ ತಿಳಿದಿರುವದಿಲ್ಲ, ಎಂದು ಹೇಳಿದನು.

ಬಳಿಕ ಅಸದಖಾನನ ಅಪ್ಪಣೆಯ ಮೇರೆಗೆ ಕೆಲಯುದ್ಧದ ಹಡಗೆಗಳು ಶಹಾನವ್ರೋಯಾಜಖಾನನ ಡೋಣಿಯ ಶೋಧಕ್ಕಾಗಿ ಕಳಿಸಲ್ಪಟ್ಟವು. ಬಂದರದೊಳಗಿನ ಮಿಕ್ಕ ಸಣ್ಣ-ದೊಡ್ಡ ಹಡಗಗಳೆಲ್ಲ ಫಿರಂಗಿಗಳಿಂದ ಉದ್ಭವಿಸಬಹುದಾದ ಉಪಟಳಕ್ಕೆ ಎದುರಾಗಲು ಸಜ್ಜಾದವು

ಇಷ್ಟರಲ್ಲಿ ಒಬ್ಬ ದೂತನು ಬಂದು ಜಾಹಂಗೀರನಗರದಿಂದ ಹರೇಕೃಷ್ಣರಾಯನು ಬಂದಿದ್ದು, ಖಾವಂದರವರ ಭೇಟಿಗೆ ಆತುರನಾಗಿ ನಿಂತಿರುತ್ತಾನೆ, ಎಂದು ತಿಳಿಸಿದನು. ಅದನ್ನು ಕೇಳಿ ಸುಭೇದಾರನ ಡೆಪ್ಯೂಟಿ ಅಮಲ್‌ದಾರನಾದ ಹರೇಕೃಷ್ಣರಾಯನು ಜಾಹಂಗೀರನಗರವನ್ನು ಬಿಟ್ಟು ತಾನು ಸ್ವತಃ ಇಲ್ಲಿಗೆ ಇಷ್ಟು ಅವಸರದಿಂದೇಕೆ ಬಂದಿರಬಹುದೆಂಬದನ್ನು ತಿಳಿಯಲಾರದೆ ಅಸದಖಾನನು ವಿಸ್ಮಯಗೊಂಡನು. ಆಗ ಅವನು ಬಾರಂದಾಜಖಾನನನ್ನು ಕುರಿತು:—ಹರೇಕೃಷ್ಣರಾಯನು ಸಾಮಾನ್ಯನಲ್ಲ.

ಸಾವಿರ ಕುದುರೆಯ ಸವಾರನು. ಆದುದರಿಂದ ನೀವು ಸ್ವತಃ ಹೋಗಿ, ಫೌಜದಾರ ಕಲಿಮುಲ್ಲಾಖಾನನ ವತಿಯಿಂದ ಅವನನ್ನು ಸನ್ಮಾನಿಸಿ ಕರೆದು ಕೊಂಡು ಬರ್ರಿ, ಎಂದು ಹೇಳಿಕಳಿಸಿದನು.

ಬಳಿಕ ಕೆಲಹೊತ್ತಿನ ಮೇಲೆ ಹರೇಕೃಷ್ಣರಾಯನು ಸಭಾಗೃಹವನ್ನು ಪ್ರವೇಶಿಸಿ, ಅಸದಖಾನನನ್ನು ಅಭಿನಂದಿಸಿ:—ಜನಾಬಅಲಿ, ನಬಾಬ ಮೊಕರಮಖಾನ ಸುಭೇದಾರರು ಆಕಸ್ಮಿಕವಾಗಿ ಮರಣ ಹೊಂದಿದರು. ಶಾಹಾನ್‌ಶಹಾ ಬಾದಶಹರ ಇನ್ನೊಂದು ಹುಕುಮು ಆಗುವ ವರೆಗೆ ತಾವೇ ಬಂಗಾಲ, ಬಿಹಾರ ಮತ್ತು ಓಡಿಸಾ ಪ್ರಾಂತಗಳ ಸುಭೇದಾರರು, ಎಂದಂದು ಸುಮ್ಮನಾದನು. ಆಗೆ ಪರಮ ವಿಸ್ಮಿತನಾದ ಅಸದಖಾನನು:- "ಮಾಜಿ ಸುಭೇದಾರರ ಮರಣಕ್ಕೆ ಕಾರಣವೇನಾಯಿತು?" "ಸುಭೇದಾರರು ಗಂಗಾವಿಹಾರಕ್ಕಾಗಿ ಹೊರಟಿದ್ದರು. ಆಕಸ್ಮಿಕವಾಗಿ ತುಫಾನವೆದ್ದು ಅವರ ನಾವೆಯು ಮುಳುಗಿದ್ದರಿಂದ ತೀರಿಕೊಂಡರು!" "ಈ ಬಗ್ಗೆ ಬಿಹಾರ-ಓಡಿಸಾಗಳ ಫೌಜದಾರರಿಗೆ ತಿಳಿಸಲಿಲ್ಲವೆ? ಅವರಾರಿಗೂ ಬಾದಶಹರ ಇನ್ನೊಂದು ಹುಕುಮು ಆಗುವ ವರೆಗೆ ಸುಭೇದಾರಿಕೆಯನ್ನು ವಹಿಸಲಿಲ್ಲೇಕೆ?"

"ಹುಜೂರ, ಅವರು ಐದುಸಾವಿರ ಕುದುರೆಗಳ ಮನಸಬದಾರರು ತಮಗಿಂತ ಕಡಿಮೆ ಸನ್ಮಾನಿತರು. ಅಂದ ಮೇಲೆ ಅವರ ಕಡೆಗೆ ಈ ಬಹುಮಾನದ ಕೆಲಸವನ್ನು ಒಪ್ಪಿಸುವ ಬಗೆ ಹೇಗೆ?" ಹೀಗೆಂದು ಹೇಳಿ, ಹರೇಕೃಷ್ಣರಾಯನು ತಾನು ಜಹಾಂಗೀರನಗರದಿಂದ ತಂದಿದ್ದ ಸುಭೇದಾರಿಕೆಯ ವಸ್ತ್ರಗಳನ್ನೂ, ಛತ್ರ-ಚಾಮರ-ಶಿಕ್ಕಾ-ಮೊಹರಗಳನ್ನೂ ಅಸದಖಾನನಿಗೆ ಒಪ್ಪಿಸಿ ಅವನನ್ನು ಮತ್ತೊಮ್ಮೆ ಅಭಿನಂದಿಸಿದನು. ಕೂಡಲೆ ಅಸದಖಾನನು ಜಹಾಂಗೀರ ನಗರದ ಹಂಗಾಮಿ ಸುಭೇದಾರನಾದ ಸಂಗತಿಯು ಫರ್ಮಾನಗಳು ಬಂಗಾಲ, ಬಿಹಾರ, ಓಡಿಸಾಪ್ರಾಂತಗಳ ಎಲ್ಲ ಮುಖ್ಯ ಮುಖ್ಯ ಠಾಣ್ಯಗಳಿಗೂ ಕಳಿಸಲ್ಪಟ್ಟವು.

ತದನಂತರ ಅಸದಖಾನನು ವಿನೋದದಿಂದ:—ಹರೇಕೃಷ್ಣರಾಯಾ, ನೀನು ಈಗ ನನಗೆ ಈ ಬಹುಮಾನದ ಹಂಗಾಮಿ ಸುಭೇದಾರಿಕೆಯನ್ನು ಒಪ್ಪಿಸಲಿಕ್ಕೆ ಬರದೆ, ಯುದ್ಧದ ಚಲೋ ೨-೩ ಹಡಗಗಳನ್ನೂ, ೩-೪ ತೋಫುಗಳನ್ನೂ ಜಹಾಂಗೀರ ನಗರದಿಂದ ತಂದು ಕೊಟ್ಟಿದ್ದರೆ ನಾನು

ಇದಕ್ಕೂ ಹೆಚ್ಚು ಹರ್ಷಿತನಾಗುತ್ತಿದ್ದೆನು. ಅವುಗಳಿಂದ ನನ್ನ ಪ್ರಸ್ತುತ ಕೆಲಸಕ್ಕೆ ಅಂದರೆ ಫಿರಂಗಿಗಳ ಆಕ್ರಮಣಕ್ಕೆ ಒಳ್ಳೇ ಸಹಾಯವಾಗುತ್ತಿತ್ತು.

"ಹುಜೂರ, ಅದೇಕೆ?"

ಹರೇಕೃಷ್ಣನ ಆ ಪ್ರಶ್ನೆಗೆ ಅಸದಖಾನನು ಈ ಮೊದಲು ಫಿರಂಗಿ ಪಾದ್ರಿಯ ಅನುಚರರು ಮಯೂಖನೊಡನೆ ತನ್ನನ್ನು ಆಕ್ರಮಿಸಿದಂದಿನಿಂದ ಯುದ್ಧವಾಗಿ ಮಯೂಖನ ಪತ್ತೆಯಿಲ್ಲದಂತಾದವರೆಗಿನ ಸಮಸ್ತ ಸಂಗತಿಗಳನ್ನೂ ವಿವರಿಸಿ ಹೇಳಿದನು; ಮತ್ತು ತಾನು ಬಂಗಾಲ-ಬಿಹಾರಗಳ ಹಂಗಾಮಿ ಸುಭೇದಾರನಿರುವ ವರೆಗೆ ಇಲ್ಲಿಯ ಫಿರಂಗಿಗಳ ಉಪಟಳವನ್ನು ಸಾಧ್ಯವಾದಷ್ಟು ನಿಲ್ಲಿಸುವೆನೆಂದೂ, ಬಳಿಕ ಶಹಾನಶಹಾಬಾದಶಹನ ಮತ್ತು ಅಲ್ಲಾನ ಇಚ್ಛೆಯ ಪ್ರಕಾರ ಆಗಬಹುದೆಂದೂ ಹೇಳಿದನು.

ಇತ್ತ ದುರ್ಗದ ಮುಖ್ಯ ಬಾಗಿಲದ ಮೇಲಿನ ನಗಾರೆಯು ಬಾರಿಸಲಾರಂಭಿಸಿತು. ಸಪ್ತಗ್ರಾಮದ ಫೌಜಿನೊಳಗಿನ ಸೈನ್ಯವೆಲ್ಲ ಸಿದ್ಧವಾಯಿತು. ಕೂಡಲೆ ಅಸದಖಾನನು ಹರೇಕೃಷ್ಣನನ್ನುದ್ದೇಶಿಸಿ:—ಹರೇಕೃಷ್ಣರಾಯಾ, ನಾನು ಹುಗಳಿಯಿಂದ ಮರಳಿ ಬರುವ ವರೆಗೆ ನೀನು ಇಲ್ಲಿಯೇ ವಿಶ್ರಮಿಸು. ನಾನು ಬಂದ ಬಳಿಕ ನಾನೂ ನೀನೂ ಕೂಡಿಯೇ ಜಹಾಂಗೀರನಗರಕ್ಕೆ ಹೋಗೋಣವಂತೆ, ಎಂದು ಹೇಳಿ ಸ್ವಸೈನ್ಯದೊಡನೆ ದುರ್ಗವನ್ನಿಳಿದು ತ್ರಿವೇಣಿಯ ಘಾಟನ ಕಡೆಗೆ ಸಾಗಿದನು.

ನಡುದಾರಿಯಲ್ಲಿ ಒಬ್ಬ ವೃದ್ಧ ಅಂಬಿಗನು ಅಸದಖಾನನಿಗೆ ಪೊಡಮಟ್ಟು ಅಭಿವಂದಿಸತೊಡಗಿದನು; ಆದರೆ ಸುಭೇದಾರನ ಅಂಗರಕ್ಷಕರು ಅವನನ್ನು ಹೊಡೆದು ದೂರ ಸರಿಸಹತ್ತಿದರು. ಕೂಡಲೆ ಅಸದಖಾನನು ತನ್ನ ಅಂಗರಕ್ಷಕರನ್ನು ತಡೆದ.:—ಮುದುಕಾ, ನಿನ್ನ ಅಂಬೋಣವೇನೆಂಬದನ್ನು ಬೇಗನೆ ತಿಳಿಸು, ಎಂದನು.

"ಹುಜೂರ, ನಾನು ವೃದ್ಧನು; ತಾವು ಯಾರೆಂಬದು ನನ್ನ ಮಂದ ದೃಷ್ಟಿಯ ಮೂಲಕ ಚೆನ್ನಾಗಿ ಕಾಣಿಸಲೊಲ್ಲದು. ನಾನು ಭೀಮೇಶ್ವರದ ಮಹಾರಾಜಾ ದೇವೇಂದ್ರ ನಾರಾಯಣನ ಸೇವಕನು; ಮಹಾ ವಿಪತ್ತಿಗೀಡಾಗಿರುತ್ತೇನೆ."

"ಏನಂದಿ? ದೇವೇಂದ್ರನಾರಾಯಣನ ಸೇವಕನೇ? ಆತನ ಮಗನೊಡನೆ ಇಲ್ಲಿಗೆ ಬಂದಿದ್ದೆಯಾ?"

ಅಸದಖಾನನ ದನಿಯು ಗುರುತು ಹತ್ತಿದಂತಾಗಲು, ಭುವನನು ಸುಭೇದಾರನ ತೀರ ಸಮೀಪಕ್ಕೆ ಹೋಗಿ ತನ್ನ ಹುಬ್ಬಿನ ಮೇಲೆ ಕೈಯಿಟ್ಟು ಕೊಂಡು ಅವನ ಮುಖವನ್ನು ದಿಟ್ಟಿಸಿ ನೋಡಿ:—“ಹುಜೂರ, ನಾನು ಹೇಳಿಕೇಳಿ ವೃದ್ಧನು, ಬಡಪ್ರಾಣಿಯು. ಹುಜೂರರು ನನ್ನನ್ನು ಕ್ಷಮಿಸ ಬೇಕು ತಾವು ಅಸದಖಾನರಲ್ಲವೆ? ಪಿಪಲಿ ಮತ್ತು ಅಕಬರನಗರಗಳ ಯುದ್ಧದಲ್ಲಿ ನಾನು ತಮ್ಮನ್ನು ನೋಡಿದ್ದು, ತಮ್ಮ ಸಹಚರ್ಯದಲ್ಲಿ ಎಷ್ಟೋ ದಿವಸಗಳನ್ನು ಕಳೆದಿರುತ್ತೇನೆ.”

ಅಸದಖಾನನು ನಕ್ಕು:—ನಾನೇ ಆ ಅಸದಖಾನನು. ಅದಿರಲಿ. ನೀನು ದೇವೇಂದ್ರನಾರಾಯಣನ ಮಗನ-ಮಯೂಖನ ಸಂಗತಿಯನ್ನು ಬಲ್ಲೆಯಾ?

“ಹುಜೂರ, ಅದನ್ನೇ ತಿಳಿಸುವದಕ್ಕಾಗಿ ಸನ್ನಿಧಿಯ ಬಳಿಗೆ ಬಂದಿರುತ್ತೇನೆ.”

ಭುವನನು ಗೌರೀಪುರದ ಘಾಟನಿಂದ ಲಲಿತೆಯ ಹರಣವ ಮೊದಲು ಮಾಡಿಕೊಂಡು ಪೂರ್ವರಾತ್ರಿಯಲ್ಲಿ ಹುಗಳಿಯ ಬಳಿಯಲ್ಲಿ ಒಬ್ಬ ಸನ್ಮಾನ ನೀಯ ಯುವನನ ಡೋಣಿಯಲ್ಲಿ ಅವನನ್ನು ಕಂಡವರೆಗಿನ ಸಮಸ್ತ ಸಂಗ ತಿಯನ್ನು ಅಸದಖಾನಾದಿಗಳಿಗೆ ನಿವೇದಿಸಿದನಲ್ಲದೆ, ಆಗಲೆ ತಮ್ಮ ಡೋ-ಣಿಯು ಫಿರಂಗಿಗಳಿಂದ ಮುಣುಗಿಸಲ್ಪಟ್ಟು, ತಮ್ಮ ಡೋಣಿಯ ಪ್ರಮುಖ ಬ್ರಾಹ್ಮಣನಾದ ತರ್ಕರತ್ನಭಟ್ಟಾಚಾರ್ಯ, ಚೈತನ್ಯದಾಸಬೈರಾಗಿ ಹಾಗು ಮತ್ತೆ ಕೆಲವು ಜನರನ್ನೂ, ಆ ಯುವನರ ಡೋಣಿಯೊಳಗಿನವರೆಲ್ಲರನ್ನೂ ಫಿರಂಗಿಗಳು ಸೆರೆಹಿಡಿದು ದುರ್ಗದ ಕಡೆಗೆ ಸಾಗಿಸಿದರೆಂದೂ, ತಾನು ಫಿರಂಗಿ ಗಳ ನಜರು ತಪ್ಪಿಸಿ ಇತ್ತ ಪಾರಾಗಿ ಬಂದಿರುವೆನೆಂದೂ ಹೇಳಿದನು.

“ಯುವನರ ಆ ಡೋಣಿಯು ಸಪ್ತಗ್ರಾಮದಿಂದ ಹುಗಳಿಗೇಕೆ ಹೋಯಿತು?” ಎಂಬ ಅಸದಖಾನನ ಪ್ರಶ್ನೆಗೆ

ಭುವನನು:—“ಹುಜೂರ, ಅದನ್ನು ಆ ನೀಚ ಫಿರಂಗಿಗಳೇ ಹಿಡಿ ದೊಯ್ದಿದ್ದರು.”

ಕೂಡಲೆ ಅಸದಖಾನನು ಸ್ವಪರಿವಾರದೊಡನೆ ಹುಗಳಿಗಭಿಮುಖ ವಾಗಿ ನಡೆದನು. ಭುವನನನ್ನು ಅವನು ತನ್ನ ಪರಿವಾರದಲ್ಲಿ ಸೇರಿಸಿ ಕೊಂಡಿದ್ದನು. ಅವರು ಗಂಗಾಪ್ರವಾಹದಲ್ಲಿ ತುಸ ದಾರಿ ಕ್ರಮಿಸುವಷ್ಟ

ರಲ್ಲಿ ಹುಗೆಳಿಯ ಕಡೆಯಿಂದ ಬರುವ ಒಂದು ಡೋಣಿಯೊಳಗಿನ ಒಬ್ಬ ವೃದ್ಧ ಮುಸಲ್ಮಾನನು ಅಸದಖಾನನ ಪರಿವಾರದೊಳಗಿನವನೊಬ್ಬನೆನ್ನು "ಬಾರಂದಾಜಖಾ, ಬಾರಂದಾಜಖಾ" ಎಂದು ಗಟ್ಟಿಯಾಗಿ ಕೂಗಿದನು. ಕೂಡಲೆ ಅಸದಖಾನನ ಹಡಗವು ಆ ಡೋಣಿಗೆ ಹೋಗಿ ತಗಲಿತು. ಅದರೊಳಗಿನ ಆ ವೃದ್ಧನು-ಶಹಾನವ್ರೋಯಾಜಖಾನನು-ಧಾವಿಸುತ್ತ ಬಂದು ತನ್ನ ಮಗನಾದ ಬಾರಂದಾಜಖಾನನನ್ನು ಆಲಿಂಗಿಸಿ, ತಾನು ಸಪ್ತಗ್ರಾಮದ ತ್ರಿವೇಣಿಘಾಟನಿಂದ ಹೊರಟು, ಮರಳಿ ಬರುವವರೆಗಿನ ಸಮಸ್ತ ಸಂಗತಿಯನ್ನೂ ತಿಳಿಸಿದನು. ಆಗ ಅಸದಖಾನನು—ನೀವು ಫಿರಂಗಿಗಳ ಗಳ ಸೆರೆಯಿಂದ ಪಾರಾಗಿ ಬಂದುದು ಹೇಗೆ? ಎಂದು ಕೇಳಲು, ನಮ್ಮ ಪೂರ್ವಸಂಚಿತ-ಭಾಗ್ಯಚಕ್ರ-ದ ಮೂಲಕ ಫಿರಂಗಿಗಳ ಮುಖ್ಯಸ್ತನಾದ ಡಿಸೋಝುನು ನಮ್ಮನ್ನು ಒಳ್ಳೇ ಸನ್ಮಾನದಿಂದ ಮರಳಿ ಕಳಿಸಿದನು; ಆದರೆ ನನ್ನ ಡೋಣಿಯಲ್ಲಿ ಗಾಯಪಟ್ಟು ಬಿದ್ದುಕೊಂಡಿದ್ದ ಆ ತರುಣ ಹಿಂದುವಿನ ಪತ್ತೆಯೇ ನಮಗೆ ಹತ್ತಲಿಲ್ಲ. ನಾವು ಡಿಸೋಝಾನನ್ನು ಆ ಬಗ್ಗೆ ಕೇಳಿದೆವು. ಅವನಿಗೂ ಗೊತ್ತಾಗಲಿಲ್ಲ. ಅವನ ಶೋಧ ಹಚ್ಚಿ ಬೇಗನೆ ಅವನನ್ನು ಸಪ್ತಗ್ರಾಮಕ್ಕೆ ಕಳಿಸುವೆನೆಂದು ಅವನು ಅಭಿವಚನವನ್ನಿತ್ತಿರುವನು, ಎಂದು ತಿಳಿಸಿ, ಮರಳಿ ತನ್ನ ಮಗನ ಭೆಟ್ಟಿಯಾದುದಕ್ಕಾಗಿ ಅವನು ಅಲ್ಲಾನನ್ನು ಕುರಿತು ಭಕ್ತಿಪುರಸ್ಸರವಾಗಿ ನಮಾಜು ಮಾಡಹತ್ತಿದನು.



೧೧ ನೇ ತರಂಗ

—(0)—

# ಪರಿಚಯ.



ಬದೆ ಎದೆ ಬಡಕೊಂಡು ಅಳುವ ವಿನೋದಿನಿಯನ್ನು ಕಂಡು ಲಲಿತೆಯು ಅವಳ ಕೊರಳಿಗೆ ತೆಕ್ಕೆಬಿದ್ದು ತಾನೂ ಅಳಹತ್ತಿದಳು. ಕೆಲಕ್ಷಣಗಳ ನಂತರ ತನ್ನ ಶೋಕವನ್ನು ನಿಲ್ಲಿಸಿ, ವಿನೋದಿನಿಯನ್ನು ಕುರಿತು:—ಅವ್ವಾ, ನಿನಗೆ ಆಯಿತೇನು, ಹೀಗೇಕೆ ಅಳುತ್ತಿರುವೆ? ಎಂದು ಪ್ರಶ್ನಮಾಡಲು, ವಿನೋದಿನಿಯು ಮತ್ತೆ ಲಲಿತೆಯನ್ನು ಆಲಿಂಗಿಸಿ ಅಳಲಾರಂಭಿಸಿದಳು. ಹೀಗೆ ಅವರಿಬ್ಬರ ಆ ಕ್ರಂದನವನ್ನು ಕಂಡು ಸಮೀಪದಲ್ಲಿಯೇ ಬಿದ್ದುಕೊಂಡಿದ್ದ ಆ ತರುಣನು-ಮಯೂಖನು-ವಿಸ್ಮಯಗೊಂಡನು. ಅವನಿಗೆ ಅವರೀರ್ವರ ಶೋಕದ ಕಾರಣವು ತಿಳಿಯದಾಯಿತು ಆಗಲವನು:-ಲಲಿತೇ, ನೀವಿಬ್ಬರೂ ಹೀಗೆ ಅಳುತ್ತಿರುವದೇಕೆ? ನಿಮಗೆ ಆಗಿರುವದಾದರೂ ಏನು? ಎಂದು ಪ್ರಶ್ನೆ ಮಾಡಲು, ಅದಕ್ಕೆ ಯಾರಿಂದಲೂ ಉತ್ತರವೇ ದೊರಿಯಲಿಲ್ಲ. ಅವನು ಮತ್ತೆ ಮತ್ತೆ ಅದೇ ಪ್ರಶ್ನೆಯನ್ನು ಮಾಡಹತ್ತಿದನು.

ಕೆಲ ಕ್ಷಣಗಳ ನಂತರ ವಿನೋದಿನಿಯು ತನ್ನ ದು:ಖವನ್ನು ತಡೆದು, ಕಣ್ಣುಗಳನ್ನೊರಿಸಿಕೊಂಡು:-ತಂಗೀ ಲಲಿತೆ, ನಾನು ಯಾರೆಂಬದನ್ನು ಹೇಳುತ್ತೇನೆ; ಆದರೆ ಈ ತರುಣನಾರು? ನನ್ನ ಅಳಿಯನೋ-ನಿನ್ನ ಗಂಡನೋ? ಎಂದು ಕೇಳಲು, ಲಲಿತೆಯ ಮುಖವು ಆರಕ್ತವರ್ಣವನ್ನು ಹೊಂದಿತು. ಅವಳು ತನ್ನ ಸೆರಗನ್ನು ಮತ್ತಿಷ್ಟು ಜಗ್ಗಿ ಜಗ್ಗಿ ಹೊತ್ತುಕೊಳ್ಳುತ್ತ:-ಛೇ-ಛೆ, ಹಾಗಲ್ಲ. ಇವರು ನಮ್ಮ ಭೀಮೇಶ್ವರದ ಮಹಾರಾಜರ ಮಕ್ಕಳು. ಫಿರಂಗಿಗಳು ಗೌರೀಪುರದಲ್ಲಿ ಯಾವಾಗ ನನ್ನನ್ನು ಅಪಹರಿಸಿದರೋ, ಆಗ ಇವರು ಸಮೀಪದ ತಮ್ಮ ಡೋಣಿಯಲ್ಲಿ ನಿಂತುಕೊಂಡಿದ್ದರು. ಮುಂದೆ ಏನು ಆಯಿತೆಂಬದು ನೆನಪಿಲ್ಲ, ಎಂದಂದು ಸುಮ್ಮನಾದಳು.

"ಲಲಿತೇ, ಇವನನ್ನು ಗುರ್ತಿಸಿ ನೀನು ಇಲ್ಲಿಗೆ ಕರೆತಂದಿರುತ್ತೀಯೇನು?" ಎಂದು ವೈಷ್ಣವಿಯು ಕೇಳಲು,

ಲಲಿತೆಯ ಮುಖದ ಮೇಲಿನ ಆರಕ್ತವರ್ಣವು ಮತ್ತಿಷ್ಟು ಕೆಂಪಗಾಯಿತು. ಅವಳು ಏನನ್ನೂ ಮಾತನಾಡದೆ ಮೆಲ್ಲನೆ ಒಮ್ಮೆ ಮಯೂಖನ

ಕಡೆಗೆ ಓರೆನೋಟದಿಂದ ನೋಡಿ ಸುಮ್ಮನಾದಳು. ಬಳಿಕ ಮಯೂಖನೇ ಲಲಿತೆಯ ವೃತ್ತಾಂತವನ್ನು ವಿನೋದಿನಿಗೆ ತಿಳಿಸಲಾರಂಭಿಸಿದನು. ಫಿರಂಗಿಗಳು ಗೌರೀಪುರದ ಘಾಟದಿಂದ ಲಲಿತೆಯನ್ನು ಹರಣಮಾಡಿದಂದಿನಿಂದ ಪೂರ್ವರಾತ್ರಿಯಲ್ಲಿ ತಾನು ಫಿರಂಗಿಗಳ ಹಡಗದವರಿಂದ ಗಾಯಪಟ್ಟವರೆಗಿನ ಸಮಸ್ತ ಸಂಗತಿಯನ್ನೂ ಅವಳಿಗೆ ತಿಳಿಸಿದನು. ಮಯೂಖನ ಮಾತುಗಳು ಮುಗಿದಬಳಿಕ ವಿನೋದಿನಿಯು ಒಂದು ನಿಟ್ಟುಸಿರುಬಿಟ್ಟು:—ತಂಗೀ, ಶ್ರೀಕೃಷ್ಣಪರಮಾತ್ಮನೇ ನಿನ್ನನ್ನು ಕಾಪಾಡಿರುತ್ತಾನೆ. ನೀನು ಫಿರಂಗಿಗಳ ಸೆರೆಯಲ್ಲಿ ಸಿಕ್ಕೊಡನೆಯೇ ಹುಚ್ಚಿಯಾಗಿಬಿಟ್ಟಿದ್ದೆ. ಅಂತೇ ಆ ನೀಚ ಫಿರಂಗಿಗಳು ಹಾಗೆ ಸ್ವೇಚ್ಛೆಯಿಂದ ತಿರುಗಲಿಕ್ಕೆ ನಿನ್ನನ್ನು ಬಿಟ್ಟುಬಿಟ್ಟಿದ್ದರು. ನೀನೊಬ್ಬಳೇ ಈ ಹುಗಳಿಯಲ್ಲಿ ಹಾಗೆ ತಿರುಗುತ್ತಿರುವದನ್ನು ಕಂಡು ನಾನು ನಿನ್ನನ್ನು ನನ್ನ ಮನೆಗೆ ಕರೆತಂದು ಸಂರಕ್ಷಿಸಿದೆನು.

ಅವ್ವಾ ನೀನು ಯಾರವ್ವಾ? ನನ್ನ ಹೆಸರು-ದೆಸೆಗಳನ್ನು ಕೇಳಿ ನೀನು ಅಳಹತ್ತಿದ ಕಾರಣವೇನವ್ವಾ? ಇದನ್ನು ನನಗೆ ವಿಶದವಾಗಿ ತಿಳಿಸಬಲ್ಲಿಯಾ?

ಲಲಿತೆಯ ಆ ನುಡಿಯನ್ನು ಕೇಳಿ ವಿನೋದಿನಿಯ ದುಃಖವು ಮತ್ತೆ ಒತ್ತರಿಸಿತು. ಬಳಿಕ ಆವಳು ಲಲಿತೆಯನ್ನು ಮತ್ತೊಮ್ಮೆ ಆಲಿಂಗಿಸಿ:—ತಂಗೀ, ಯಾವ ದಿವಸ ಹುಚ್ಚಿಯಂತೆ ತಿರುಗುತ್ತಿದ್ದ ನಿನ್ನನ್ನು ಈ ಹುಗಳಿಯ ದುರ್ಗದಲ್ಲಿ ಕಂಡೆನೋ, ಅಂದೇ ನಿನ್ನನ್ನು ನನ್ನ ಆತ್ಮೀಯಳೆಂದು ತಿಳಕೊಂಡಿರುವೆನು. ನಾನು ಖಡ್ದಹದ ತಾರಾನಾಥಭಟ್ಟಾಚಾರ್ಯರ ಮಗಳು. ನಿನ್ನ ಹಡೆದವ್ವನೇ ನನ್ನ ಸಹೋದರಿಯು, ಎಂದಂದು ಸುಮ್ಮನಾದಳು.

ವಿನೋದಿನಿಯ ಆ ಮಾತುಗಳನ್ನು ಕೇಳಿ ಲಲಿತೆಯು ವಿಸ್ಮಯವಿಸ್ಫಾರಿತ ನೇತ್ರಗಳಿಂದ ಅವಳನ್ನು ನೋಡುತ್ತ:—ಅಬಚೀ, ನೀನು ಇಲ್ಲಿ ಈ ಫಿರಂಗಿಗಳ ಠಾಣ್ಯದಲ್ಲಿ ಏಕೆ ವಾಸವಾಗಿರುತ್ತೀ? ನಮ್ಮವ್ವನಂತೂ ತನ್ನ ಸಹೋದರ-ಸಹೋದರಿಯರೊಬ್ಬರ ಹೆಸರು-ದೆಶೆಗಳನ್ನೂ ಅವರ ವಾಸ್ತವ್ಯವನ್ನೂ ನನಗೆಂದೂ ತಿಳಿಸಿರಲಿಲ್ಲ. ಯಾರ ಮುಖದಿಂದಲೋ ನಮಗೊಬ್ಬ ಸೋದರಮಾವನಿರುವನೆಂಬದನ್ನೂ ಅವನು ಹದಿನಾಲ್ಕು ವರ್ಷಗಳ ಹಿಂದೆ ಸಂನ್ಯಾಸಿಯಾಗಿ ಹೋಗಿರುವನೆಂಬದನ್ನೂ ಕೇಳಿ ತಿಳಿದಿದ್ದೆನು.

"ತಂಗೀ, ನೀನನ್ನುವದು ಸತ್ಯವು. ಹದಿನಾಲ್ಕು ವರ್ಷಗಳ ಹಿಂದೆ ಈ ನೀಚ ಫಿರಂಗಿಗಳು ನನ್ನನ್ನೂ, ನಿನ್ನ ಸೋದರತ್ತೆಯನ್ನೂ ಖಡ್ದಹ

ದಿಂದ ಅಪಹರಿಸಿದರು. ನಾನು ಆಗಲೆ ಬಾಲವಿಧವೆಯಾಗಿದ್ದೆನು ಫಿರಂಗಿಗಳು ಅಪಹರಿಸಿದ ದಿನವೇ ನಿನ್ನ ಸೋದರತ್ತೆಯು ಸತ್ತು ಸ್ವರ್ಗವನ್ನೈದಿದಳು. ನಾನು ಮಾತ್ರ ಪಾಪದ ಪ್ರಸಾರವನ್ನು ಮಾಡುತ್ತ ಈಗಲೂ ಜೀವಂತಳಾಗಿ ರುತ್ತೇನೆ, ಎಂದಂದು ವಿನೋದಿನಿಯು ಮತ್ತೆ ಮುಳು ಮುಳು ಎಂದು ಅಳ ಹತ್ತಿದಳು. ವೈಷ್ಣವಿಯ ಆ ಸ್ಥಿತಿಯನ್ನು ಕಂಡು ಲಲಿತೆಗೂ ದುಃಖವಾ ಯಿತು. ಬಳಿಕ ವೈಷ್ಣವಿಯು:--ತಂಗೀ, ಈಗ ನಿನ್ನ ಹುಚ್ಚು ಬಿಟ್ಟುಹೋಗಿದೆ. ಫಿರಂಗಿಗಳಿಗೆ ಈ ಸಂಗತಿಯು ತಿಳಿದರೆ ಈಗಲೆ ಅವರು ನಿನ್ನನ್ನು ಒಡಿ ದೊಯ್ದು ಭ್ರಷ್ಟಗೊಳಿಸುವರು. ಆದ್ದರಿಂದ ಇನ್ನು ನಾನು ನಿನ್ನನ್ನಿಲ್ಲಿ ಇರ ಗೊಡಲಾರೆನು, ಎಂದು ಲಲಿತೆಯನ್ನುದ್ದೇಶಿಸಿ ನುಡಿದು, ಮಯೂಖನ ಕಡೆಗೆ ಹೊರಳಿ:—ಅಪ್ಪಾ, ರಾಜಪುತ್ರಾ, ಲಲಿತೆಯ ಸಲುವಾಗಿ ನೀನು ಇದು ವರೆಗೆ ಅನೇಕ ಸಾಹಸ-ಕಷ್ಟಗಳನ್ನು ಕೈಕೊಂಡಿರುವಂತೆ ಇನ್ನಿಷ್ಟು ಸಾಹಸ ಪಟ್ಟು ಇವಳನ್ನು ಭೀಮೇಶ್ವರಕ್ಕೆ ಮರಳಿ ಕರಕೊಂಡುಹೋಗು.

ವಿನೋದಿನಿಯ ಈ ನುಡಿಯನ್ನು ಕೇಳಿ ಮಯೂಖನು ನರಳುತ್ತ ನರಳುತ್ತ:—ತಾಯಿ, ಹಾಸಿಗೆ ಬಿಟ್ಟು ಏಳಲಿಕ್ಕೆ ಕೂಡ ಅಸಮರ್ಥನಾಗಿ ರುವ ನಾನು, ಈ ಫಿರಂಗಿಗಳ ಜಾಲದೊಳಗಿಂದ ಲಲಿತೆಯನ್ನು ಕರಕೊಂಡು ಭೀಮೇಶ್ವರದ ವರೆಗೆ ಹೋಗುವ ಬಗೆಯೆಂತು?

ಲಲಿತೆಯು ನಡುವೇ ಬಾಯಿಹಾಕಿ ವಿನೋದಿನಿಯನ್ನುದ್ದೇಶಿಸಿ:— ಅಬಚೀ, ಭೀಮೇಶ್ವರಕ್ಕೆ ಹೋಗಿಯಾದರೂ ಮಾಡುವದೇನು? ಅಪ್ಪನು ಇನ್ನು ನನ್ನನ್ನು ಮನೆಯೊಳಗೆ ಬರಗೊಡುವನೇ? ಎಂದಂದು ದುಃಖದಿಂದ ಕಂಠವು ಬಿಗಿದು ಬರಲು ಸುಮ್ಮನಾದಳು.

„ಲಲಿತಾ, ರಾಧಾಮೋಹನ ಗೋಸ್ವಾಮಿಯು ಒಂದು ವೇಳೆ ನಿನ್ನನ್ನು ಮನೆಯೊಳಗೆ ಕರಕೊಳ್ಳಲಿಕ್ಕೆ ಸಮ್ಮತಿಸಿದ್ದರೂ, ಊರೊಳಗಿನ ಪ್ರತಿಷ್ಠಿತ ಜನರು ಅದಕ್ಕೆ ಸಮ್ಮತಿಸುವರೆಂದು ಹೇಳಲಾಗುವದಿಲ್ಲ. ಯಾ- ಕಂದರೆ ನಮ್ಮ ಊರೊಳಗಿನ ಹರಿನಾಥಗಂಗೋಪಾಧ್ಯಾಯರು, ಮಾಧವ ಗಂಗೋಪಾಧ್ಯಾಯರು, ಸಂಧ್ಯೋಪಾಧ್ಯಾಯ ನಾರಾಯಣ ಶಾಸ್ತ್ರಿಗಳು ಮುಂತಾದ ಪ್ರತಿಷ್ಠಿತರು ಸಮಾಜ-ಶಾಸನಕ್ಕಾಗಿ ಪಾಪ! ಆ ಬಡ ರಾಧಾ ಮೋಹನಗೋಸ್ವಾಮಿಗಳಿಗೆ ಈಗಾಗಲೇ ಕಠಿಣವಾದ ಬಹಿಷ್ಕಾರವನ್ನು ಹಾಕಿ ಬಿಟ್ಟಿರುತ್ತಾರೆ.

ಮಯೂಖನ ಈ ಸಂಭಾಷಣವನ್ನು ಕೇಳಿ ವಿನೋದಿನಿಯು:—ನಿಮ್ಮ ಮಾತು ಸತ್ಯವೇ. ಹಾಗಾದರೆ ಇನ್ನು ಏನು ಮಾಡಬೇಕು? ಅಪ್ಪಾ, ನೀನು ಲಲಿತೆಯನ್ನು ಉದ್ಧಾರ ಮಾಡಬೇಕೆಂದು ಹೊರಟಾಗ ಯಾವ ಉಪಾಯದಿಂದ ಅದನ್ನು ಕೊನೆಗಾಣಿಸಬೇಕೆಂದು ನಿರ್ಧರಿಸಿಕೊಂಡಿರುತ್ತೀ?

"ತಾಯಿ, ನಾನು ಇದಾವುದನ್ನೂ ಇದುವರೆಗೂ ಯೋಚಿಸಿರುವದಿಲ್ಲ." ಬಳಿಕ ವಿನೋದಿನಿಯು ತನ್ನ ಗಲ್ಲಕ್ಕೆ ಕೈ ಹಚ್ಚಿಕೊಂಡು ಕುಳಿತು, ಕೆಲಕಾಲದ ವರೆಗೆ ಯೋಚಿಸಿ, ಕಡೆಗೆ ಏನನ್ನೋ ನಿಷ್ಕರ್ಷಿಸಿದಳು. ಆಗ ಅವಳು:—ಲಲಿತೆಯು ಯಾವ ಬಗೆಯಿಂದಲೇ ಆಗಲಿ ನನ್ನ ಆಶ್ರಯಕ್ಕೆ ಬಂದು ಸೇರಿರುವದರಿಂದ, ನಾನು ಇವಳನ್ನು ಸರ್ವಥಾ ನಿರಾಶ್ರಯಗೊಳಿಸಲಾರೆನು; ಆದರೆ ಇನ್ನು ನಾನು ಈ ಹುಗಳೀ ದುರ್ಗದಲ್ಲಿ ಉಳಿದರೆ ಇವಳನ್ನು ರಕ್ಷಿಸುವದು ಅಶಕ್ಯವು. ಆದರಿಂದ ತಮ್ಮಾ, ನಾವಿನ್ನು ನೆಟ್ಟಗೆ ಆಗ್ರಾಪಟ್ಟಣಕ್ಕೆ ಹೊರಡಬೇಕು. ಆಗ್ರಾದ ಹೊರತು ಮತ್ತೆಲ್ಲಿಗೆ ಹೋಗಿ ವಾಸಿಸಿದರೂ ನಾವು ಈ ನೀಚ ಫಿರಂಗಿಗಳ ಉಪಟಳದಿಂದ ಇವಳನ್ನು ಸಂರಕ್ಷಿಸಲಿಕ್ಕೆ ಸಮರ್ಥರಾಗಲಾರೆವು. ತಮ್ಮಾ, ಮಯೂಖಾ, ನೀನೂ ನಮ್ಮೊಡನೆ ಆಗ್ರಾಕ್ಕೆ ಬರುವೆಯಷ್ಟೇ?

ಮಯೂಖ:—ಸಂತೋಷದಿಂದ ಬರುತ್ತೇನೆ.

ಅಂದಿನಿಂದ ವಿನೋದಿನಿಯು ಲಲಿತೆಯನ್ನು ತನ್ನ ಕುಟೀರದ ಹೊರಗೆ ಹೊರಡಲಿಕ್ಕೆ ನಿರ್ಬಂಧಿಸಿದಳು. ತುಸ ದಿನಗಳಲ್ಲಿಯೇ ಮಯೂಖನು ದೇಹಸ್ವಾಸ್ಥ್ಯವನ್ನು ತಾಳಿದನು. ನಂತರ ಒಂದು ದಿನ ರಾತ್ರಿ ವಿನೋದಿನಿ ವೈಷ್ಣವಿಯು ತನ್ನ ಕುಟೀರದೊಳಗಿನ ಎಲ್ಲ ಸಾಮಾನುಗಳನ್ನು ತಕ್ಕೊಂಡು ಲಲಿತಾ-ಮಯೂಖರೊಡನೆ ಆ ಹುಗಳೀ ದುರ್ಗದಿಂದ ಪಲಾಯನ ಸೂಕ್ತವನ್ನು ಪಠಿಸಿದಳು. ಮುಂದೆ ೨ ೩ ದಿನಗಳ ನಂತರ ಜಹಂಗೀರ ನಗರದ ಹಂಗಾಮಿ ಸುಭೇದಾರನಾದ ಅಸದಖಾನನ ನೆರವಿನಿಂದ ತರ್ಕರತ್ನನೂ, ಭುವನನೂ ಹುಗುಳಿಗೆ ಬಂದು ಮಯೂಖ ಮತ್ತು ಲಲಿತೆಯರನ್ನು ಶೋಧಿಸಿದರು. ಅವರು ಎಷ್ಟು ಹುಡುಕಿದರೂ ಎಲ್ಲಿಯೂ ಇವರ ಪತ್ತೆ ಹತ್ತಲಿಲ್ಲ.

ತರ್ಕರತ್ನನು ಜಹಂಗೀರನಗರಕ್ಕೆ ಮರಳಿ ಬಂದು ಮಯೂಖಾದಿಗಳ ಪತ್ತೆಯಾಗದ್ದನ್ನು ಅಸದಖಾನನೇ ಮೊದಲಾದವರಿಗೆ ಅರುಹಲು,

ಆ ಸಂಗತಿಯನ್ನು ಕೇಳಿ ಅಸದಖಾನನು ಚಿಂತಾಕ್ರಾಂತನಾದನು. ಕೆಲ ಹೊತ್ತು ಅವನು ಮನಸ್ಸಿನಲ್ಲಿ ಏನೇನೋ ಯೋಚಿಸಿಕೊಂಡು ನಂತರ ಶಹಾನ್‌ಓಯಾಜಖಾನನನ್ನು ಕುರಿತು:—ನವಾಬರೇ, ನೀವಿನ್ನು ಆಗ್ರಾಕ್ಕೆ ಬಾದಶಹರ ಬಳಿಗೆ ಹೊರಡಿರಿ. ಬಾದಶಹರಿಂದ ಈ ಜಹಾಂಗೀರನಗರಕ್ಕೆ ಬೇರೊಬ್ಬ ಸುಭೇದಾರನ ನೇಮಣೂಕ ಆಗುವ ವರೆಗೆ ನಾನು ಇಲ್ಲಿಯೇ ಇರಬೇಕಾಗಿದೆ. ಆದುದರಿಂದ ನೀವು ಆಗ್ರಾಕ್ಕೆ ಹೋಗಿ ಬಾದಶಹರಿಂದ ಇಲ್ಲಿಗೆ ಬೇರೊಬ್ಬನ ನೇಮಣೂಕನ್ನು ಬೇಗನೆ ಮಾಡಿಸಿರಿ, ಎಂದು ಹೇಳಿದನು. ನವಾಬನು ಹಾಗೆಯೇ ಆಗಲೆಂದೂ, ನಾಳೆಯೇ ನಾನು ನನ್ನ ಮಗ-ಸೊಸೆಯರೊಡನೆ ಆಗ್ರಾಕ್ಕೆ ಹೊರಡುವೆನೆಂದೂ ತಿಳಿಸಿದನು.

ಆಗ ಅಸದಖಾನನು ನವಾಬನನ್ನು ಕುರಿತು ಮತ್ತೆ:—ದೇವೇಂದ್ರನಾರಾಯಣನ ಈ ವೃದ್ಧ ಭೃತ್ಯನೂ, ಆಶ್ರಿತಬ್ರಾಹ್ಮಣನೂ ಮಯೂಖನ ಸಂಧಾನಕ್ಕಾಗಿ ಹೊರಟಿರುವರಷ್ಟೇ? ನೀವು ಇವರನ್ನು ನಿಮ್ಮ ಸಂಗಡ ಕರೆದೊಯ್ದರೆ ಅವರ ಕಾರ್ಯಕ್ಕೆ ಕೆಲಮಟ್ಟಿಗಾದರೂ ಸಹಾಯ ಮಾಡಿದಂತಾದೀತೆಂದು ನನ್ನ ಭಾವನೆಯಿದೆ. ಕಾಫರರೇ, ನೀವು ಈ ನವಾಬಸಾಹೇಬರ ಸಂಗಡ ಆಗ್ರಾದ ವರೆಗೆ ಹೋಗಿರಿ; ಹಾಗು ಅಲ್ಲಿ ನಿಮ್ಮ ಮಯೂಖಾದಿಗಳ ಪತ್ತೆ ಹಚ್ಚಿರಿ. ಇತ್ತ ಎಲ್ಲಿಯಾದರೂ ಅವನ ಸಂಧಾನವು ಹತ್ತಿದರೆ, ಅವನನ್ನು ಭೀಮೇಶ್ವರಕ್ಕೆ ಸುಖರೂಪವಾಗಿ ಕಳಿಸಿ, ಆ ಸಂಗತಿಯನ್ನು ಆಗ್ರಾಕ್ಕೆ ಈ ನಮ್ಮ ನವಾಬಸಾಹೇಬರ ಮುಖಾಂತರವಾಗಿ ನಿಮಗೆ ತಿಳಿಸುತ್ತೇನೆ.

ಆಗ ತರ್ಕರತ್ನನು ನಡುವೇ ಬಾಯಿಹಾಕಿ:—ಸುಭೇದಾರಸಾಹೇಬ, ನನ್ನ ವಿನಂತಿಯನ್ನಷ್ಟು ಮನ್ನಿಸಿರಿ. ನಾನು ಮಯತ ದೇವೇಂದ್ರನಾರಾಯಣನ ಉಪ್ಪುಂಡುವನಾಗಿದ್ದು, ಅವನ ಮಗನ ಕ್ಷೇಮಚಿಂತನೆ ಮಾಡುವದಂತೂ ನನ್ನ ಆದ್ಯ ಕರ್ತವ್ಯವೇ ಸರಿ. ಅದನ್ನಂತೂ ನಾನು ಇಹ-ಪರ ಜನ್ಮಗಳಲ್ಲೂ ಮಾಡಲು ಬದ್ಧನಾಗಿರುತ್ತೇನೆ. ಅದರಂತೆ ನಮ್ಮ ದೇಶದ ಜನರನ್ನು ಪರಿಪರಿಯಿಂದ ಪೀಡಿಸುತ್ತಿರುವ ಈ ಫಿರಂಗಿಗಳ ಉಪಟಳವನ್ನು ದೂರೀಕರಿಸುವದೂ ನನ್ನ ಕರ್ತವ್ಯ ಕ್ಷೇತ್ರದಲ್ಲಿ ಶ್ರೇಷ್ಠತರದ್ದಾಗಿರುತ್ತದೆ. ಆದುದರಿಂದ ಸಾಹೇಬ, ಈ ನವಾಬರಿಗೆ ಹೇಳಿ, ನನ್ನನ್ನಷ್ಟು ಬಾದಶಹ

ರಿಗೆ ಭೇಟಿಮಾಡಿಸುವಂತೆ ಮಾಡಬೇಕು.

"ಕಾಫರ, ನೀನು ಬಾದಶಹರಿಗೆ ಭೇಟಿಯಾಗಿ ಮಾಡುವದೇನು?"

"ನಾನು ಬಾದಶಹರ ಬಳಿಗೆ ಹೋಗಿ ಇಲ್ಲಿ ನಡೆದಿರುವ ಫಿರಂಗಿಗಳ ಉತ್ಪಾತವನ್ನೆಲ್ಲ ಚೆನ್ನಾಗಿ ತಿಳಿಸುವೆನಲ್ಲದೆ, ಯಾವ ಬಗೆಯಿಂದ ವರ್ತಿಸಿ, ಇವರ ಉಪಟಳದಿಂದ ಇಲ್ಲಿಯ ಪ್ರಜೆಗಳನ್ನು ಮುಕ್ತ ಮಾಡಬೇಕೆಂಬದನ್ನೂ ಅವರಿಗೆ ತಿಳಿಸುವವನಿದ್ದೇನೆ."

ಶಹಾನ್ ಓಯಾಜಖಾನ:—ಉತ್ತಮ-ಬಹು ಉತ್ತಮ. ನಾವು ಆ ಬಗ್ಗೆ ಬಾದಶಹರೆದುರಿಗೆ ತಿಳಿಸುವದಕ್ಕಿಂತ ಫಿರಂಗಿಗಳ ಉಪಟಳದಿಂದ ತ್ರಸ್ತರಾಗಿರುವ ಇವರೇ ಅದನ್ನು ಅವರೆದುರಿಗೆ ತಿಳಿಸುವದು ಅತ್ಯುತ್ತಮವು. ಆದ್ದರಿಂದ ಸುಭೇದಾರಸಾಹೇಬ, ಈ ಕಾಫರ ಮುಲ್ಲಾನನ್ನು (ಬ್ರಾಹ್ಮಣನನ್ನು) ನನ್ನೊಡನೆ ಬರಗೊಡಿರಿ. ಇಷ್ಟೇ ಅಲ್ಲ, ಯಾವ ಕಾಫರ ಫಕೀರನಾದ ಚೈತನ್ಯದಾಸನೆಂಬುವನನ್ನು ಆ ಫಿರಂಗೀ ಪಾದ್ರಿಗಳು ಚಕ್ರಕ್ಕೆ ಕಟ್ಟಿ ತಿರುಗಿಸಿ ಅವನ ದೇಹದ ಎಲುವುಗಳನ್ನು ಪುಡಿಪುಡಿಯಾಗಿ ಮಾಡಿರುವರೋ, ಆ ಬೈರಾಗಿಯನ್ನೂ ನನ್ನೊಡನೆ ಕಳಿಸಿರಿ. ನಾನು ಇವರಿಬ್ಬರನ್ನೂ ಬಾದಶಹರ ಎದುರಿಗೆ ಒಯ್ದು ನಿಲ್ಲಿಸುವೆನು. ಬಳಿಕ ಇವರು ತಮ್ಮ ಮುಖದಿಂದಲೇ ತಮ್ಮ ಸಂಗತಿಯನ್ನು ಬಾದಶಹರಿಗೆ ತಿಳಿಸಲಿ.

ಅಸದಖಾನನು ನವಾಬನ ಸೂಚನೆಯನ್ನು ಮನ್ನಿಸಿದನು.

ಮರುದಿನ ನಬಾಬನು ಸ್ವಪರಿವಾರದೊಡನೆ ಆಗ್ರಾಭಿಮುಖವಾಗಿ ಹೊರಟನು. ಅವನೊಡನೆ ಭುವನ, ತರ್ಕರತ್ನ ಭಟ್ಟಾಚಾರ್ಯ, ಚೈತನ್ಯದಾಸ ಬೈರಾಗಿ ಇವರೆಲ್ಲರೂ ಇದ್ದರೆಂದು ಬೇರೆ ತಿಳಿಸುವ ಕಾರಣವಿಲ್ಲ. ಗುಲ್‌ರುಖಳು-ಯಾವಳು ಸಪ್ತಗ್ರಾಮದ ತ್ರಿವೇಣೀ ಸಂಗಮದಲ್ಲಿ ತನ್ನ ಅದ್ವಿತೀಯ ಸತಾರವಾದನದಿಂದ ಅಲ್ಲಿಯ ಸಹಸ್ರಾರು ಜನರ ಚಿತ್ತವನ್ನು ಸೆಳೆದುಕೊಂಡಿದ್ದಳೋ, ಹಾಗು ಯಾವಳು ನಮ್ಮ ಮಯೂಖನ ರೂಪದಲ್ಲಿ ಮೋಹಿತಳಾಗಿದ್ದಳೋ, ಆ ಯವನ ತರುಣಿಯು-ತನ್ನ ಸಖಿಯಾದ ಫಾತಮೆ ಹಾಗು ಸೇವಕನಾದ ಹಬೀಬ ಇವರೊಡನೆ ನಬಾಬನ ದಳದಲ್ಲಿ ಸೇರಿ ಆಗ್ರಾಕ್ಕೆ ನಡೆದಿದ್ದಳು.

† † † † † † † † † † † † † † †

ಯಮುನಾನದೀತೀರದಲ್ಲಿ ಆಗ್ರಾಕೋಟೆಯ ಎದುರಿಗೆ ಒಬ್ಬ ಗೌರ ವರ್ಣದ ಯುವಕನು ಒಂದು ಡೋಣಿಯೊಳಗೆ ಕುಳಿತಿರುತ್ತಾನೆ. ಆಗ ಯಮುನೆಯು ಈಗಿನಂತೆ ದುರ್ಗದಿಂದ ದೂರಸರಿದು ಹರಿಯುತ್ತಿರಲಿಲ್ಲ; ದುರ್ಗದಹತ್ತರ ಸದ್ಯಕ್ಕೆ ಬೆಳೆದಿರುವಂತೆ ಒಂದು ಗಿಡವೂ ಆಗ ಹುಟ್ಟಿರಲಿಲ್ಲ. ಅಂದು ಒಳ್ಳೇ ಪ್ರಖರವಾದ ಬಿಸಿಲು ಬಿದ್ದಿತ್ತು. ಬಾದಶಹನು ಆಗ ಆಗ್ರಾದಲ್ಲಿಯೇ ವಾಸವಾಗಿದ್ದನು. ಆದರಿಂದ ಬಿಸಿಲಿನ ತಾಪನಿವಾರಣ ಕ್ಕಾಗಿ ದುರ್ಗದ ಹತ್ತರ ಯಾರೂ ಛತ್ರಗಳನ್ನು ಧರಿಸುವಂತಿರಲಿಲ್ಲ. ಆ ಯುವಕನು ತನ್ನ ಕರವಸ್ತ್ರದಿಂದ ಗಾಳಿಬೀಸಿಕೊಂಡು ಆ ಪ್ರಖರವಾದ ಬಿಸಿಲಿನ ತಾಪವನ್ನು ಕೆಲಮಟ್ಟಿಗೆ ನಿವಾರಿಸಿಕೊಳ್ಳಲು ಪ್ರಯತ್ನಿಸುತ್ತಿದ್ದನು. ಆಗ ಶ್ರಾವಣಮಾಸವಾಗಿದ್ದು, ನಡು ನಡುವೆ ವಿಪುಲವಾದ ವೃಷ್ಟಿಯು ಆಗುತ್ತಿತ್ತು. ಆದರೂ ಉತ್ತರಹಿಂದುಸ್ತಾನದ ಆ ನಾಡಿನಲ್ಲಿ ಆಗ ಒಳ್ಳೇ ಭೀಕರವಾದ ಬಿಸಿಲು ಬೀಳುತ್ತಿತ್ತು. ಆಗ್ರಾಕೋಟೆಯೊಳಗಿನ ಬಿಳೇಸಂಗಮರವರೀ ಕಲ್ಲಿನಿಂದ ನಿರ್ಮಿಸಲ್ಪಟ್ಟ ಅಸಂಖ್ಯ ಪ್ರಾಸಾದ ಶ್ರೇಣಿಗಳು ತರತರದ ಬಣ್ಣಗಳಿಂದ ಹೊಳೆಯುತ್ತಿದ್ದವು. ಬಾದಶಹನು ಆಗ ಆಗ್ರಾದುರ್ಗದಲ್ಲಿಯೇ ಇದ್ದುದರಿಂದ ಹಸರು ಬಣ್ಣದ ಪತಾಕೆಯು ಆ ಕೋಟೆಯ ಮೇಲೆ ಮೆರೆಯುತ್ತಿದ್ದಿತು.

ದುರ್ಗದ ನಾಲ್ಕು ಮಗ್ಗಲುಗಳಲ್ಲಿಯೂ ತಮ್ಮ ತಮ್ಮ ಪ್ರಚಂಡವಾದ ಸೇನೆಗಳಿಂದ ಸಹಿತರಾದ ಸೇನಾನಿಗಳು ಕಣ್ಣಲ್ಲಿ ಎಣ್ಣೆಯನ್ನು ಹಾಕಿಕೊಂಡು ಪಹರೆಯನ್ನು ಮಾಡುತ್ತಿದ್ದರು. ದುರ್ಗಮಧ್ಯದಲ್ಲಿ, ಯಮುನಾ ತಟಾಕದಲ್ಲಿ, ಬಾದಶಹನ ಅಂತಃಪುರವು-ರಾಣೀವಾಸವು ಇದ್ದಿತು. ಅಲ್ಲಿ ಅಕರಾಳ-ವಿಕರಾಳ ಸ್ವರೂಪದ ತಾರ್ತರೀ ದೇಶದ ದಾಸಿಯರೂ ತುರ್ಕೀ ದೇಶದ ಖೋಜಾ ಜನರೂ ಕಠಿಣ ಪಹರೆಯನ್ನು ನಡಿಸಿದ್ದರು. ಅವರಲ್ಲಿಯ ಎರಡು-ಮೂರು ಜನ ಪಹರೆಯವರು ದುರ್ಗದ ಪಕ್ಕದಲ್ಲಿ ಡೋಣಿಯೊಳಗೆ ನಿಂತುಕೊಂಡಿದ್ದ ಆ ತರುಣನ ಬಳಿಗೆ ಬಂದು, "ನೀನು ಇಲ್ಲಿ ಹೀಗೇಕೆ ನಿಂತಿರುವೆ"ಯೆಂದು ಕೇಳಿ, ಅವನೆಡೆಯಲ್ಲಿ ಬಾದಶಹನ ಗುರುತಿನ "ಪಂಜಾ" ಇದ್ದದ್ದನ್ನು ನೋಡಿ, ಅವರೆಲ್ಲರೂ ಪ್ರತಿ ಮಾತನಾಡದೆ ಸುಮ್ಮನೆ ಹೊರಟು ಹೋಗುತ್ತಿದ್ದರು ಹೀಗೆ ಆ ಯುವಕನು ಅಲ್ಲಿ ನಿಂತುಕೊಂಡು ಎರಡು ತಾಸುಗಳು ಕಳೆದು ಹೋದವು. ಆದರಿಂದ

ಬೇಸತ್ತು ಅವನು ತನ್ನ ಡೋಣಿಯಲ್ಲಿಯೇ ತುಸ ಒರಗಿಕೊಂಡನು. ಕೂಡಲೆ ಅವನಿಗೆ ಗಾಢವಾದ ನಿದ್ರೆಯು ಹತ್ತಿತು!

ಆ ಯುವಕನು ನಿದ್ರೆಯಿಂದ ಎಚ್ಚತ್ತಿದ್ದನೋ ಇಲ್ಲವೆ ಇನ್ನೂ ಸ್ವಪ್ನಾವಸ್ಥೆಯಲ್ಲಿದ್ದನೋ ತಿಳಿಯದು. ಇಷ್ಟರಲ್ಲಿ ಆವನಿಗೆ ಆ ದುರ್ಗದೊಳಗಿನ ಅಂತಃಪುರದ ಮಂದಿರದಲ್ಲಿ ಸತಾರಬಾರಿಸುವ ಸಪ್ಪಳವು ಕೇಳಲಾರಂಭಿಸಿತು ತಾನು ಸಪ್ತಗ್ರಾಮದ ತ್ರಿವೇಣೀಸಂಗಮದಲ್ಲಿ ಕೇಳಿದ ಇಂಪಾದ ಸತಾರಿನ ನಾದವೇ ಇದೆಂದು ಆ ತರುಣನು ತನ್ನ ಮನಸ್ಸಿನಲ್ಲಿಯೇ ನಿರ್ಧರಿಸಿಕೊಂಡನು. ತಾನು ಹಿಂದಕ್ಕೆ ಅದೇ ಸಪ್ತಗ್ರಾಮದಲ್ಲಿ ಫಿರಂಗಿಗಳೊಡನೆ ಆದ ಯುದ್ಧದಲ್ಲಿ ಗಾಯಪಟ್ಟು ತ್ರಿವೇಣಿಯ ಸಂಗಮದ ಹಿಂದು ಸುಂದರವಾದ ನಾವಿನೊಳಗಿನ ಮಂಚದ ಮೇಲೆ ಮಲಗಿದಾಗ ಯಾವ ಸುಂದರ ತರುಣಿಯು ತನ್ನ ಬಳಿಯಲ್ಲಿ ಕುಳಿತು ಹಾಡುತ್ತಿದ್ದಳೋ, ಅದೇ ತರುಣಿಯು ಈಗಲೂ ಆ ಬಾದಶಾಹೀ ರಾಣೀವಾಸದೊಳಗಿನ ಆ ಕಕ್ಷದಲ್ಲಿ ಹಾಡುತ್ತಿರುವಂತೆ ಆ ತರುಣನಿಗೆ ಭಾಸವಾಯಿತು. ಕೆಲಹೊತ್ತಿನಲ್ಲಿಯೇ ಆ ತರುಣನ ನಿದ್ರೆಯು ಹಾರಿಹೋಯಿತು. ಅವನು ಚಟಕ್ಕನೆ ಡೋಣಿಯಲ್ಲಿ ಎದ್ದು ನಿಂತನು. ಈಗ ಅವನಿಗೆ ಆ ಸತಾರಿನ ಸುನಾದವೂ, ಗಾಯನದ ಆಲಾಪವೂ ಬಹು ಚನ್ನಾಗಿ ಕೇಳಿಸಹತ್ತಿದವು. ಯುವಕನು ಹೊಳೆಯೊಳಗಿನ ನೀರಿನಿಂದ ತನ್ನ ಕಣ್ಣು-ಮೋರೆಗಳನ್ನು ತೊಳೆದುಕೊಂಡು, ಆ ಸುನಾದವು ಕೇಳಬರುತ್ತಿರುವ ಕಡೆಗೆ ಮುಖ ತಿರುವಿಕೊಂಡು ನಿಂತನು. ಅಷ್ಟರಲ್ಲಿ ಯಾವ ಕಿಟಕಿಯೊಳಗಿಂದ ಆ ಸುನಾದವು ಹೊರಬೀಳುತ್ತಿತ್ತೋ ಆ ಕಿಟಕಿಯ ಪರದೆಯು ಓರೆಗೆ ಸರಿಸಲ್ಪಟ್ಟಿತು. ಆ ಕಿಟಕಿಯ ಹತ್ತರ ಕುಳಿತು ಸತಾರವನ್ನು ಬಾರಿಸುತ್ತಿದ್ದ ಆ ಪೂರ್ವಪರಿಚಿತ ಯುವನತರುಣಿಯ ಮುಖಮಂಡಲವು ಆ ನಮ್ಮ ತರುಣನಿಗೆ ಕಾಣಿಸಿಕೊಂಡಿತು. ಕ್ಷಣಕಾಲದ ವರೆಗೆ ಅವನು ಅತ್ತ ಏಕಾಗ್ರತೆಯಿಂದ ನೋಡುತ್ತಾ ನಿಲ್ಲಲು, ಆ ತರುಣಿಯೂ ಇವನನ್ನು ನೋಡಿದಳು. ಇಬ್ಬರ ಚಕ್ಷುಗಳೂ ಮಿಲಿತವಾದವು! ಆ ಕೂಡಲೆ ಅಲ್ಲಿದ್ದ ಒಬ್ಬ ತಾರ್ತರೀದಾಸಿಯು ಆ ತರುಣ-ತರುಣಿಯರ ದೃಷ್ಟಿಮ್ಮಿಲನದಿಂದ ತನ್ನ ಚಾಕರಿಗೆ ಎಲ್ಲಿ ಭಂಗಬರುವದೋ ಎಂಬ ಅಂಜಿಕೆಯಿಂದ ಆ ಕಿಟಕಿಯ ಪರದೆಯನ್ನು ಮೊದಲಿನಂತೆ ಜಗ್ಗಿ ಮರೆಮಾಡಿಕೊಂಡಳು. ಆ ಯುವಕನು ಮತ್ತೆ ಎಷ್ಟೋ ಹೊತ್ತಿನವರೆಗೆ ಆ ಕಿಟಕಿಯ

ದಿಟ್ಟಿಸಿ ನೋಡುತ್ತಿದ್ದನು. ಆದರೂ ಆ ಪರದೆಯು ಬದಿಗಾಗಲಿಲ್ಲ; ಹಾಗೂ ಆ ಯುವತಿಯ ಮುಖವು ಇವನ ಕಣ್ಣಿಗೆ ಬೀಳಲಿಲ್ಲ. ಅದರಿಂದ ಅವನು ಅತ್ಯಂತ ನಿರಾಶೆಗೊಂಡನು.

ಅಲ್ಪಾವಕಾಶವಲ್ಲಿಯೇ ಆ ಅಂತಃಪುರದ'ದರಿಯಾ' ಎಂಬ ಗುಪ್ತದ್ವಾರದಿಂದ ಒಬ್ಬ ಖೋಜಾ ಹಾಗು ಒಬ್ಬ ದಾಸಿ ಇವರೊಡನೆ ಒಬ್ಬ ಪ್ರೌಢೆಯು ಹೊರಬಿದ್ದಳು. ಆ ಪ್ರೌಢೆಯು ಬಂದವಳೇ ಆ ಯುವಕನ ಡೋಣಿಯನ್ನು ಹತ್ತಿದಳು. ಕೂಡಲೆ ಸಮೀಪದಲ್ಲಿಯೇ ವಿಶ್ರಾಂತಿಯನ್ನನುಭವಿಸುತ್ತಿದ್ದ ಅಂಬಿಗರು ಆ ಯುವಕನ ಆಜ್ಞೆಯ ಮೇರೆಗೆ ಆ ಡೋಣಿಯನ್ನು ಹೊಳೆಯಲ್ಲಿ ದೂಡಿ ಹುಟ್ಟುಕಡಿಯಹತ್ತಿದರು ನೌಕೆಯು ಒತ್ತರದಿಂದ ಸಾಗಲು, ಆಗ್ರಾಕೋಟೆಯು ಹಿಂದಾಯಿತು ಆಗ ಆ ಪ್ರೌಢೆಯು ತನ್ನ ಮೋರೆಯ ಮೇಲಿನ ಮುಸುಕ (ಘೋಷಾವ) ನ್ನು ತೆಗೆದು:—ಅಪ್ಪಾ, ಇಂದಿನ ಶಕುನವು ಶುಭಕರವಾಗಿ ತೋರುತ್ತಿದೆ. ಬಾದಶಹನ ಮುಖ್ಯ ಬೇಗಮಳನ್ನು ಒಲಿಸಿಕೊಂಡು ಬಂದಿರುತ್ತೇನೆ. ನಾಳಿನ ದಿನವೇ ನೀನು ನಬಾಬ ಅಸಫಖಾನರಿಗೆ ಭೆಟ್ಟಿಯಾಗು. ಅವರು ನಿನ್ನನ್ನು ದಿವಾಣ-ಈ-ಖಾಸಕ್ಕೆ ಕರೆದೊಯ್ಯುತ್ತಾರೆ.

ತರುಣನು ಹರ್ಷಯುಕ್ತನಾಗಿ:—ತಾಯಿ, ಇಷ್ಟು ದಿನಗಳ ನಂತರವಾದರೂ ಇಂದು ದೇವರಿಗೆ ದಯೆಯುಂಟಾಯಿತೆನ್ನಬೇಕು.

"ಮತ್ತು ಇಷ್ಟು ದಿನಗಳ ತರುವಾಯದಲ್ಲೆಲ್ಲೋ ನಮ್ಮ ಲಲಿತೆಯ ದುಃಖನಿವಾರಣದ ಆಶೆಯು ಸೂಚಿತವಾಗಹತ್ತಿದೆ"

"ಅಸದಖಾನರಿಂದೇನಾದರೂ ವರ್ತಮಾನ ಬಂದಿದೆಯೋ?"

"ಅದೇನಿಲ್ಲ; ಆದರೆ ಜಹಾಂಗೀರನಗರದ ಹರೇಕೃಷ್ಣರಾಯನು ಯಾವ ಕೆಲಸಕ್ಕಾಗಿಯೋ ಇಲ್ಲಿಗೆ ಬಂದಿರುತ್ತಾನಂತೆ."

"ಅಸದಖಾನನು ಸ್ವತಃ ಬರದ ಹೊರತು ಬಾದಶಹನ ದರ್ಬಾರದಲ್ಲಿ ನಮಗನುಕೂಲವಾಗಲಾರದು"

"ತಮ್ಮಾ, ಅದು ಹೇಗೆಯೇ ಇರಲಿ; ನೀನಿನ್ನು ಬೇಗನೆ ಲಲಿತೆಯನ್ನು ಲಗ್ನವಾಗಿಬಿಡು. ಈ ಮೊಗಲಾಯಿಯಲ್ಲಿ ಅವಳಂತಹ ರೂಪಸಂಪನ್ನ ತರುಣ ಹುಡುಗಿಯನ್ನು ಅವಿವಾಹಿತಳನ್ನಾಗಿರಿಸುವದು ಯುಕ್ತವಲ್ಲ?"

"ತಾಯೀ, ನಿನ್ನ ಆಜ್ಞೆಯಂತೆ ನಾನು ಅವಳನ್ನು ಇಂದೇ ಲಗ್ನ

ವಾಗಲಿಕ್ಕೆ ಸಿದ್ಧನಾದರೂ ನಮ್ಮ ಬಂಗಾಲ ದೇಶದ ಪುರೋಹಿತರಿಲ್ಲಿಲ್ಲಿ ದೊರಕಬೇಕು?

"ಮುಖ್ಯ ಬೇಗಮ್‌ಸಾಹೇಬಳು ಹೇಳಿರುವದೇನಂದರೆ:—ವೃಂದಾವನದಿಂದೊಬ್ಬ ಬಂಗಾಲೀ ಗೋಸಾವಿಯನ್ನು ಕರೆತರಿಸಿಕೊಡುತ್ತೇನೆಂದು. ಅವಳು ಲಲಿತೆಯನ್ನು ನೋಡಬೇಕೆಂದು ಬಹು ಕುತೂಹಲವುಳ್ಳವಳಾಗಿರುವಳು. ವಿವಾಹವಾಗದ ಹೊರತು ಆ ಅಂತಃಪುರಕ್ಕೆ ಅವಳನ್ನು ಕರೆದೊಯ್ಯುವದು ವಿಹಿತವಲ್ಲ ಆದರಿಂದ ಲಗ್ನವಾಗದ ಹೊರತು ನಮ್ಮ ಜಾತಿಯ ಹೆಣ್ಣುಹುಡುಗಿಯರು ಎಲ್ಲಿಗೂ ಹೋಗುವ ಪರಿಪಾಠವಿಲ್ಲೆಂದು ನಾನು ಅವಳಿಗೆ ತಿಳಿಸಿ ಬಂದಿರುತ್ತೇನೆ.

ಯುವಕನು ಏನೂ ಉತ್ತರಕೊಡದೆ ಅವನತ ಮುಖದಿಂದ ಸುಮ್ಮನಿದ್ದನು. ಅದನ್ನು ಕಂಡು ಆ ಪ್ರೌಢೆಗೆ ಹಿಡಿಸಲಾರದಷ್ಟು ಸಂತೋಷವಾಯಿತು ಇಷ್ಟರಲ್ಲಿ ಅವರು ಕುಳಿತ ಡೋಣಿಯು ಆಗ್ರಾಪಟ್ಟಣದ ಹತ್ತರ ಬಂದಿತ್ತು. ಇದೇ ಕಾಲಕ್ಕೆ ಬಾದಶಹನ ಕನ್ನಡಿಯ ಜಹಾಂಗೀರ ಮಹಾಲಿನಲ್ಲಿ ಕುಳಿತ ಒಬ್ಬ ತರುಣಿಯು—ಈ ಮೊದಲು ಅಲ್ಲಿ ಇಂಪಾಗಿ ಸತಾರನ್ನು ಬಾರಿಸುತ್ತಿದ್ದ ಆ ಯುವತಿಯು—ತನ್ನ ಒಬ್ಬ ತಾರ್ತರೀ ದಾಸಿಯೊಡನೆ ಏನೇನೋ ಸಂಭಾಷಣವನ್ನು ನಡಿಸಿದ್ದಳು. ಕೆಲ ಕ್ಷಣಗಳ ನಂತರ ಆ ಯುವತಿಯು ದಾಸಿಯನ್ನು ಕುರಿತು:—

"ತಾರ್ತರಿ, ಆಗಲೇ ಆ ದರಿಯಾ ಬಾಗಲಿನಿಂದ ಹೊರಟು ಹೋಗಿ ಆ ತರುಣನ ಡೋಣಿಯನ್ನೇರಿದ ಆ ಪ್ರೌಢೆಯನ್ನು ನೀನು ಬಲ್ಲೆಯಾ?''

"ಬಲ್ಲೆನು, ಚೆನ್ನಾಗಿ ಬಲ್ಲೆನು.'' "ಅವಳು ಯಾರು?''

"ಅವಳು ಬಂಗಾಲ ದೇಶದ ಒಬ್ಬ ಹೆಣ್ಣು ಮಗಳು. ಅತ್ಯುತ್ತಮವಾಗಿ ಕಸೂತಿಯನ್ನು ಹಾಕುವಳು. ಎರಡು-ಮೂರು ದಿನಗಳಿಗೊಮ್ಮೆ ಹಜರತ ಬೇಗಮರ ಬಳಿಗೆ ಬರುತ್ತಿರುತ್ತಾಳೆ.''

"ಅವಳ ಹೆಸರೇನು?''

"ಅವಳ ಆ ಬಂಗಾಲಿ ಹೆಸರನ್ನು ನಾನು ಚನ್ನಾಗಿ ಉಚ್ಚರಿಸಲಾರೆನು. ಅವಳಿಗೆ ವಿನ್ದಿನಿಯೋ-ವಿನ್ದಾನಿಯೋ ಹೀಗೆ ಏನೋ ಅನ್ನುತ್ತಿರುತ್ತಾರೆ.''

"ಮುಗ್ಧ ತಾರ್ತರೀ, ಅವಳಿಗೆ ವಿನೋದಿನಿ ಎನ್ನುತ್ತಿರುತ್ತಾರೇನು?''

"ಹ, ಅಹುದು; ತಾವು ಕೇವಲ ಆ ಬಂಗಾಲೀ ಕಾಫರರಂತೆಯೇ

ಅವಳ ಹೆಸರನ್ನು ಉಚ್ಚರಿಸಿದಿರಲ್ಲ?''

"ಹೌದು, ನಾನು ಎಷ್ಟೋ ದಿನಗಳವರೆಗೆ ಬಂಗಾಲದೇಶದಲ್ಲಿ ಸಂಚರಿಸಿ ಬಂದವಳಿರುತ್ತೇನೆ?''

"ಹಾಗಾದರೆ, ತಾವು ಆ ಬಂಗಾಲೀ ಹೆಂಗಸನ್ನೂ ಗುರ್ತಿಸುವಿರೋ?''

"ಇಲ್ಲ,-ಇಲ್ಲ. ನಾನು ಅವಳನ್ನು ಗುರ್ತಿಸುವದಿಲ್ಲ; ಆದರೆ, ಅವಳು ಯಾವನ ಡೋಣಿಯನ್ನೇರಿ ಹೋದಳೋ, ಆ ತರುಣನ ಗುರುತು ಮಾತ್ರ ನನಗೆ ಚೆನ್ನಾಗಿರುತ್ತದೆ. ಆವನೇ ನನ್ನ ಗಂಡನು. ನೀನು ಅವರ ವಾಸಸ್ಥಳವನ್ನು ಗೊತ್ತುಹಚ್ಚಬಲ್ಲೆಯಾ?''

"ಯಾಕೆ ಪತ್ತೆ ಹಚ್ಚಲಿಕ್ಕಿಲ್ಲ? ನನಗೆ ಸಾಕಷ್ಟು ರಜೆಯನ್ನೂ ಕೆಲ ಖರ್ಚಿನ ವ್ಯವಸ್ಥೆಯನ್ನೂ ಮಾಡಿಕೊಟ್ಟರೆ, ನಾನು ಅವರ ಸಂಧಾನವನ್ನು ಸಹಜವಾಗಿ ಹಚ್ಚುವೆನು.''

"ನಿನ್ನ ಖರ್ಚಿಗೆ ಎಷ್ಟು ಹಣ ಬೇಕಾದರೂ ಕೊಡುವೆನು. ನೀನು ಈ ಆಗ್ರಾಪಟ್ಟಣದ ಎಲ್ಲ ಘಾಟು-ಬೀದಿಗಳನ್ನೂ ಬಲ್ಲೆಯಾ?''

"ನನಗೆ ಅವೆಲ್ಲ ಗೊತ್ತಿರದಿದ್ದರೂ ಈ ಪಟ್ಟಣದೊಳಗೆ ನನಗೊಬ್ಬ ಜೀವದ ಗೆಳೆಯನಿದ್ದು, ಅವನಿಗೆಲ್ಲ ಅವು ಗೊತ್ತಿವೆ.''

ನಾನು ನಿನಗೊಂದು ಅಜ್ಞಾಪತ್ರವನ್ನು ಕೊಡುತ್ತೇನೆ. ಅದನ್ನು ನೀನು ಇಲ್ಲಿಯ ಮುಖ್ಯ ಖೋಜಾನಿಗೆ ತೋರಿಸಿದರೆ ನಿನಗೆ ಒಂದು ವಾರದ ರಜೆಯು ಸಹಜವಾಗಿ ದೊರೆಯುವದು; ಅಲ್ಲದೆ ನಿನಗೆ ಇನ್ನೊಂದು ಚೀಟಿಯನ್ನು ಕೊಡುತ್ತೇನೆ. ಅದನ್ನು ತೋರಿಸಿದರೆ ಹುಜೂರ-ಖಜೀನದಾರನು ನಿನಗೆ ನಾಲ್ಕು ಅಶರಫಿ (ಆಗಿನ ಕಾಲದ ಬಂಗಾರದ ನಾಣ್ಯ)ಗಳನ್ನು ಕೊಡುತ್ತಾನೆ ಅವನ್ನು ತಕ್ಕೊಂಡು ನೀನು ನಿನ್ನ ಗೆಳೆಯನೊಡನೆ ಆ ನನ್ನ ಗಂಡನ ಪತ್ತೆ ಹಚ್ಚಿ ಬರಬೇಕು. ಇದಕ್ಕೆ ತಪ್ಪಿ, ಕೈಗಳನ್ನಲ್ಲಾಡಿಸುತ್ತ ಸುಮ್ಮನೆ ಹಿಂದಿರುಗಿ ಬಂದರೆ, ನಿನ್ನನ್ನು ಶೂಲಕ್ಕೇರಿಸಿ ಕೊಲ್ಲಿಸುವೆನು. ತಾರ್ತರೀ, ತಿಳಿಯಿತೆ?''

ಆಗ ಆ ತಾತರೀ ದಾಸಿಯು ಆ ತರುಣಿಗೆ ಕೃತಜ್ಞತಾದರ್ಶಕವಾದುದೊಂದು ಸಲಾಮು ಮಾಡಿ:—"[illegible], ತಮ್ಮ ಆಜ್ಞೆಯ ಮೇರೆಗೆ ಒಂದೇ ವಾರದಲ್ಲಿ [illegible] ಹಚ್ಚಿಕೊಂಡು ಬರು

ತ್ತೀನೆ, ತಪ್ಪಲಿಕ್ಕಿಲ್ಲ.''

''ಬರೇ ಅವನ ಸ್ಥಳವನ್ನು ಗೊತ್ತುಮಾಡಿಕೊಂಡು ಬಂದರೆ ತೀರ ಲಿಲ್ಲ. ಅವನನ್ನು ಹಿಡಿತರತಕ್ಕದ್ದು.''

''ಅವರನ್ನು ಎಲ್ಲಿಗೆ ಕರೆತರಬೇಕು?''

''ಯಾಕೆ, ಹೀಗೇಕೆ ಪ್ರಶ್ನೆಮಾಡುತ್ತೀ? ಎಲ್ಲಿಗೆಂದರೆ, ಈ ನಮ್ಮ ರಂಗಮಹಾಲಿಗೇ ಕರೆತರತಕ್ಕದ್ದು.''

''ಈ ನಿಮ್ಮ ಆಜ್ಞೆಯಂತೆ ನಡೆದರೆ ಇಲ್ಲಿಯ ಎಲ್ಲ ದಾಸ-ದಾಸಿಯರ, ಅದರಂತೆ ಎಲ್ಲ ಅಂತಃಪುರವಾಸಿಗಳ ಕತ್ತಲ್ ಆದೀತು, ಕತ್ತಲ್. ನಾನು ಯಾರೆಂದು ತಿಳಿದಿರುವಿರಿ? ಇಮಾನೀ ತಾರ್ತರೀ ದಾಸಿಯು. ನನಗೇ ಹುಚ್ಚು-ಹುಳುಕುಗಳ್ನು ಕಲಿಸಬರುವಿರಾ?'' ಎಂದು ದಾಸಿಯು ಕೆಂಪಡ ರಿದ ಕಣ್ಣುಗಳಿಂದ ನುಡಿಯಲು,

''ದಾಸೀ, ಇಷ್ಟೇಕೆ ಸಿಟ್ಟಗೇಳುವೆ? ಹೀಗೆ ಮಾಡಿದರೇನಾಗುವ ದೆಂಬದನ್ನು ನನಗಷ್ಟು ತಿಳಿಹೇಳಬಾರದೇ?''

''ಹಿಂದಕ್ಕೆ ನೂರಜಹಾನ ಬೇಗಮರ ಕಾಲಕ್ಕೆ ಯಾರೋ ಒಬ್ಬಿಬ್ಬ ಗಂಡಸರು ಹೆಂಗಸರ ವೇಷಧರಿಸಿ ಅವರ ಅಂತಃಪುರವನ್ನು ಪ್ರವೇಶಿಸಿದ್ದ ರೆಂದು ಕೇಳಿಕೆಯಿದೆ; ಆದರೆ, ಈಗಿನ ಈ ಹಜರತ್ ಅರೂಜಮುಂದವಾಣೂ ಬೇಗಮ ಸಾಹೇಬರ ಅಮಲಿನಲ್ಲಿ ಇಲ್ಲಿ ಆ ಹುಚ್ಚು-ಹುಳುಕುಗಳು ಹಿಂದಿಷ್ಟೂ ನಡೆಯಲಾರವು.''

''ಹಾಗಾದರೆ, ಆ ಬಗ್ಗೆ ನಾನು ಹಜರತ್ ಬೇಗಮ ಸಾಹೇಬರ ಅಪ್ಪಣೆಯನ್ನೇ ಪಡಕೊಂಡರೆ?''

''ಧಣಿಯರೇ, ನಿಮಗೆ ಸಾವಿರ ಸಲಾಮುಗಳು. ನೀವು ಹಾಗೆ ಅವಿಚಾರದಿಂದ ಹಜರತ್ ಬೇಗಮರ ಕಡೆಗೆ ಕೇಳಹೋದರೆ, ನಿಮ್ಮ ಗಂಡನ ದರ್ಶನವು ಇಹಜನ್ಮದಲ್ಲಿಯೇ ಏಕೆ, ಜನ್ಮಜನ್ಮಾಂತರಗಳಲ್ಲಿಯೂ ನಿಮಗೆ ಆಗಲರಿಯದು. ನಿಮ್ಮ ಗಂಡನು ಓಡಿಹೋಗಿರುವನೆಂಬ ಸುದ್ದಿಯು ಹಜರತ್ ಬೇಗಮರಿಗೆ ತಿಳಿಯಲು, ಅವರು ಅವನನ್ನು ಹಿಡಿತರುವ ಆಜ್ಞೆ ಮಾಡುವರು. ಆದರ್ರಿಂದ ಊರೊಳಗೆಲ್ಲ ಗಲ್ಲು ಏಳುವದು. ತನ್ನನ್ನು ಕೊತವಾಲನು ಹಿಡಿದೊಯ್ಯುವನೆಂಬ ಸಂಗತಿಯು ತಿಳಿಯುತ್ತಲೇ, ನಿಮ್ಮ ಆ ಗಂಡನು ಇಲ್ಲಿ ಈ ಮಹಾ ವಿಪತ್ತಿಗೀಡಾಗುವದಕ್ಕಾಗಿ ನಿಲ್ಲುತ್ತಾನೇತಕ್ಕೆ?

ದಾರಿ ಸಿಕ್ಕತ್ತ ಕಾಲಿಗೆ ಬುದ್ಧೀ ಕಲಿಸುತ್ತಾನೆ. ಅದರಿಂದ, ಧಣಿಯರೇ, ನೀವು ಒಮ್ಮೆಲೆ ಚಿಂತಾಕ್ರಾಂತರಾಗಿ ಹಾತೊರೆಯಬೇಡಿರಿ. ನಾನು ಮೊದಲು ನಿಮ್ಮ ಆ ಗಂಡನ ಪತ್ತೆಯನ್ನಂತೂ ಹಚ್ಚುವೆನು. ಬಳಿಕ ಮಾಡಬೇಕಾದ್ದನ್ನು ಹಿಂದಿನಿಂದ ಆಲೋಚಿಸೋಣವಂತೆ.

''ತಾರ್ತರೀ, ನಿನ್ನ ಅಂಬೋಣವೇ ವಿಹಿತವು. ನೀನು ಇನ್ನು ಬೇಗನೆ ನಿನ್ನ ಕೆಲಸಕ್ಕೆ ತೊಡಗು.''

''ಧಣಿಯರೇ, ನಿಮ್ಮ ನಾಲ್ಕು ಅಶರಫಿಗಳು ಯಾತಕ್ಕೂ ಸಾಲವು. ಇನ್ನಿಷ್ಟು ದ್ರವ್ಯವನ್ನು ಕೊಟ್ಟರೆ, ನಿಮ್ಮ ಕೆಲಸವನ್ನು ಬಹು ತೀವ್ರವಾಗಿ ಮಾಡಿಕೊಂಡು ಬರುತ್ತೇನೆ.''

''ತಾರ್ತರೀ, ನಿನಗಿನ್ನೆಷ್ಟು ಅಶರಫಿಗಳು ಬೇಕಾಗುವವು?''

''ಇನ್ನು ಹತ್ತೆಂಟನ್ನಾದರೂ ದಯಪಾಲಿಸಿರಿ.''

''ಕೆಟ್ಟ ಮುಸುಡಿಯ ಹೆಣ್ಣೇ, ನೀನು ಅಷ್ಟು ಹಣವನ್ನು ತಕ್ಕೊಂಡು ಮಾಡುವದೇನು?''

''ತಮ್ಮನ್ನು ನೆನೆಸುತ್ತ ನಾಲ್ಕು ದಿನಗಳವರೆಗೆ ಆ ನನ್ನ ಗೆಳೆಯನೊಡನೆ ಸುಖವಾಗಿ ಕಾಲಕಳೆಯುವೆನು; ಮತ್ತು ಬರುವಾಗ ಒಂದೆರಡನ್ನು ಅವನ ಖರ್ಚಿಗೆ ಕೊಟ್ಟು ಬರುವೆನು.''

''ಅಂತೂ ನಿನಗೆ ಹದಿನೈದು ಅಶರಫಿಗಳ ಅಗತ್ಯವಿದೆಯಲ್ಲವೆ? ಅಕೋ, ಅಲ್ಲಿಯ ದೌತಿ-ಲೆಕ್ಕಣಿಕೆಗಳನ್ನು ತಕ್ಕೋ.'' ಎಂದೆಂದು ಆ ತರುಣಿಯು ಎರಡು ಪತ್ರಗಳನ್ನು ಬರೆದು ಆ ದಾಸಿಯ ಕೈಗಿತ್ತು:—''ಹೋಗು ಒಂದು ವಾರದಲ್ಲಿ ನನ್ನ ಕೆಲಸವನ್ನು ತೀರಿಸಿಕೊಂಡು ಬಾ. ಇಲ್ಲದಿದ್ದರೆ ಸರಾಯಿಯ ನಿಶೆಯಲ್ಲಿ ಎಲ್ಲವನ್ನೂ ಮರೆತು ಬಿಟ್ಟೀ?''

''ಇಲ್ಲ. ಧಣಿಯರೇ, ಈ ಯಾಕೂತ ಕುಲದ ತಾರ್ತರೀ ಹೆಣ್ಣು ಹಾಗೆ ಬೇಇಮಾನಳೆಂದೂ ಆಗಲಿಕ್ಕಿಲ್ಲ. ಸರಾಯಿಯಿಂದ ಇವಳ ಕಾರ್ಯಬಾಹುಲ್ಯವು ಬೆಳೆದೀತೇ ವಿನಃ ಕುಗ್ಗಲಿಕ್ಕಿಲ್ಲ. ಸರಾಯಿಯ ನಿಶೆಯು ಕಡಿಮೆಯಾಯಿತೆಂದರೆ ಮಾತ್ರ ನನ್ನಿಂದ ಹಾಗು ಆ ನನ್ನ ಗೆಳೆಯನಾದ ಕಾಲ್ಮುಕ್ ಜಾತಿಯ ತಾರ್ತರನಿಂದ ಯಾವ ಕೆಲಸಗಳೂ ಆಗಲಿಕ್ಕಿಲ್ಲ ಧಣಿಯರೇ, ಇನ್ನು ಹೊರಡುವೆನು.'' ಎಂದೆಂದು ಆ ದಾಸಿಯು ಅಲ್ಲಿಂದ ಹೊರಟು ಹೋದಳು.

ಇಷ್ಟರಲ್ಲಿ ಒಬ್ಬ ಹದಿನಾಲ್ಕು ವರ್ಷದ ಕಿಶೋರಿಯು ಆ ತರುಣಿಯ ಬಳಿಗೆ ಬಂದು:—ಗುಲ್‌ರುಖ, ಬಹಳ ಹೊತ್ತಿನಿಂದ ಅವ್ವನು ನಿನ್ನನ್ನು ಹುಡುಕಹತ್ತಿದ್ದಾಳೆ, ಎಂದು ಅನ್ನಲು, ತರುಣಿಯು ಗಾಬರಿಗೊಂಡು ಅನ್ನುತ್ತಾಳೆ:—ಬನ್ನಿರಿ, ಬೇಗಮುಸಾಹೇಬರೇ, ಇತ್ತ ಬನ್ನಿರಿ; ಹಜರತ್ ಬೇಗಮುಸಾಹೇಬರು ಈಗ ಎಲ್ಲಿ ಇರುತ್ತಾರೆ?

ಕಿಶೋರಿಯು:—ಅವಳು ಜೋಧಬಾಯಿಯ ಮಹಲಿನಲ್ಲಿರುತ್ತಾಳೆ. ಕೂಡಲೆ ಆ ಯುವತಿಯು ಅತ್ತ ಕಡೆಗೆ ಧಾವಿಸುತ್ತ ನಡೆದಳು.

———

೧೨ನೇ ತರಂಗ.

—(0)—

## ದಿವಾಣ-ಈ-ಆಮ.

ಹಿಂದಿನ ತರಂಗದೊಳಗಿನ ಸಂಗತಿಯು ನಡೆದ ಎರಡು ಮೂರು ದಿನಗಳ ನಂತರ ಒಂದು ದಿವಸ ಬೆಳಗಿನ ೯ ಗಂಟೆಗೆ ಯಾಮಿನಉದ್ದೌಲಾ ನವಾಬ ಆಸಫಖಾನನು ತನ್ನ ಅಂಬಾರಿಯಲ್ಲಿ ಕುಳಿತು ದಿವಾಣ-ಈ-ಆಮ ದರ್ಬಾರಕ್ಕೆ ನಡೆದಿದ್ದನು. ಆಸಫಖಾನನು ನೂರಜಹಾನ ಬೇಗಮಳ ತಮ್ಮನು; ಅರಜಮಂದಬಾನೂ ಬೇಗಮಳ ತಂದೆಯು; ಶಹಾಜಹಾನ ಬಾದಶಹನ ಶ್ವಶುರನು. ಆದರಿಂದ ಅವನು ಮೊಗಲ ಬಾದಶಹನ ದರ್ಬಾರದಲ್ಲಿ ಒಬ್ಬ ಪ್ರಾಮುಖ್ಯ ವ್ಯಕ್ತಿಯಾಗಿದ್ದನು. ಇಂದು ಅವನ ಸ್ವಂತದ ಅಸಂಖ್ಯ ಕುದುರೆಯ ಸವಾರರ ಹಾಗು ಪದಾತಿಗಳ ದಂಡು ಅವನನ್ನು ಸುತ್ತುವರಿದು ದರ್ಬಾರದ ಕಡೆಗೆ ಸಾಗಿತ್ತು. ಅವನು ಕುಳಿತುಕೊಂಡಿದ್ದ ಆ ಆನೆಯ ಹಿಂಬದಿಯಲ್ಲಿ ಒಂದು ಅಚ್ಚ ಬಿಳೀ ಬಣ್ಣದ ಸಿಂಧುದೇಶದ ಬಹುಮೂಲ್ಯ ಕುದುರೆಯು ಬರುತ್ತಿದ್ದು, ಅದನ್ನು ಗೌರವರ್ಣದ ಅತ್ಯಂತ ತೇಜಸ್ವಿಯಾದ ಒಬ್ಬ ಯುವಕನು ಹತ್ತಿದ್ದನು. ಆನೆಯು ಮಂದಮಂದವಾಗಿ ನಡೆಯುತ್ತ ಆಗ್ರಾದೊಳಗಿನ ಸುಪ್ರಸಿದ್ಧ ಜುಮ್ಮಾಮಶೀದೆಯ ಎದುರಿಗೆ ಬಂದು ನಿಂತಿತು. ಕೂಡಲೆ ನವಾಬನು ಅಂಬಾರಿಯಿಂದ ಕೆಳಗಿಳಿದನು. ಆ ಮಶೀದೆಯ ಹತ್ತರವೇ ಆಗ್ರಾಕೋಟೆಯ ತಲೆಬಾಗಿಲು. ಆ ಬಾಗಿಲ ಬಳಿಯಲ್ಲೇ ಒಬ್ಬ ಐದುಸಾವಿರ ದಂಡಿನ ಮನಸಬದಾರನ

ಠಾಣ್ಯವಿತ್ತು. ಆ ಠಾಣ್ಯದ ಹತ್ತಿರ ಸ್ವತಃ ಬಾದಶಹನೂ ಅವನ ಪುತ್ರರೂ ಇವರ ಹೊರತು ಮಿಕ್ಕವರೆಲ್ಲರೂ ತಮ್ಮ ತಮ್ಮ ವಾಹನಗಳನ್ನು ತ್ಯಜಿಸಲೇಬೇಕೆಂದು ಕಟ್ಟಪ್ಪಣೆಯಿದ್ದಿತು.

ನವಾಬಆಸಫಖಾನನು ವಾಹನದಿಂದಿಳಿದು, ಆ ತರುಣನೊಡನೆ ತಲೆಬಾಗಿಲಿಗೆ ಬಂದನು. ಅಲ್ಲಿ ಪಹರೆಮಾಡುತ್ತಿದ್ದ ಮನಸಬದಾರನು ಬಾದಶಹನ ಮಾವನಾದ ಆಸಫಖಾನನನ್ನು ಅಭಿವಂದಿಸಿ, ಒಳಗೆ ಹೋಗಗೊಟ್ಟನು. ಆ ತಲೆಬಾಗಿಲದ ಮೇಲ್ಬದಿಯಲ್ಲಿ ನಗಾರಿ-ನೌಬತ್ತುಗಳು ಬಾರಿಸುತ್ತಿದ್ದವು ಯಾಕಂದರೆ ಆಗ ಬಾದಶಹನು ದರ್ಬಾರಕ್ಕೆ ಬಂದಿದ್ದನು. ಬಾದಶಹನು ಎಲ್ಲಿಯು ವರೆಗೆ ದರ್ಬಾರದಲ್ಲಿ ಕೂಡ್ರುತ್ತಿದ್ದನೋ ಅಲ್ಲಿಯು ವರೆಗೆ ಆಗ್ರಾಕೋಟೆಯು ದಿಲ್ಲಿ ಮತ್ತು ಅಮರಸಿಂಹ ದ್ವಾರಗಳ ಮೇಲಿನ ನಗಾರೆ-ನೌಬತ್ತುಗಳು ಒಂದೇಸವನೆ ಬಾರಿಸಲ್ಪಡುವ ಪದ್ಧತಿಯಿದ್ದಿತು.

ಆಸಫಖಾನನು ಆ ತರುಣನೊಡನೆ ದಿಲ್ಲೀದ್ವಾರವನ್ನು ಪ್ರವೇಶಿಸಿ, ಅದರ ಮುಂದಿನ ಮೊದಲನೇ ಚೌಕದೊಳಗಿನ ಬಜಾರವನ್ನು ಹೊಕ್ಕನು. ಆ ಚೌಕದಲ್ಲಿ ದಿನಾಲು ಬೆಳಿಗ್ಗೆ ಸಂತೆ ನೆರೆಯುತ್ತಿದ್ದಿತು; ಹಾಗು ಸಂಜೆಯು ವರೆಗೆ ಏಕೋಪ್ರಕಾರವಾಗಿ ಅಲ್ಲಿ ಕ್ರಯವಿಕ್ರಯಗಳು ನಡೆಯುತ್ತಿದ್ದವು. ಆ ಪೇಟೆಯಲ್ಲಿ ಬಹು ಮೂಲ್ಯಗಳಾದ ಮುತ್ತು-ರತ್ನಗಳೂ, ದೇಶ-ವಿದೇಶಗಳಿಂದ ಬಂದ ಅಪರೂಪದ ಪದಾರ್ಥಗಳೂ ಮಾರಾಟವಾಗುತ್ತಿದ್ದವು. ಅಮೀರ-ಉಮರಾವಾದಿಗಳ ಹೊರತು ಅನ್ಯರಾರೂ ಈ ಪೇಟೆಗೆಬರುತ್ತಿರಲಿಲ್ಲ ಆ ತರುಣನು ಆ ಬಜಾರದ ಶಿಸ್ತನ್ನುನೋಡಿ ದಂಗಾದನು. ಮೊದಲನೇ ಚೌಕವನ್ನು ದಾಟಿ ತರುಣನು ನವಾಬನೊಡನೆ ಎರಡನೇ ಚೌಕವನ್ನು ಹೊಕ್ಕನು. ಆ ಚೌಕದ ಮಧ್ಯದಲ್ಲಿ ಕೆಂಪುಬಣ್ಣದ ಕಲ್ಲುಗಳಿಂದ ನಿರ್ಮಿಸಲ್ಪಟ್ಟ ದಾರಿಯಿದ್ದಿತು. ಆ ದಾರಿಯ ಎಡಬಲಗಳಲ್ಲಿ ಮೊಗಲ, ಅಫಗಾಣ, ಇರಾಣೀ, ತಾರ್ತರೀ, ರಜಪೂತ ಮತ್ತು ಫಿರಂಗೀ ಸೇನೆಗಳು ಶ್ರೇಣಿಗೊಂಡು ಸಜ್ಜಾಗಿ ನಿಂತಿದ್ದವು. ಬಿಚ್ಚುಗತ್ತಿಯನ್ನು ಧರಿಸಿದ್ದ ಆಯಾ ದಂಡುಗಳ ಮುಖ್ಯಸ್ಥರಾದ ಮನಸಬದಾರರು ನಬಾಬನನ್ನು ಅಭಿವಂದಿಸಿ, ನಬಾಬನಿಗೂ ತರುಣನಿಗೂ ತಮ್ಮ ತಮ್ಮ ದಂಡಿನೊಳಗಿಂದ ದಾರಿಮಾಡಿಕೊಡುತ್ತಿದ್ದರು. ಅವರಲ್ಲಿಯು ಕೆಲಶ್ರೇಷ್ಠಅಧಿಕಾರಿಗಳುನಬಾಬನನ್ನುಅಭಿವಂದಿಸಿ, ಅವ

ನೊಡನೆ ಕುಶಲಪ್ರಶ್ನೆಗಳನ್ನೂ ಮಾಡುತ್ತಿದ್ದರು. ನಬಾಬನು ಎಲ್ಲರ ಪರಾಮರ್ಷವನ್ನು ಯಥಾಯೋಗ್ಯವಾಗಿ ತಕ್ಕೊಳ್ಳುತ್ತ ಎರಡನೇ ಚೌಕವನ್ನು ದಾಟಿ, ಮೂರನೇ ಚೌಕವನ್ನು ಪ್ರವೇಶಿಸಿದನು. ಆ ಚೌಕಿನ ಎದುರಿಗೆ ಅಂಬರ ಮತ್ತು ಜೋಧಪುರದ ರಜಪೂತಸೈನ್ಯಗಳು ಸಜ್ಜಾಗಿ ನಿಂತಿದ್ದವು. ಮಧ್ಯಾಹ್ನದ ನೌಬತ್ತು ಬಾರಿಸಹತ್ತಿದಕೂಡಲೆ ದಿವಾಣ-ಈ-ಆಮದ ಹಾಗು ಅಂತಃಪುರದ ಪಹರೆ ಮಾಡುವ ಭಾರವು ಈ ರಜಪೂತಸೇನೆಯ ಮೇಲಿದ್ದಿತು.

ಮೂರನೇ ಚೌಕದ ಬಲಗಡಿಗೆ ಬಿಳೀಸಂಗಮುರವರೀಕಲ್ಲಿನಿಂದ ನಿರ್ಮಿಸಲ್ಪಟ್ಟ ಮತಿಮಸೀದೆಯಿದ್ದಿತು. ಎಡಗಡೆಯಲ್ಲಿ ಕೆಂಪುಶಿಲೆಯಿಂದ ನಿರ್ಮಿಸಲ್ಪಟ್ಟ ಟಂಕಶಾಲೆಯಿದ್ದು ಅದರ ಎದುರಿಗೆ ಬಹು ಎತ್ತರವಾದ ನಗಾರಖಾನೆಯಿತ್ತು. ಅದರಲ್ಲಿ ಬಾದಶಾಹೀ ನಗಾರೆಯು ಬಾರಿಸುತ್ತಿತ್ತು. ನಗಾರಖಾನೆಯ ಬಾಗಿಲದ ಹೊಳಬದಿಗೆ ಆನೆಯ ಕಾಡು. ಅಂದು ಬಾದಶಹನ ಎದುರಿಗೆ ಏಕಸಮಯಾವಚ್ಛೇದದಿಂದ ಸಾವಿರ ಜನಗಳು ನಿಂತು ಸಲಾಮು ಮಾಡಬೇಕಾಗಿತ್ತು. ನಗಾರಖಾನೆಯ ಕೆಳಗಿನ ನೆಲಕ್ಕೂ ದಿವಾಣ-ಈ-ಅಮುದರ್ಬಾರಗೃಹದ ನೆಲಕ್ಕೂ ಹಾಲಿನಂತಹ ಶುಭ್ರವಾದ ಕಲ್ಲುಗಳು ಕೂಡಿಸಲ್ಪಟ್ಟದ್ದವು. ಅದರಿಂದ ದರಿದ್ರಜನರು ಅಲ್ಲಿ ಕಾಲಿಡಲಿಕ್ಕೆ ಸ್ವಭಾವತಃ ಅಂಜುತ್ತಿದ್ದರು! ನಗಾರಖಾನೆಯ ಎದುರಿಗೆ ಎಷ್ಟೋ ಜನ ಪರಿಚಾರಕಜನರಿದ್ದುಕೊಂಡು, ದರ್ಬಾರಿಗಳ ಪಾದರಕ್ಷೆಗಳನ್ನು ರಕ್ಷಿಸುತ್ತಿದ್ದರು. ಆ ನಗಾರಖಾನೆಯ ಮುಂದೆ ಸ್ವತಃ ಬಾದಶಹನು, ಅವನ ಮಕ್ಕಳು ಇವರ ಹೊರತು ಅನ್ಯರಿಗೆ ಪಾದುಕೆಗಳನ್ನು ಧರಿಸಿಕೊಂಡು ಹೋಗಲಿಕ್ಕೆ ಸಕ್ತಮನಾಯಿಯಿದ್ದಿತು. ಹತ್ತುಸಾವಿರ ದಂಡಿನ ಮುಖ್ಯಸ್ತನಾದ ಯಾಮಿೂನ ಉದ್ದೌಲಾ ಅಸಫಖಾನನು ಕೂಡ ಯಾವನೊಬ್ಬ ಸಾಮಾನ್ಯ ಉಮರಾವಿನಂತೆ ನಗಾರಖಾನೆಯ ಬಳಿಯಲ್ಲಿ ತನ್ನ ಪಾದರಕ್ಷೆಗಳನ್ನು ಬಚ್ಚಿಟ್ಟದ್ದನ್ನು ಕಂಡು, ಆ ತರುಣನಿಗೆ ಕಡು ವಿಸ್ಮಯವೆನಿಸಿತು.

ನಗಾರಖಾನೆಯ ಎದುರಿಗೆ ಖಾಸ ಚೌಕಿಯ ಮನಸಬದಾರನಾದ ನವಾಬಅಸಫಖಾನನ ಮಗ ಶಾಹಿಸ್ತೇಖಾನನು ನಿಂತುಕೊಂಡಿದ್ದನು. ಆಗ ಅವನು ತಂದೆಯನ್ನು ಅಭಿವಂದಿಸಲು, ತಂದೆಯು ಮಗನನ್ನು ಪ್ರತ್ಯಭಿವಂದಿಸಿ ಮುಂದೆ ನಡೆದನು. ಅದೇ ಕಾಲಕ್ಕೆ ಸಾಲು ಸಾಲಾಗಿ ನಿಂತಿದ್ದ ಸಾವಿ

ರಾರು ಆನೆಗಳು ತಮ್ಮ ಶುಂಡಿಲಗಳನ್ನು ಒಮ್ಮೆಲೆ ಮೇಲಕ್ಕೆ ಎತ್ತಿ ಬಾದ ಶಹನನ್ನು ಅಭಿವಂದಿಸಿದವು. ಆ ಅಪೂರ್ವ ದೃಶ್ಯವನ್ನು ಕಂಡ ಆ ತರುಣನು ಸ್ತಂಭಿತನಾದನು. ನಗಾರಖಾನೆಯ ಎದುರಿಗೆ ಕೆಂಪುಶಿಲೆಯನ್ನು ನೆಲಕ್ಕೆ ಹಾಕಿದ್ದ ಪ್ರಶಸ್ತವಾದ ಚೌಕು. ಆ ಚೌಕಿನ ನಾಲ್ಕೂ ಕಡೆಗೆ ವಿಸ್ತಾರಸಹಿತ ವಾದ ಚಂದ್ರಶಾಲೆಗಳು. ಪ್ರತಿಯೊಂದು ದಿಕ್ಕಿನ ಚಂದ್ರಶಾಲೆಯಲ್ಲಿ ಸಾವಿರ ಸಾವಿರ ಮೊಳಗಳ ಅಂತರದ ಮೇಲೆ ಒಂದೊಂದು ಕಚೇರಿಯು. ಆ ಕಚೇರಿಗಳು ದಂಡಿನ ಮುಖ್ಯಸ್ಥರಾದ ಮನಸಬದಾರರವಾಗಿದ್ದವು. ಬಾದಶಹನ ಬಳಿಯಲ್ಲಿ ಎಷ್ಟು ಜನ ಮನಸಬದಾರರಿರುತ್ತಿದ್ದರೋ ಅವರೆಲ್ಲರ ದಂಡು ಗಳು ಕೋಟೆಯ ಹೊರಬದಿಗೆ ಇರುತ್ತಿದ್ದವು; ಆದರೆ ಸ್ವತಃ ಆ ಎಲ್ಲ ಮನಸಬದಾರರು ಆ ಚಂದ್ರಶಾಲೆಗಳೊಳಗಿನ ತಮ್ಮ ಕಚೇರಿಗಳಲ್ಲಿ ಕುಳಿತು ಕಾದಿರಬೇಕಾಗುತ್ತಿತ್ತು. ಐದು ಸಾವಿರ ದಂಡಿನಗಿಂತ ಕಡಿಮೆ ದಂಡಿನ ಅಧಿಕಾರಿಗಳು ಆ ವೊಗಲ ದರ್ಬಾರದ ಕಾಲಕ್ಕೆ ಆಗ್ರಾ ಇಲ್ಲವೆ ದಿಲ್ಲೀ ದುರ್ಗಗಳ ಕಾವಲಿಗೆ ಅರ್ಹರಾಗುತ್ತಿದ್ದಿಲ್ಲ. ಅದರಿಂದ ಆರು, ಏಳು, ಎಂಟು ಸಾವಿರ ದಂಡಿನ ಮುಖ್ಯಸ್ಥರಿಗೆ ಮಾತ್ರ ಆ ಚಂದ್ರಶಾಲೆಗಳೊಳಗಿನ ಕಚೇರಿಗಳಲ್ಲಿ ಸ್ಥಳವು ದೊರಕುತ್ತಿತ್ತು.

ಸಾವಿರಗಟ್ಟಲೆ ಆನೆಗಳು ಏಕತ್ರವಾಗಿ ಬಾದಶಹನನ್ನು ಅಭಿವಂದಿಸಿದ ಬಳಿಕ ಅವೆಲ್ಲ ಅಮರಸಿಂಹಬಾಗಿಲಿನಿಂದ ಹೊರಬಿದ್ದವು. ಬಳಿಕ ನಗಾರಖಾನೆಯ ಬಾಗಿಲಿನಿಂದ ಸಾವಿರಗಟ್ಟಲೆ ಒಂಟೆಗಳು ಒಳಗೆ ಬರಹತ್ತಿದವು. ಅದೇ ಕಾಲಕ್ಕೆ ನಬಾಬನು ಆ ತರುಣನೊಡನೆ ಮುಂದರಿದನು. ಆ ಮೂರನೇ ಚೌಕದ ಮಧ್ಯಸ್ಥಳದಲ್ಲಿ ತಾಮ್ರದ ಕಟಾಂಜನಗಳು ನಿಲ್ಲಿಸಲ್ಪಟ್ಟದ್ದು, ಆ ಕಟಾಂಜನದ ಒಂದು ಕಡೆಗೆ ಕೆಂಪು ಶಿಲೆಯನ್ನು ನೆಲಕ್ಕೆ ಹಾಕಿದ್ದ ಭಾಗದಲ್ಲಿ ದಿವಾಣ-ಈ-ಅಮ ದರ್ಬಾರದ ಸ್ಥಳವೂ, ಅದರ ವಿರುದ್ಧದಿಕ್ಕಿನ ಕಡೆಗೆ ಪ್ರಮುಖ ನಾಗರಿಕರು ಬಂದುಕೂಡುವ ಸ್ಥಳವೂ ಇದ್ದವು. ಆ ತಾಮ್ರದ ಕಟಾಂಜನಕ್ಕೆ ಹೊಂದಿ ೫೦೦ ಮೊಳಗಳ ವಿಸ್ತಾರವಾದ ಬೈಲುಪ್ರದೇಶವು. ಅದರ ಆಚೆಗೆ ಒತ್ತಟ್ಟಗೆ ಕುದುರೆಯ ಸವಾರರಸೇನೆಯೂ ಮತ್ತೊತ್ತಟ್ಟಗೆ ಕಾಲಾಳುಗಳ ಸೇನೆಯೂ ಸಜ್ಜಾಗಿ ನಿಂತುಕೊಂಡಿದ್ದವು. ಖಾಸಚೌಕಿಯ ಮನಸಬದಾರನು ತನ್ನ ೫೦೦೦ ಕುದುರೆಯಸ್ವಾರರ ಹಾಗು ೫೦೦೦ ಕಾಲಾಳುಗಳ ದಂಡಿನೊಡನೆ ದಿಲ್ಲೀಶ್ವರನ ದರ್ಬಾರದಲ್ಲಿ ಪ್ರಕಾ

ಶ್ಯರೀತಿಯಿಂದ ಪ್ರತಿದಿನದ ಮೊದಲನೇ ಹಾಗು ಎರಡನೇ ಪ್ರಹರಗಳಲ್ಲಿ ಬಂದು, ಅಲ್ಲಿಯ ಶಾಂತಿಪ್ರಸ್ಥಾಪನೆಯ ಕೆಲಸವನ್ನು ಮಾಡುತ್ತಿದ್ದನು. ದುರ್ಗದ ಹೊರಬದಿಗೆ ೭೫ ಸಾವಿರ ಜನ ಅಶ್ವಾರೋಹಿಗಳೂ ಲಕ್ಷಸಂಖ್ಯಾಕ ಕಾಲಾಳುಗಳೂ ಪ್ರತಿನಿತ್ಯ ಸಜ್ಜಾಗಿರುತ್ತಿದ್ದವು. ಆ ತಾಮ್ರದ ಕಟಾಂಜನದ ಆಚೇ ಬದಿಗೆ ಬಾದಶಹನ ಅಂಗರಕ್ಷಕ ಸೇನೆಯಲ್ಲಿ ಸಾವಿರಜನ ಶುಭ್ರವಸ್ತ್ರಾನ್ವೇಷ್ಟಿತ ಸವಾರರು ಸಾಲುಗೊಂಡು ನಿಂತಿದ್ದರು. ದಿವಾಣ-ಈ-ಆಮ ದರ್ಬಾರದ ಎದುರಿಗೆ ಪ್ರಶಸ್ತವಾದ ದಾರಿಯಿದ್ದು, ಅದರ ಉಭಯ ಪಾರ್ಶ್ವಗಳಲ್ಲಿ ಅನುಚ್ಚ ದರ್ಜೆಯ ಉಮರಾವ-ಮನಸಬದಾರರು ನಿಂತುಕೊಂಡಿದ್ದರು.

ಸೇನೆಯ ಮುಖ್ಯಸ್ಥನು ಆಸಫಖಾನನ್ನು ಅಭಿವಂದಿಸಿ ಆ ಯುವಕನ ಪರಿಚಯವನ್ನು ಕೇಳಿದನು. ನಬಾಬನು ಅವನಿಗೆ ಏನೇನೋ ಹೇಳಲು, ಅವನು ಮತ್ತೆ ನಬಾಬನನ್ನು ಅಭಿವಂದಿಸಿ ಅವನನ್ನು ಮುಂದೆ ಹೋಗಗೊಟ್ಟನು. ದಿವಾಣ-ಈ-ಆಮದ ಎದುರಿಗೆ ಮೂರು ಮೆಟ್ಟಲುಗಳಿದ್ದವು. ಆ ಮೆಟ್ಟಲುಗಳ ಕೆಳಗೆ ನಿಂತುಕೊಂಡು ನಬಾಬನು ಮೂರು ಮೂರು ಸಾರೆ ನೆಲಕ್ಕೆ ಮುಟ್ಟಿ ಬಾದಶಹನನ್ನು ಅಭಿವಂದಿಸಿದನು. ಮೆಟ್ಟಲುಗಳ ಮೇಲ್ಬದಿಯಲ್ಲಿ ಛತ್ರವಿಹೀನವಾದ ಅನೇಕ ಆಸನಗಳು ಮಂಡಿಸಲ್ಪಟ್ಟಿದ್ದು, ಅವುಗಳ ಮೇಲೆ ಬೇರೆ ಬೇರೆ ಪರಗಣೆಯ ಸುಭೇದಾರರೂ, ಜಮೀನದಾರರೂ ಮತ್ತು ಸಾಮಾನ್ಯರಾದ ರಾಜವಂಶೀಯರೂ ಕುಳಿತುಕೊಂಡಿದ್ದರು. ಅವರೆನ್ನೆಲ್ಲ ಸುತ್ತುವರಿದು ಆ ಸಾವಿರ ಕುದುರೆಯ ಸವಾರರು ಪಹರೆಮಾಡುತ್ತಿದ್ದರು. ಆ ಸೇನೆಯ ನಾಯಕನೊಡನೆ ಮಾತನಾಡಿ ನಬಾಬ ಆಸಫಖಾನನು ದಿವಾಣ-ಈ-ಆಮದ ಹತ್ತಿರ ಹೋದನು. ಅಲ್ಲಿ ಅವನು ಪುನಃ ಮೂರು ಮೂರು ಸಾರೆ ನೆಲಕ್ಕೆ ಮುಟ್ಟಿ ಸಲಾಮುಮಾಡಿ, ಆ ದರ್ಬಾರವನ್ನು ಪ್ರವೇಶಿಸಿದನು. ದಿವಾಣ-ಈ ಆಮ ದರ್ಬಾರದ ಗೃಹದಲ್ಲಿ ಮೂರು ತರಗತಿಯ ಸ್ಥಳಗಳು ಏರ್ಪಡಿಸಲ್ಪಟ್ಟಿದ್ದವು. ಮೊದಲನೇ ತರಗತಿಯಲ್ಲಿ ಹತ್ತು ಸಾವಿರ ದಂಡಿನ ಮನಸಬದಾರರಿಗೆ ಹಾಗು ಸುಭೇದಾರರಿಗೆ ಪ್ರವೇಶವಿತ್ತು. ಈ ಸ್ಥಳವು ಬೆಳ್ಳಿಯ ಕಟಾಂಜನದಿಂದ ಸುತ್ತುವರೆದಿದ್ದಿತು. ಎರಡನೇ ತರಗತಿಯಲ್ಲಿ ಮುಖ್ಯ ಮುಖ್ಯರಾದ ಹಿಂದೂರಾಜರು, ವಜೀರ, ಬಕ್ಷಿ, ಖಾಸಗೀಕಾರಭಾರಿ, ನಗರ ರಕ್ಷಕರ ಮುಖ್ಯಸ್ಥ, ಮುಖ್ಯ ಕಾಜಿ ಮತ್ತು ಪ್ರತಿ

ಯೊಂದು ಖಾತೆಯ ಮುಖ್ಯಸ್ತರು ಇವರಿಗೆ ಪ್ರವೇಶವಿತ್ತು. ಈ ಸ್ಥಳಕ್ಕೆ ಬಂಗಾರದ ಕಟಾಂಜನಗಳು ಹಚ್ಚಲ್ಪಟ್ಟಿದ್ದವು. ಮೂರನೇ ತರಗತಿಯ ಸ್ಥಳದಲ್ಲಿ ಬಾದಶಹನ ಪುತ್ರರೂ, ಅಳಿಯಂದಿರೂ, ಆತ್ಮೀಯರೂ ಕೂಡುತ್ತಿದ್ದರು.

ಯುವಕನನ್ನು ದಿವಾಣ-ಈ-ಅಮುದ ಹೊರಗೆ ಬಿಟ್ಟು ನಬಾಬಅಸಫ ಖಾನನು ಒಳಗೆ ಬಂದಿದ್ದನು. ಅವನು ಒಳಗೆ ಬರುತ್ತಲೇ ಚೋಪದಾರನು ಬಂದವರಾರೆಂದು ಗಟ್ಟಿದನಿಯಿಂದ ಕೇಳಿದನು. ಕೂಡಲೆ ಸಮೀಪದ ದರಕದಾರನು ಯಾಮೀನಉದ್ದೌಲಾ ನಬಾಬ ಅಸಫಖಾನನ ಬಿರುದಾವಳಿಗಳಿಂದ ಅವನನ್ನು ಹೊಗಳಿದನು. ಇಷ್ಟರಲ್ಲಿ ಆಸಫಖಾನನು ಬಂಗಾರದ ಕಟಾಂಜನದ ಬಳಿಗೆ ಹೋಗಿ ಬಾದಶಹನಿಗೆ ಮೂರು ಮೂರು ಸಾರೆ ಕುರ್ನಿಸಾತ್‌ಮಾಡಿ ಅಭಿವಂದಿಸಿದನು. ಬಾದಶಹನು ಸಿಂಹಾಸನದ ಮೇಲೆ ಕುಳಿತೇ ನಬಾಬನನ್ನುಪ್ರತ್ಯಭಿವಂದಿಸಿದನು. ಬಳಿಕನಬಾಬನಸಿಂಹಾಸನದ ಕೆಳಬದಿಗೆ ಹೋಗಿ ನಿಂತುಕೊಂಡನು.

ಇಷ್ಟರಲ್ಲಿ ಸಾವಿರಾರು ಒಂಟೆಗಳು ಸಾವಿರಾರು ಕುದುರೆಗಳು ಬಂದು ಬಾದಶಹನನ್ನು ಅಭಿವಂದಿಸಿ ಹೋಗಿದ್ದವು. ಈಗ ಖಾಸ ಚೌಕಿಯ ಮನಸಬದಾರನ ಸೇನೆಯು ಬಂದು ಬಾದಶಹನಿಗೆ ಮುಜುರೆಮಾಡಿ ಹೊರಟುಹೋಯಿತು. ದುರ್ಗದ ಹೊರಗಿನ ಸೈನ್ಯವೂ ತಂಡತಂಡಾಗಿ ಬಂದು ಬಾದಶಹನಿಗೆ ಮುಜುರೆಮಾಡಿ ಹೋಗುತ್ತಿತ್ತು. ಅದೆಲ್ಲ (ಲಕ್ಷಗಟ್ಟಲೆ) ಸೈನ್ಯವು ಅಲ್ಲಿಗೆ ಬಂದು ಮುಜುರೆಮಾಡಿ ಹೋಗಲಿಕ್ಕೆ ಏನಿಲ್ಲೆಂದರೂ ಒಂದೆರಡು ಗಂಟೆಗಳ ಅವಕಾಶವುಸಹಜವಾಗಿ ಬೇಕಾಗುತ್ತಿತು. ತದನಂತರ ಬಾದಶಹನು ಅರ್ಜೀದಾರರ ಅರ್ಜಿಗಳನ್ನು ನೋಡಲಾರಂಭಿಸಿದನು. ಸಮುಸ್ತ ಸೈನ್ಯದ ಅಭಿವಾದನವು ಮುಗಿಯಲು, ನಗಾರಖಾನೆಯೊಳಗಿನ ನಗಾರಿ-ನೌಬತ್ತುಗಳ ವಾದನವು ಕಟ್ಟಾಯಿತು. ಆ ಸಪ್ಪಳವು ನಿಂತಕೂಡಲೆ ನಬಾಬ ಅಸಫಖಾನನು ಬಾದಶಹನಿಗೆ ಏನೆನೋ ಅಸ್ಪುಟವಾಗಿ ತಿಳಿಸಿದನು. ಬಾದಶಹನೂ ಆತನ ಮಾತಿಗೆ ಸಮ್ಮತಿಸಿದನು. ಕೂಡಲೆ ಒಬ್ಬ ಚೋಪದಾರನು ದಿವಾಣ-ಈ-ಅಮುದ ಹೊರಗೆ ನಿಂತಿದ್ದ ಆ ಯುವಕನನ್ನು ಕರೆತಂದು ಬೆಳ್ಳಿಯ ಕಟಾಂಜನದ ಬಳಿಗೆ ನಿಲ್ಲಿಸಿದನು. ಯುವಕನು ನಬಾಬನಂತೆ ಬಾದಶಹನಿಗೆ ಮೂರು ಮೂರು ಸಾರೆ ಕುರ್ನಿಸಾತ್‌ಮಾಡಿದನು.

ಆಗ ಬಾದಶಹನು:—“ಈ ತರುಣನಾರು?” ಎಂದು ಅಸಫಖಾನನ ಕಡೆಗೆ ಹೊರಳಿ ಪ್ರಶ್ನೆಮಾಡಲು, “ಇವನ ಹೆಸರು ಮಯೂಖನೆಂದು. ಈತನ ತಂದೆಯಾದ ದೇವೇಂದ್ರನಾರಾಯಣನು ಪಶ್ಚಿಮ ಬಂಗಾಲದೊಳಗಿನ ಒಬ್ಬ ಜಮೀನದಾರನಾಗಿದ್ದನು. ಜಿನ್ನತ್ ಮಕಾನೀ ನೂರಉದ್ದೀನ ಜಹಾಂಗೀರ ಬಾದಶಹರ ಕಾಲಕ್ಕೆ ಈತನ ತಂದೆಯು ಬಾದಶಹರ ಚಾಕರಿಯನ್ನು ಬಹು ಚೆನ್ನಾಗಿ ಮಾಡಿರುತ್ತಾನೆ,”ಎಂದು ನಬಾಬನು ತಿಳಿಸಿದನು.

ಅದನ್ನು ಕೇಳಿ, ಬಾದಶಹನು ನಗೆಮುಖದಿಂದ:—“ದೇವೇಂದ್ರನಾರಾಯಣನನ್ನು ಚೆನ್ನಾಗಿ ಬಲ್ಲೆನು. ನಾನು ಯಾವಾಗ ಬಂಡುಗಾರನಾಗಿದ್ದೆನೋ ಆಗ ಓಡಿಸಾ ಹಾಗು ಅಕಬರಾಬಾದಗಳಲ್ಲಿ ಅವನು ನನ್ನೊಡನೆ ಕಾದಿರುತ್ತಾನೆ; ಎನ್ನಲು,

“ಶಹಾನಶಹಾ ಬಾದಶಹರ ಅಪ್ಪಣೆಯ ಮೇರೆಗೆ ದೇವೇಂದ್ರನಾರಾಯಣನು ಶಹಾಜಾದಾ ಖುರ್ರಮರ ವಿರುದ್ಧವಾಗಿ ಅಸ್ತ್ರವನ್ನೆತ್ತಿರಬಹುದು; ಆದರೆ, ಶಹಾರ-ಉದ್ದೀನ ಮಹಮ್ಮದ ಶಹಾಜಹಾನ ಲಾಜಿ ಸಾಹೀಬ ಕಿರಾಣಮಾನಿಯವರು ಆತನ ಆ ಅಪರಾಧಗಳನ್ನು ಮನಸ್ಸಿನಲ್ಲಿ ಹಿಡಿಯಲಾರರೆಂದು ಭರವಸೆ ಪಡುವೆನು.” ಎಂದು ನಭಾಬ ಅಸದಖಾನನು ನುಡಿದನು.

ಇದೇ ಕಾಲಕ್ಕೆ ಬಾದಶಹನೆದುರಿಗಿನ ಬೆಳ್ಳಿಯ ಕಟಾಂಜನದ ಬಳಿಗೆ ಇಫ್ತೀಕಾರ ಉಲ್ಮುಲುಕ ಅಸದಖಾನನೂ, ಬಂಗಾರದಕಟಾಂಜನದ ಬಳಿಗೆ ಮನಿರುದ್ದೌಲಾ ಶಹಾನಓಯಾಜಖಾನನೂ ಬಂದು ಬಾದಶಹನನ್ನು ಏಕಸಮಯಾವಚ್ಛೇದದಿಂದ ಅಭಿವಂದಿಸಿದರು. ದಿವಾಣ-ಈ-ಆಮದ ಪದ್ಧತಿಯ ಮೇರೆಗೆ ಅಲ್ಲಿಯ ದರಕದಾರನು ಗೊಗ್ಗರದನಿಯಿಂದ:-“ರೌಶನ್ ಉಲ್ಮುಲುಕ ಮನಿರುದ್ದೌಲಾ ಶಾಹನಓಯಾಜಖಾ ಹಯವತ್‌ಜಂಗೆ ಹಜರತ್‌ಜಲಾಲೀ” ಎಂದು ಕೂಗಿದನು. ಕೂಡಲೆ ಬಾದಶಹನು ಶಹಾನಓಯಾಜಖಾನನ ಕಡೆಗೆ ಹೊರಳಿ ನೋಡಿದನು. ಆಗ ಆ ಮುದುಕನು ಬಾದಶಹನನ್ನು ಅಭಿವಂದಿಸಿ:—ಶಹಾನಶಹಾ, ಫಿರಂಗಿಕಾಫರರು ಯಾವಾಗ ಬಾದಶಾಹೀ ಬಂದರವಾದ ಸಪ್ತಗ್ರಾಮವನ್ನು ಮುತ್ತಿದ್ದರೋ, ಆಗ ಈ ತರುಣನೇ ಅದನ್ನು ಅವರಿಂದ ಸಂರಕ್ಷಿಸಿದವನು” ಎಂದು ಹೇಳಿದನು. ಅದನ್ನು ಕೇಳಿ ಬಾದಶಹನು ಸಮೀಪದಲ್ಲಿಯೇ ನಿಂತುಕೊಂಡಿದ್ದ

ಅಸದಖಾನನ ಕಡೆಗೆ ನೋಡಿದನು. ಆಗ ದರಕದಾರನು ಮತ್ತೆ:— "ಇಫ್ತೀಕಾರ ಉಲ್ಮುಲುಕ ಸೈಫಉದೌಲಾ ಅಮೀರಉಲ್ಬಹರ ಆಸದಖಾ ಶಮಸೇರ ಜಹಾಂಗಿರಿ" ಎಂದು ಕೂಗಿಕೊಳ್ಳಲು, ಅಸದಖಾನನು ಬಾದ ಶಹನನ್ನು ಅಭಿವಂದಿಸಿ:—ಜಹಾಂಪನಾ, ಸುಭೇದಾರ ಮೊಕರಮಖಾನರ ಕಾಲಕಿರ್ದಿಯಲ್ಲಿ ಸಪ್ತಗ್ರಾಮದಲ್ಲಿ ಫಿರಂಗಿಗಳೊಡನೆ ಯಾವ ಯುದ್ಧವು ಆಯಿತೋ, ಆ ಯುದ್ಧದ ಸಂಗತಿಯನ್ನೆಲ್ಲ ಶಹಾನಶಹಾರವರಿಗೆ ಈ ದಾಸನು ಈ ಮೊದಲೇ ತಿಳಿಸಿರುತ್ತಾನೆ. ಫಿರಂಗಿಗಳ ಗುಂಡುಗಳ ಅಂಜಿ ಕೆಯಿಂದ ಅಲ್ಲಿಯ ಫೌಜದಾರನಾಗಿದ್ದ ಕಲಿಮುಲ್ಲಾಖಾನನು ಸ್ವಸೈನಿಕ ರೊಡನೆ ಓಡಹೋಗಲು, ಅಂದು ಈ ತರುಣನೊಬ್ಬನೇ ಆ ಸಪ್ತಗ್ರಾಮದ ವಣಿಕನಾದ ಗೋಕುಲವಿಹಾರಿಯ ಸೈನ್ಯದೊಡನೆ ಬಾದಶಾಹೀ ಬಂದರ ವನ್ನು ಸಂರಕ್ಷಿಸಿರುತ್ತಾನೆ, ಎಂದು ಹೇಳಿದನು.

ಆಗ ಬಾದಶಹನು ಹಿಗ್ಗಿ ದರ್ಪದಿಂದ ಕೇಳುತ್ತಾನೆ:—ಸುರತದ ಫಿರಂಗಿಗಳ ದೂತನು ಬಂದಿರುವನೇನು?

"ಜನಾಬ ಆಲಿ; ಇಂಗ್ಲಿಷ ಫಿರಂಗಿಗಳ ದೂತನು ನಗಾರಖಾನೆಯ ಬಳಿಯಲ್ಲಿ ಕಾದಿರುತ್ತಾನೆ. ಶಹಾನಶಹಾರ ಅಪ್ಪಣೆಯಾದರೆ ಆತನನ್ನು ದಿವಾಣ-ಈ-ಆಮಕ್ಕೆ ಕರೆತಂದು ಹಾಜರಪಡಿಸುತ್ತೇನೆ" ಎಂದು ವಜೀ ರನು ಹೇಳಿದನು.

"ನವಾಬ ಶಹಾನ ಓಯಾಜಖಾ, ಆಸದಖಾ ಮತ್ತು ಆ ಇಂಗ್ಲೀಷ ಫಿರಂಗಿಗಳ ದೂತ ಇವರೆಲ್ಲರೂ ನಮ್ಮ ಗುಪ್ತ ಮಂತ್ರಾಗಾರಕ್ಕೆ ಬರಲಿ. ನವಾಬರ ಕೂಡ ಬಂದಿದ್ದ ಆ ಕಾಫರ ಫಕೀರನೂ ಬೈರಾಗಿಯೂ ಇಷ್ಟರಲ್ಲಿ ಮರಳಿ ಹೋದರೇನು?"

"ಬಾದಶಹರ ಅಪ್ಪಣೆಯಮೇರೆಗೆ ಅವರು ಮಥುರೆಯಲ್ಲಿ ಇರುತ್ತಾರೆ."

"ಅವರನ್ನೂ ಕರೆಸಿರಿ ಆಸದಖಾ, ನವಾಬಸಾಹೇಬ, ಯಾಮೀನ ಉದೌಲಾ ಮತ್ತು ದೇವೇಂದ್ರನಾರಾಯಣನ ಮಗ ಇವರೆಲ್ಲರೂ ದಿವಾಣ-ಈ-ಖಾಸಕ್ಕೆ ಹಾಜರಾಗತಕ್ಕದ್ದು."

ಎಂದೆಂದು ಬಾದಶಹನು ಸಿಂಹಾಸನದಿಂದ ಇಳಿದನು. ಕೂಡಲೆ ನಗಾರೆ-ನೌಬತ್ತುಗಳು ಮೊಳಗಹತ್ತಿದವು. ಎಲ್ಲರೂ ದರ್ಬಾರದಿಂದ ಎದ್ದರು. ಆಗ ಅಂದಿನ ದರ್ಬಾರವು ಬರಖಾಸ್ತ ಆಯಿತ್ತು.

೧೩ನೇ ತರಂಗ

# ಮಥುರೆಯ ಪುರೋಹಿತ.



ಅಂದೇ ಮಧ್ಯಾಹ್ನ ಮೂರು ಗಂಟೆಯ ಸಮಯಕ್ಕೆ ಬೆವರಿನಿಂದ ತೊಯ್ದು ತಪ್ಪಡೆಯಾಗಿದ್ದ ಮಯೂಖನು ಆಗ್ರಾಪಟ್ಟಣದೊಳಗಿನ ಶಿಕಂದರಪುರ ಮೊಹಲೆಯ ಒಂದು ಚಿಕ್ಕ ಮನೆಯ ಬಾಗಿಲವನ್ನು ಬಡಿಯುತ್ತಿದ್ದನು. ಮನೆಯೊಳಗಿಂದ :—"ಯಾರವರು?" ಎಂದು ಒಬ್ಬ ಅಬಲೆಯು ಕೇಳಿದಳು. "ನಾನು, ಬಾಗಿಲ ತೆರೆ" ಎಂದು ಮಯೂಖನು ಅಂದನು.

ಕೂಡಲೆ "ನೀನು ಅಂದರೆ ಯಾರು?" ಎಂದು ಮತ್ತೆ ಆ ಅಬಲೆಯು ಒಳಗಿನಿಂದಲೇ ಪ್ರಶ್ನಮಾಡಲು; "ನಾನು ಮಯೂಖನು ಬಂದಿರುತ್ತೇನೆ. ಬೇಗನೆ ಬಾಗಿಲ ತೆರೆ" ಎಂದು ಕೂಗಿಕೊಳ್ಳಲು, ಆ ಬಾಗಿಲವು ಒಮ್ಮೆಲೆ ತೆರೆಯಿತು. ಮಯೂಖನು ಒಳಗೆ ಹೊಕ್ಕನು. ವಿನೋದಿನಿಯು ಬಾಗಿಲದ ಮರೆಗೆ ನಿಂತುಕೊಂಡಿದ್ದಳು. ಆವಳು ಕೂಡಲೆ:—"ತಮ್ಮಾ, ಏನಾಯಿತು?" ಎಂದು ಕೇಳಿದಳು.

"ಅವ್ವಾ, ನಾನು ದಿವಾಣ-ಈ-ಆಮಕ್ಕೆ ಹೋಗಿದ್ದೆನು; ಆದರೆ ಬಾದಶಹನು ದಿವಾಣ-ಈ-ಖಾಸ ದರ್ಬಾರಿಗೆ ಬರಲಿಕ್ಕೆ ಹುಕುಮು ಮಾಡಿರುತ್ತಾನೆ. ಅದಕ್ಕೋಸ್ಕರ ನಾನು ಇಂದು ಸಂಜೆಗೆ ಪುನಃ ಅಲ್ಲಿಗೆಹೋಗುತ್ತೇನೆ"

"ತಮ್ಮಾ, ನಾನು ಇಂದು ದೇವರಿಗೆ ಮುಡುಪು ಕಟ್ಟಿಟ್ಟಿರುತ್ತೇನೆ. ಇಂದು ಮಧ್ಯಾಹ್ನ ಹಜರತ್ ಬೇಗಮರ ದಾಸಿಯು ಬಂದಿದ್ದಳು. ಇಂದು ಸಂಜೆಯೊಳಗೆ ವೃಂದಾವನದಿಂದ ಬಂಗಾಲೀ ಪುರೋಹಿತರನ್ನು ಕರೆಸುವರಂತೆ. ನಾಳೆಯೇ ನಾಂದಿಸ್ಥಾಪನೆ; ನಾಡದ್ದೇ ನಿನ್ನ ಲಗ್ನ."

ಲಲಿತೆಯು ಒತ್ತಟ್ಟಗೆ ಮರೆಗೆ ನಿಂತುಕೊಂಡು ಮಯೂಖನದರ್ಬಾರದೊಳಗಿನ ಸಂಗತಿಗಳನ್ನು ಕೇಳುತ್ತಿದ್ದಳು. ತನ್ನ ಲಗ್ನದ ವಿಷಯವು ಹೊರಟೊಡನೆಯೇ ಅವಳು ಅಲ್ಲಿಂದ ಕಾಲ್ದೆಗೆದು ಒಳಗೆ ಹೊರಟು ಹೋದಳು. ಬಳಿಕ ಮಯೂಖನು ಕೈಕಾಲುಮೋರೆಗಳನ್ನು ತೊಳೆದುಕೊಂಡು ಬಂದು ಬೈಠಕಿನ ಮೇಲೆ ಕುಳಿತು ಏನನ್ನೋ ಯೋಚಿಸತೊಡಗಿದನು. ಆಗ ವಿನೋದಿನಿಯು ಅವನನ್ನು ಕುರಿತು:—"ತಮ್ಮಾ, ಹೀಗೇಕೆ

ಚಿಂತಾಕ್ರಾಂತನಾಗಿರುತ್ತೀ?'' ಎಂದು ಕೇಳಲು, ''ಅವ್ವಾ, ನನ್ನ ಅದೃಷ್ಟ ಚಕ್ರವು ಇಂದು ತಿರುಗಿದಂತೆ ತೋರುತ್ತದೆ. ಯಾವ ಅಸದಖಾನರ ಬಗ್ಗೆ ನಾನು ಇದ್ದುವರೆಗೆ ಯೋಚಿಸುತ್ತಿದ್ದೆನೋ, ಇಂದು ಅವರು ದಿವಾಣ-ಈ-ಆಮದಲ್ಲಿ ಬಂದದ್ದನ್ನು ಆಕಸ್ಮಿಕವಾಗಿ ಕಂಡೆನು.'' ಎಂದು ಮಯೂಖನು ಹೇಳಿದನು.

ನಾಳೆಗೆ ಡೆಪ್ಯೂಟಿ ಅಮಲ್‌ದಾರ ಹರೆಕೃಷ್ಣರಾಯನೂ ಬರುತ್ತಾನೆ.

ಹೀಗೆ ಅವರಲ್ಲಿ ಸಂಭಾಷಣವು ನಡೆದಿರಲಿಕ್ಕೆ, ಮಯೂಖನು ತನ್ನ ಮನೆಯನ್ನು ಪ್ರವೇಶಿಸಿದಾಗಿನಿಂದ ಒಬ್ಬ ದೀರ್ಘಕಾಯದ ಕಾಲ್ಮುಕ್ ತಾರ್ತರನೂ, ಘೋಷೆಯನ್ನು ಧರಿಸಿದಂತಹ ಒಬ್ಬ ಯವನಿಯೂ ಅವರ ಮನೆಯ ಹತ್ತರ ಸುಳಿದಾಡತೊಡಗಿದ್ದರು. ಆ ತಾರ್ತರನು ದೂರದೂರ ದಲ್ಲಿಯೇ ಆಡ್ಡಾಡುತ್ತಿದ್ದನು; ಆದರೆ ಆ ಹೆಂಗಸು ಮಾತ್ರ ಇವರ ಬಾಗಿಲ ಬಳಿಗೆ ಬಂದು ಏನನ್ನೋ ಕಿವಿಗೊಟ್ಟು ಕೇಳುವ ಪ್ರಯತ್ನಮಾಡುತ್ತಿದ್ದಳು.

ಕೆಲಕ್ಷಣಗಳ ನಂತರ ಆ ಕಾಲ್ಮುಕ್ ತಾರ್ತರನು ಆ ಘೋಷಾದ ವಳ ಹತ್ತರ ಬಂದು, ''ಏನಾದರೂ ಗೊತ್ತಾಯಿತೆ?'' ಎಂದು ತಮ್ಮ ತಾರ್ತರೀ ಭಾಷೆಯಲ್ಲಿ ಪ್ರಶ್ನೆಮಾಡಿದನು.

ಇಲ್ಲ. ಇವರು ತಮ್ಮ ಬಂಗಾಲೀ ಭಾಷೆಯಲ್ಲಿ ಮಾತಾಡುತ್ತಿರುವ ರಾದ್ದರಿಂದ ಏನೂ ಗೊತ್ತಾಗುವದಿಲ್ಲ.

''ಅದಿರಲಿ, ಆ ತರುಣ ಗಂಡಸಿನ ಹೆಸರಾದರೂ ಏನು?''

''ಅದನ್ನೇ ಕೇಳಿಕೊಳ್ಳುತ್ತಿರುವೆನು.'' ಎಂದು ಹೇಳಿ, ಎಲೋ, ಸರಾಯಿಯ ಆ ಶೀಸೆಯನ್ನು ತಾ. ಒಂದಿಷ್ಟು ನಿಶೆ ಮಾಡಿಕೊಳ್ಳುತ್ತೇನೆ.

''ಎಲೇ, ನೀನು ಇನ್ನು ಹೆಚ್ಚು ಸೆರೆ ಕುಡಿದರೆ, ಇಲ್ಲೇ ಈ ಚರಂಡಿ ಯಲ್ಲೇ ಬಿದ್ದುಬಿಡುವೆ, ಬಳಿಕ ಕೊತವಾಲನು ನಿನ್ನನ್ನು ಹಿಡಿದೊಯ್ದು ಪಂಚನಾಮೆ ಮಾಡಹತ್ತಿದನೆಂದರೆ, ನಿನ್ನ ಹೂರಣವೆಲ್ಲ ಹೊರಬಿದ್ದು ಹೋದೀತು.''

ಆಗ್ರಾಪಟ್ಟಣದೊಳಗಿನ ಆ ರಾಜಪಥದಲ್ಲಿ ಜನಸಂದಣಿಯು ಹೆಚ್ಚಾಗಿತ್ತು. ಓಣಿಯೊಳಗಿನ ಒಂದು ಬಾಗಿಲದೆದುರಿಗೆ ಆ ತಾರ್ತರನು ಖಡ್ಗ ಪಾಣಿಯಾಗಿ ನಿಂತುದನ್ನು ಕಂಡು ಓಡಾಡುವರಲ್ಲಿಯ ಕೆಲವರು ವಿಸ್ಮಯ ಗೊಳ್ಳುತ್ತಿದ್ದರು; ಆದರೆ ಅವನೊಡನೆ ಇದ್ದ ಆ ಘೋಷಾದ ಹೆಂಗಸನ್ನು

ಕಂಡು, ಅವರಿಗೆ ಅಷ್ಟೊಂದು ಭಯುವೆನಿಸುತ್ತಿದ್ದಿಲ್ಲ.

ಇತ್ತ ಮನೆಯೊಳಗಿದ್ದ ವಿನೋದಿನಿಯು ಮತ್ತೆ:—ಮಯೂಖ, ನೀನು ದಿವಾಣ-ಈ-ಖಾಸ ದರ್ಬಾರಿಗೆ ಯಾವಾಗ ಹೋಗಬೇಕು? ಎಂದು ಕೇಳಲು, "ಇಂದೇ, ಸಂಜೆಯ ಮುಂದೆ" ಎಂದು ಅವನು ಉತ್ತರಕೊಟ್ಟನು.

ತಲೆಬಾಗಿಲದ ಹೊರಬದಿಗೆ ನಿಂತು ಆಲಿಸಿ ಕೇಳುತ್ತಿದ್ದ ಆ ಯುವ ನಿಯು ಕೂಡಲೆ ತನ್ನ ಗೆಳೆಯನ ಬಳಿಗೆ ಹೋಗಿ:—ಗೆಳೆಯಾ-ಗೆಳೆಯಾ, ಬೇಗನೆ ಸೀಸೆಯನ್ನು ಕೊಡು, ಎನ್ನಲು, "ಅದೇಕೆ?" ಎಂದು ಆ ಕಾಲ್ಮುಕ ತಾರ್ತರನು ಹೆಚ್ಚೇ ಉತ್ಸುಕತೆಯಿಂದ ಕೇಳಿದನು.

"ಮೊಗಲ ಬಾದಶಹರ ಅಂತಃಪುರದ ಚಾಕರಿ, ಬಂಗಾಲ ದೇಶದ ಜನರ ಸಂಗತಿ ಮತ್ತು ಮರುಭೂಮಿಯ ಸಿದ್ಧತೆ ಇವು ಮೂರೂ ಸಮಾನವೇ ಸರಿ."

ಯಾಕೆ, ಇಷ್ಟೇಕೆ ನಿರಾಶಳಾಗಿರುತ್ತೀ? ಏನೊಂದೂ ಗೊತ್ತಾಗ ಲಿಲ್ಲೇನು?

"ಇಷ್ಟೊತ್ತಿನ ವರೆಗೆ ಕಷ್ಟಬಟ್ಟರೆ ಆ ತರುಣನ ಹೆಸರೊಂದು ಮಾತ್ರ ಗೊತ್ತಾಯಿತು."

"ಅವನ ಹೆಸರೇನು?"

"ಮಹುಕ್-ಮಹುಕ್."

ಚೆನ್ನಾಗಿ ಕೇಳಿಕೊಂಡಿರುವೆಯುಷ್ಟೇ?

ಚೆನ್ನಾಗಿ ಕೇಳಿರುವೆನು. ಬೇಗನೆ ಸೀಸೆಯನ್ನು ಕೊಡು.

ಇನ್ನು ಇಲ್ಲಿ ನಿಂತುಕೊಳ್ಳುವದು ಸರಿಯಲ್ಲ. ನಾವು ಇನ್ನು ಇಲ್ಲಿಂದ ಹೋಗೋಣ.

ಕೂಡಲೆ ಆ ಕಾಲ್ಮುಕನೂ ತಾರ್ತರಿಯೂ ಆ ಮನೆಯ ಬಳಿಯಿಂದ ಹೊರಟುಹೋದನು. ಮೂರೂಸಂಜೆಗೆ ಮಯೂಖನು ತನ್ನ ಮನೆ ಯಿಂದ ಹೊರಬಿದ್ದನು. ಕಾಲ್ಮುಕ್ ತಾರ್ತರನು ದೂರದಿಂದಲೇ ನೋಡಿ ಅವನನ್ನು ಅನುಸರಿಸಿ ಸಾಗಿದನು. ಮುಂದೆ ಎರಡು ಗಂಟೆಗಳ ನಂತರ ಆ ಕಾಲ್ಮುಕ್-ತಾರ್ತರನು ಮಯೂಖನ ಮನೆಗೆ ಬಂದು, ಹೊರಗಿನಿಂದ ಬಾಗಿಲ ಬಡಿಯಹತ್ತಿದನು. ಕೂಡಲೆ ಒಳಗಿನಿಂದ:—ಯಾರವರು? ಎಂದು ಕೇಳಲು, ತಾರ್ತರನು:—"ನಾನು" ಎಂದು ಉತ್ತರಕೊಟ್ಟನು.

"ನೀನು ಅಂದರೆ ಯಾರು" ಎಂದು ಒಳಗಿನವರು ಪುನಃ ಪ್ರಶ್ನೆಮಾಡಲು, "ನಾನು" ಎಂಬ ಗೊಗ್ಗರ ದನಿಯ ಉತ್ತರವು ಬಂದಿತು. ಕೂಡಲೆ ಒಳಗಿನವರಿಗೆ ಆ ದನಿಯ ಸಂಶಯುಬರಲು, ಅವರು ಒಳಗಿನಿಂದಲೇ ಬಾಗಿಲಿಕಿಂಡಿಯೊಳಗಿಂದ ಹಣಿಕಿಹಾಕುತ್ತ:—"ನೀನೆಂದರೆ ಯಾರೋ?" ಎಂದು ಮತ್ತೆ ಪ್ರಶ್ನಮಾಡಲು, "ನಾನು ಮಹುಕ್" ಎಂದು ಹೊರಗಿನವನು ನುಡಿದನು.

ಹೊರಗೆ ಮಯೂಖನು ಬಂದಿರದೆ, ಯಾವನೊಬ್ಬ ಲಫಂಗನು ಬಂದು ತಮ್ಮನ್ನು ಮೋಸಗೊಳಿಸಬೇಕೆಂದಿರುವನೆಂಬದನ್ನು ತಿಳಿದ ವಿನೋದಿನಿಯು ಕಾಲಸಪ್ಪಳ ಮಾಡದೆ ನೆಟ್ಟಗೆ ಒಳಗೆಹೋಗಿ, ಅಡಿಗೆಯ ಮನೆಯಲ್ಲಿದ್ದ ಲಲಿತೆಯನ್ನು ಕುರಿತು ಮೆಲ್ಲಗೆ:—ತಂಗೀ ಲಲಿತಾ, ಹೊರಗೆ ಒಬ್ಬ ಲಫಂಗ ಕಳ್ಳನು ಬಂದಿರುತ್ತಾನೆ. ನೀನು ಒಂದು ಗಡಿಗೆಯಲ್ಲಿ ಬಚ್ಚಲಹರಿಯೊಳಗಿನ ರಾಡಿಯನ್ನು ತುಂಬಿಕೊಂಡು ಮೇಲಟ್ಟದ ಭಾವಣಿಯ ಮೇಲಿರು. ನಾನು ಯಾವಾಗ ತಲೆಬಾಗಿಲವನ್ನು ತೆರೆಯುವೆನೋ ಆಗ ನೀನು ಆ ಗಡಿಗೆಯನ್ನು ಅವನ ತಲೆಯ ಮೇಲೆ ಒಮ್ಮೆಲೆ ಚೆಲ್ಲಿಬಿಡು, ಎಂದು ಹೇಳಿದಳು.

ಕೂಡಲೆ ಲಲಿತೆಯು ಹಿತ್ತಲದಲ್ಲಿಯ ಬಚ್ಚಲಹರಿಯೊಳಗಿನ ರಾಡಿಯನ್ನು ಒಂದು ಗಡಿಗೆಯಲ್ಲಿ ತುಂಬಿಕೊಂಡು ಅಟ್ಟವನ್ನೇರಿ, ಮುಮ್ಮಗ್ಗಲಿನ ಭಾವಣಿಯ ಮೇಲೆ ಹೋಗಿ ಸಜ್ಜಾಗಿ ನಿಂತುಕೊಂಡಳು. ವಿನೋದಿನಿಯು ತನ್ನ ಕೈಯಲ್ಲೊಂದು ಪಾತ್ರೆಯಲ್ಲಿ ಹಕ್ಕಿಯೊಳಗಿನ ಎಮ್ಮೆಯ ಗ್ವಾತವನ್ನು ತುಂಬಿಕೊಂಡು ಬಂದು ತಲೆಬಾಗಿಲವನ್ನು ತೆರೆದಳು. ಆಗ ಕಾಲ್ಮುಕನು ಒಳಗೆ ಕಾಲಿಡಲಿಕ್ಕೂ ಲಲಿತೆಯು ಚಲ್ಲಿಕೊಟ್ಟ ಆ ದುರ್ಗಂಧ ಪೂರಿತ ಗಡಿಗೆಯು ಅವನ ತಲೆಯ ಮೇಲೆ ಬಿದ್ದು ಒಡೆಯಲಿಕ್ಕೂ ಗಂಟೇ ಬಿದ್ದಿತು. ಅಷ್ಟರಲ್ಲಿ ವಿನೋದಿನಿಯು ತನ್ನ ಕೈಯೊಳಗಿನ ಎಮ್ಮೆಯ ಗ್ವಾತದ ಪಾತ್ರೆಯನ್ನು ಅವನ ಕಣ್ಣು ಮೂಗುಗಳ ಮೇಲೆ ಉಗ್ಗಿದಳು! ಕೂಡಲೆ ಆ ಕಾಲ್ಮುಕನ ಕಣ್ಣು ಮೂಗು ಮೋರೆಗಳಲ್ಲೆಲ್ಲ ಆ ದುರ್ಗಂಧವು ತುಂಬ, ಅವನಿಗೆ ಉಸುರಾಡಿಸಲಿಕ್ಕೆ ಕೂಡ ಬಾರದಾಯಿತು. ಅದರಿಂದ ಗಾಬರಿಗೊಂಡ ಅವನು ಹೇಳದೆ ಕೇಳದೆ ಅಲ್ಲಿಂದ ತನ್ನ ಕಾಲಿಗೆ ಬುದ್ಧಿ ಕಲಿಸಿದನು.

ಮಯೂಖನ ಮನೆಯ ಹತ್ತರವೇ ತುಸ ಅಂತರದ ಮೇಲೆ ಆ ಕಾಲ್ಮುಕ್ ತಾರ್ತರನ ಗೆಳತಿಯಾದ ಆ ತಾರ್ತರೀ ದಾಸಿಯು ನಿಂತು

ಕೊಂಡು ಆತನ ಮಾರ್ಗನಿರೀಕ್ಷಣೆ ಮಾಡುತ್ತಿದ್ದಳು. ಅವಳ ಹತ್ತರ ಕಾಲ್ಮುಕನು ಹೋದ ಕೂಡಲೆ ಅವಳು ಅವನನ್ನು ಕುರಿತು:—ಎಲಾ ಹೇಸಿ, ಮೋರೆಮೂಗುಗಳಿಗೆ ಈ ಹೊಲಸನ್ನೆಲ್ಲಿ ತೊಡಕೊಂಡು ಬಂದೆ?

ಕಾಲ್ಮುಕನು ತನ್ನ ಅಂಗಿಯ ತೋಳುಗಳಿಂದ ತನ್ನ ಮೂಗು-ಮೊಸಡಿ ಗಳನ್ನೊರಸಿಕೊಳ್ಳುತ್ತಾ:—ಬೀಬೀ, ಆ ಬಂಗಾಲಿಯು ನನ್ನನ್ನು ಮೋಹಿಸಿ ನನ್ನಮೇಲೆ ತಮ್ಮ ದೇಶದ ಸುಗಂಧದ(ಪನ್ನೀರ)ನೀರನ್ನು ಎರಚಿರುತ್ತಾಳೆ.

"ಥೂ ಮೂರ್ಖಾ, ಹೀಗೆ ಮಾತಾಡಲಿಕ್ಕೆ ನಿನಗೆ ನಾಚಿಕೆ ಹೇಗೆ ಬರುವದಿಲ್ಲವೋ ತಿಳಿಯದು. ಹೋಗು, ನೀನು ನಿನ್ನ ಆ ಬಂಗಾಲೀ ಹೆಂಗಸಿನ ಬಳಿಗೇ ಹೊರಟುಹೋಗು. ನನ್ನ ಹತ್ತರ ಬಂದೆಯೆಂದರೆ ನಿನ್ನನ್ನು ಪಾದರಕ್ಷೆಗಳಿಂದಲೇ ಪೂಜಿಸೇನು?

ಪ್ರಿಯೇ, ನೀನು ನನ್ನ ಮೇಲೆ ಹೀಗೆ ಸಿಟ್ಟಾಗಬೇಡ. ಅವರು ಬಾಗಿಲ ತೆರೆದೊಡನೆ ಒಳಗೆ ಹೊಕ್ಕು ಅವರಿಬ್ಬರನ್ನೂ ಬಂಧಿಸಿ, ಅವರ ವಸ್ತ್ರ-ಒಡವೆಗಳನ್ನು ಸೆಳೆದುತಂದು ನಿನಗೆ ಕೊಡಬೇಕೆಂದೂ, ಬಳಿಕ ಒಳಗೆ ಇದ್ದುಕೊಂಡು ಆ ಬಂಗಾಲೀ ತರುಣನು ರಾತ್ರಿಯಲ್ಲಿ ಹೊರಗಿನಿಂದ ಬಂದು ಬಾಗಿಲ ತೆರೆಯೆಂದು ಕೂಗಿದಾಗ ಬಾಗಿಲ ತೆರೆದು ಅವನನ್ನು ಬಂಧಿಸಿ ನಿನ್ನ ಒಡತಿಯ ಮಹಾಲಿಗೆ ಸಾಗಿಸಿ ನಿನ್ನ ಒಡತಿಯಿಂದ ಸಾಕಷ್ಟು ಇನಾಮುನ್ನು ದೊರಕಿಸಬೇಕೆಂದೂ ನನ್ನ ಮನೋಗತವಾಗಿತ್ತು. ಅದ ನ್ನೆಲ್ಲ ಆ ಹೆಂಗಸು ಹಾಳುಮಾಡಿಬಿಟ್ಟಳು; ಆದರೆ ಗೆಳತೀ ಇನ್ನು ನಾವು ಮಾಡಬೇಕೇನು?

ಹೀಗೆ ಆ ತಾರ್ತರ-ತಾರ್ತರಿಯರಿಬ್ಬರೂ ಆಲೋಚಿಸುತ್ತ ಅಲ್ಲಿ ನಿಂತುಕೊಂಡಿರಲು, ಬಾದಶಹನ ಅಂಗರಕ್ಷಕ ಸ್ವಾರರಲ್ಲಿಯ ಕೆಲ ಸ್ವಾರರೂ ಅಂತಃಪುರದೊಳಗಿನ ಒಬ್ಬ ದಾಸಿಯೂ, ಎರಡು-ಮೂರು ಜನ ಬಂಗಾಲೀ ಬ್ರಾಹ್ಮಣರೂ, ಮಯೂಖನ ಆ ಮನೆಯ ಎದುರಿಗೆ ಬಂದು ನಿಂತು ಕೊಂಡರು. ಅವರಲ್ಲಿಯ ಒಬ್ಬ ಸವಾರನು ಆ ಬಾಗಿಲವನ್ನು ಬಡಿದು, ಬಾಗಿಲ ತೆರೆಯಬೇಕೆಂದು ಕೇಳಿದನು.

ಈ ಮೊದಲು ಬಂದಿದ್ದ ಆ ಲಫಂಗನೇ ಪುನಃ ಬಂದಿರುವನೆಂಬ ಭಾವನೆಯಿಂದ ಒಳಗಿದ್ದ ವಿನೋದಿನಿಯು:—ಮೂರ್ಖಾ, ಮತ್ತೆ ಬಂದೆ ಯಾ? ಎಂದು ಪ್ರಶ್ನೆ ಮಾಡಿದಳು.

ಆ ಸವಾರನು ಹಿಂದೂ ಜಾತಿಯ ರಜಪೂತನಾಗಿದ್ದನು. ಆಗ ಅವನು ಹಿಂದೀಭಾಷೆಯಲ್ಲಿ:—ತಾಯಿಯೊ, ನಾನು ಹಜರತ್ ಬೇಗಮರ ಆಜ್ಞೆಯ ಮೇರೆಗೆ ಇಲ್ಲಿಗೆ ಬಂದಿರುತ್ತೇನೆ. ನನ್ನೊಡನೆ ಮಥುರೆಯಿಂದ ಬಂದಿರುವ ನಿಮ್ಮ ಬಂಗಾಲೀ ಜಾತಿಯ ಪುರೋಹಿತರಿರುತ್ತಾರೆ, ಎಂದು ತಿಳಿಸಿದನು.

ಆಗ ಆ ಮನೆಯೊಳಗಿಂದ:—ಅಪ್ಪಾ, ನೀನು ಯಾರೇ ಇರಲೊಲ್ಲಿ ಯೇಕೆ? ನನ್ನ ಮಗನು ಹೊರಗೆ ಹೋಗಿರುತ್ತಾನೆ. ಅವನು ಬರುವ ವರೆಗೆ ತಡೆ. ಅವನು ಬಂದ ಮೇಲೆಯೇ ಬಾಗಿಲ ತೆರೆಯುತ್ತೇನೆ.

ಬಂಗಾಲೀ ಪುರೋಹಿತನು ಆಕಾಶದ ಕಡೆಗೆ ನೋಡಿ, ರಾತ್ರಿಯು ಹೆಚ್ಚಾಗಿರುವದೆಂಬದನ್ನು ತಿಳಿದು, ಆ ಮನೆಯೊಳಗಿನ ಆ ಹೆಣ್ಣುಮಗಳನ್ನುದ್ದೇಶಿಸಿ:—ತಾಯಿಯೊ, ನಿನಗಾವ ಭಯವೂ ಇರುವದಿಲ್ಲ. ನಾನು ಬಂಗಾಲೀ ಬ್ರಾಹ್ಮಣನು. ರಾತ್ರಿಯು ಹೆಚ್ಚಾಗಿರುತ್ತದೆ. ಬೇಗನೆ ಬಾಗಿಲ ತೆರೆ, ಎಂದು ಬಂಗಾಲೀ ಭಾಷೆಯಲ್ಲಿ ಹೇಳಲು, ಹಾಗು ಅವರೊಡನೆ ಬಂದಿದ್ದ ವಿನೋದಿನಿಯ ಕೇವಲ ಪರಿಚಯದ ಆ ಅಂತಃಪುರದ ದಾಸಿಯು ಅವಳಿಗೆ ಅಭಯವನ್ನೀಯಲು, ವಿನೋದಿನಿಯು ಕಡೆಗೊಮ್ಮೆ ಬಾಗಿಲವನ್ನು ತೆರೆದಳು.

ಆಗ ಆ ಸವಾರನು ವಿನೋದಿನಿಯನ್ನು ಕುರಿತು:--ತಾಯಿಯೊ, ನಿಮ್ಮ ಮಗನು ಈ ಅಪರಾತ್ರಿಯಲ್ಲಿ ಹೋಗಿರುವದೆಲ್ಲಿಗೆ? ಎಂದು ಕೇಳಲು, 'ಅಪ್ಪಾ, ಇಂದು ಅವನು ದಿವಾಣ-ಈ-ಖಾಸಕ್ಕೆ ಹೋಗಿರುತ್ತಾನೆ'' ಎಂದು ಹೇಳಿದಳು.

ಕಾಲ್ಮುಕ್ ತಾರ್ತರನೂ, ಆ ತಾರ್ತರಿಯೂ ಸಮೀಪದ ಹಿತ್ತಲಬಾಗಿಲ ಕತ್ತಲೆಯಲ್ಲಿ ಇದುವರೆಗೂ ನಿಂತುಕೊಂಡೇ ಇದ್ದರು. ಅವರಿಗೆ ಆ ಮನೆಯ ಆ ತರುಣನು ಆಗ ದಿವಾಣ-ಈ-ಖಾಸಕ್ಕೆ ಹೋಗಿರುವನೆಂಬದು ಸಹಜವಾಗಿ ಕೇಳಬಂದಿತು. ಕೂಡಲೆ ತಮ್ಮ ಇಂದಿನ ಕೆಲಸವು ಸಹಜವಾಗಿ ಕೈಗೂಡುವದೆಂದು ಬಗೆದು, ಆ ಇಬ್ಬರೂ ಗೆಳತಿ-ಗೆಳೆಯರು ತಮ್ಮ ಬಳಿಯ ಸರಾಯಿಯನ್ನೆಲ್ಲ ನುಂಗಿ ನೀರು ಹಿಡಿದು, ಅಲ್ಲಿಂದ ಧಾವಿಸುತ್ತ ಅಮುರಸಿಂಹ ಬಾಗಿಲದ ಬಳಿಗೆ ಹೋಗಿ ಹಿತ್ತಲಬಾಗಿಲಿನ ಅಂಧಕಾರದಲ್ಲಿ ಅಡಗಿ ಕುಳಿತುಕೊಂಡರು.

ಇತ್ತ ವಿನೋದಿನಿಯು ಮನೆಗೆ ಬಂದ ಮಥುರೆಯ ಪುರೋಹಿತರ ಊಟ-ಉಪಚಾರಗಳಲ್ಲಿ ತೊಡಗಿದಳು. ಇಷ್ಟರಲ್ಲಿ ಲಲಿತೆಯು ಹುಚ್ಚಿಯಂತೆ ಓಡುತ್ತ ಬಂದು ಆ ಆಗಂತುಕನ-ಮಥುರೆಯಿಂದ ಬಂದಿದ್ದ ಆ ಬಂಗಾಲೀ ಪುರೋಹಿತನ-ಕಾಲಿಗೆರಗಿ:—"ಕಕ್ಕಾ, ತರ್ಕರತ್ನಭಟ್ಟಾಚಾರ್ಯರೆ! ಎಂದು ಕೂಗಿದವಳೇ ಮೂರ್ಛಿತಳಾಗಿ ಬಿದ್ದುಬಿಟ್ಟಳು!

———

೧೪ನೇ ತರಂಗ

## ದಿವಾಣ-ಈ-ಖಾಸ.



ಬಾದಶಹನು ಯಾವಾಗ ಆಗ್ರಾ ದುರ್ಗದಲ್ಲಿರುತ್ತಿದ್ದನೋ ಆಗ ಆಗ್ರಾಕೋಟೆಯೂ ಒಳಗಿನ ಪ್ರಾಸಾದಗಳೂ ತರತರದ ಬಣ್ಣಗಳ ದೀಪಗಳಿಂದ ಶೋಭಿಸುತ್ತಿದ್ದವು. ಲಕ್ಷಸಂಖ್ಯಾಕಗಳಾದ ಗಂಧದ ಎಣ್ಣೆಯ ದೀಪಗಳು ಬಗೆಬಗೆಯ ಬಣ್ಣದ ಹಂಡೆ-ಝುಮರುಗಳಲ್ಲಿ ಬೆಳಗುತ್ತಿದ್ದವು. ನೂರಾರು ಕಾರಂಜಿಗಳು ತರತರದ ಬಣ್ಣದ ಸುಗಂಧಮಿಶ್ರಿತ ಪನ್ನೀರುಗಳನ್ನು ಅಲ್ಲಲ್ಲಿ ಎರಚುತ್ತಿದ್ದವು. ಆ ಕಾರಂಜಿಗಳ ನಾಲ್ಕೂ ಬದಿಗಳ ಕಾಜಿನ ಕಿಟಕಿ-ಬಾಗಿಲುಗಳ ಮೇಲಂತಸ್ತುಗಳಲ್ಲಿ ಆ ಕಾರಂಜಿಗಳ ನೀರಿನ ಹನಿಗಳೂ ಹಾಗು ಆ ಅಸಂಖ್ಯ ದೀಪಗಳೂ ಪ್ರತಿಬಿಂಬಗಳನ್ನು ಹೊಂದಿ ಆ ಆಗ್ರಾ ಕೋಟೆಯಲ್ಲೆಲ್ಲ ನೋಡಿದತ್ತ ದೀಪಗಳೇ ದೀಪಗಳಾಗಿ ತೋರುತ್ತಿದ್ದವು!

ಮಯೂಖನು ಆ ದಿನ ಸಂಜೆಯ ಮುಂದೆ ಯಾವಾಗ ಆ ಆಗ್ರಾ ಕೋಟೆಯ ಹತ್ತರ ಬಂದನೋ ಆಗ ಮೇಲೆ ಹೇಳಿದಂತೆ ಆ ದುರ್ಗದಲ್ಲೆಲ್ಲ ದೀಪಗಳು ಬೆಳಗುತ್ತಿದ್ದವು. ದುರ್ಗದ ಮುಖ್ಯ ಬಾಗಿಲದಲ್ಲಿ ಆಸಫಖಾನನ ಒಬ್ಬ ಸೇವಕನು ದಾರಿಕಾಯುತ್ತ ನಿಂತಿದ್ದನು. ಇವನು ಅಲ್ಲಿಗೆ ತಲಪುತ್ತಲೇ ಅವನು ಇವನನ್ನು ದುರ್ಗದೊಳಗೆ ಕರಕೊಂಡು ನಡೆದನು. ಆ ಸೇವಕನೊಡನೆ ಆಸಫಖಾನನ ಮುದ್ರೆಯ ಪತ್ರವಿರುವದನ್ನು ಕಂಡು ಕೋಟೆಯೊಳಗಿನ ಪಹರೆಯುವರು ಇವರನ್ನು ತಡೆಯದೆ ಒಳಗೆ ಹೋಗಗೊಟ್ಟರು.

ಆಗ ಆ ಆಗ್ರಾ ಕೋಟೆಯೊಳಗಿನ ಮೊದಲನೇ ಎರಡನೇ ಹಾಗು ಮೂರನೇ ಚೌಕಗಳು ನಿರ್ಜನವಾಗಿದ್ದವು; ಅಲ್ಲದೆ ಆ ದಿವಾಣ-ಈ-ಆಮ ದರ್ಬಾರದ ಭವ್ಯ ಕಟ್ಟಡವೂ ಜನರಹಿತವಾಗಿದ್ದಿತು. ದಿವಾಣ-ಈ-ಆಮ ದರ್ಬಾರದ ಸುತ್ತುಮುತ್ತಲಿನ ಚಂದ್ರಶಾಲೆಯೊಳಗಿನ ಮನಸಬದಾರರ ಕಚೇರಿಗಳಲ್ಲಿ ಅಸಂಖ್ಯ ದೀಪಗಳು ಪ್ರಜ್ವಲಿಸುತ್ತಿದ್ದವು. ಅಲ್ಲಿಯ ಒಂದೆರಡು ಕಚೇರಿಗಳಲ್ಲಿ ಮನಸಬದಾರರು ಬಕ್ಷಿಯ ಅಪ್ಪಣೆ ಗಾಗಿ ಇನ್ನೂ ಅಲ್ಲಿ ಕಾದಿದ್ದರು. ಮಯೂಖನು ಅಸಫಖಾನನ ಅನುಚರನೊಡನೆ ನಗಾರಖಾನೆಯ ಬಾಗಿಲದಿಂದ ಪಶ್ಚಿಮದ ಕಡೆಗೆ ಸಾಗಿ ಹೋಗಿ, ದಿವಾಣ-ಈ-ಆಮ ದರ್ಬಾರ ಗೃಹದ ಎಡಕಿನ ಒಂದು ಸಣ್ಣ ದ್ವಾರವನ್ನು ಹೊಕ್ಕನು. ಬಾಗಿಲದ ಹತ್ತರವೇ ಕೈಯಲ್ಲಿ ಚಪಗೊಡ್ಲಿ ಯನ್ನು ಧರಿಸಿ ಪಹರೆ ಮಾಡುತ್ತಿದ್ದಂಥ ಒಬ್ಬ ಖೋಜಾ ಹಬಸಿಯು ನಿಂತು ಕೊಂಡಿದ್ದನು. ವಜೀರ ಆಸಫಖಾನನ ಅನುಚರನು ಅವನಿಗೆ ತನ್ನ ಬಳಿಯ ಆ ಮೋಹರಬಂದ ಪತ್ರವನ್ನು ತೋರಿಸಿದನು. ಕೂಡಲೆ ಆ ಹಬ ಸಿಯು ಅವರಿಗೆ ಒಳಗೆ ಹೋಗಲಿಕ್ಕೆ ದಾರೀ ಬಿಟ್ಟುಕೊಟ್ಟನು. ಆ ಬಾಗಿಲದ ಹತ್ತರವೇ ಸಾಲುಮೆಟ್ಟಲುಗಳಿದ್ದವು. ಅವುಗಳನ್ನೇರಿ ಮಯೂ ಖನು ಮೇಲಕ್ಕೆ ಹೋದನು. ಎದುರಿಗೆ ಕೆಂಪು ಶಿಲೆಯಿಂದ ನಿರ್ಮಿಸ ಲ್ಪಟ್ಟ ಒಂದು ಭವ್ಯವಾದ ಮೇಲಂತಸ್ತಿನ ಮನೆ. ಆ ಮನೆಯಲ್ಲಿ ಅಸಂಖ್ಯ ಚೋಪದಾರರೂ ದರಕದಾರರೂ ಖೋಜಾಜನರೂ ಪರಿಚಾರ ಕರೂ ಸಜ್ಜಾಗಿ ನಿಂತುಕೊಂಡಿದ್ದರು. ಮಯೂಖನು ತನ್ನ ಸಂಗಡ ಬಂದಿದ್ದ ಅನುಯಾಯಿಯೊಡನೆ ಆ ಮಹಲಿನ ಮನೆಯನ್ನು ದಾಟ, ದಿವಾಣ-ಈ-ಖಾಸ ದರ್ಬಾರ ಗೃಹಕ್ಕೆ ತಲುಪಿದನು.

ದಿವಾಣ-ಈ-ಖಾಸ ದರ್ಬಾರ ಗೃಹದ ಪ್ರವೇಶದ್ವಾರದಲ್ಲಿ ಖಾಸ ಚೌಕಿಯ ಮನಸಬದಾರನಾದ ಶಾಹಿಸ್ತೇಖಾನನು ನಿಂತುಕೊಂಡಿದ್ದನು ಆಸಫಖಾನನ ಅನುಚರನು ಮಯೂಖನನ್ನು ಅವನ ಬಳಿಗೆ ಮುಟ್ಟಸಿ, ತನ್ನ ಬೇರೆ ಕೆಲಸಕ್ಕೆ ಹೊರಟು ಹೋದನು. ಶಾಹಿಸ್ತೇಖಾನನು ಮಯೂ ಖನ ಕಡೆಗೆ ಕೆಲಕ್ಷಣಗಳ ವರೆಗೆ ದಿಟ್ಟಸಿ ನೋಡಿದನು. ಬಳಿಕ ಅಲ್ಲಿಯ ಒಬ್ಬ ಖೋಜಾನಿಗೆ ನೇತ್ರ-ಸಂಕೇತ ಮಾಡಿದನು. ಕೂಡಲೆ ಆ ಖೋಜಾ ಹಬಸಿಯು ಮಯೂಖನನ್ನು ಕರಕೊಂಡು ಆ ದರ್ಬಾರ ಗೃಹವನ್ನು

ಪ್ರವೇಶಿಸಿದನು.

ಆಗ್ರಾದುರ್ಗದ ಪಾಣಿಘಟಕ-ದರಿಯಾ ದ್ವಾರದ-ಹಿಮ್ಮಗ್ಗಲಿನ ಶುಭ್ರಶಿಲೆಯ ಪ್ರಶಸ್ತವಾದ ಮಹಾಲಿನ ಒಂದು ಮಗ್ಗಲಿನಲ್ಲಿ ಒಂದು ಅಚ್ಚ ಕರೀಶಿಲೆಯ ಆಸನವೂ ಇನ್ನೊಂದು ಮಗ್ಗಲಿನಲ್ಲಿ ಒಂದು ಶುಭ್ರಶಿಲೆಯ ಆಸನವೂ ವಿರಾಜಿಸುತ್ತಿದ್ದವು. ಆ ಗೃಹದ ಉತ್ತರದಿಕ್ಕಿನಲ್ಲಿ ಅಚ್ಚಬಿಳೀ ಬಣ್ಣದ ಶಿಲೆಯಿಂದ ನಿರ್ಮಿಸಲ್ಪಟ್ಟ ದಿವಾಣ-ಈ-ಖಾಸ ದರ್ಬಾರದ ಕ್ಷುದ್ರ ಮಂದಿರವು. ಆ ದಿವಾಣ-ಈ-ಖಾಸ ದರ್ಬಾರದ ಕ್ಷುದ್ರ ಮಂದಿರದ ಗೋಡೆಗೆ ಎಷ್ಟು ಮೂಲ್ಯವಾನ್ ಕಲ್ಲುಗಳೂ, ಮುತ್ತು-ರತ್ನಗಳೂ ಉಪಯೋಗಿಸಲ್ಪಟ್ಟಿದ್ದವೋ ಅವನ್ನೆಲ್ಲ ಖರ್ಚು ಮಾಡಿದ್ದರೆ ಅಂಥ ಮತ್ತೊಂದು ಆಗ್ರಾಪಟ್ಟಣವನ್ನು ಸಿದ್ಧಗೊಳಿಸಬಹುದಾಗಿತ್ತೆಂದು ಆಗಿನ ಕಾಲದ ತಜ್ಞರ ಅಭಿಪ್ರಾಯವಾಗಿತ್ತು. ಮಯೂಖನು ದಿವಾಣ-ಈ-ಖಾಸ ದರ್ಬಾರವನ್ನು ಪ್ರವೇಶಿಸಿದಾಗ ಬಾದಶಹನಿನ್ನೂ ಅಲ್ಲಿಗೆ ಬಂದಿರಲಿಲ್ಲ. ವಜೀರನಾಗಿದ್ದ ನವಾಬ ಆಸಫಖಾನನು ಸಿಂಹಾಸನದ ಎದುರುಗಡೆಯಲ್ಲಿ ನಿಂತುಕೊಂಡು ಮೀರಬಕ್ಷಿಯಾಗಿದ್ದ ನೂರಉಲ್ಲಾಖಾನನೊಡನೆ ಸಂಭಾಷಣವನ್ನು ನಡೆಸಿದ್ದನು. ಮಯೂಖನು ಆಸಫಖಾನನನ್ನು ಅಭಿವಂದಿಸಿ, ಅಲ್ಲಿಯ ಗೋಡೆಯ ಮೇಲಿನ ಚಿತ್ರಗಳನ್ನು ಉತ್ಸುಕತೆಯಿಂದ ನೋಡುತ್ತ ನಿಂತುಕೊಂಡನು. ಹಸರುಬಣ್ಣದ ನವಿಲು ಮುತ್ತು-ರತ್ನಗಳ ಗರಿಗಳಿಂದ ನೋಡುವವರ ದೃಷ್ಟಿಯನ್ನು ಆಕರ್ಷಿಸಿಕೊಳ್ಳುತ್ತಿತ್ತು. ಆ ಚಿತ್ರವು ಈಗ ಆಗ್ರಾದೊಳಗಿನ ಆ ದಿವಾಣ-ಈ-ಖಾಸ ದರ್ಬಾರ ಗೃಹದಲ್ಲಿರುವದಿಲ್ಲ. ಬಹಳ ವರ್ಷಗಳ ಹಿಂದೆ ಅದನ್ನು ಜಾಟ ಜಾತಿಯ ಸುರಜಮಲ್ಲನೆಂಬ ಪುಂಡನು ಸೆಳೆದೊಯ್ದಿರುತ್ತಾನೆ. ನಮ್ಮ ಮಯೂಖನು ಆ ಚಿತ್ರವನ್ನು ಒಳ್ಳೇ ದಿಟ್ಟಿಸಿ ನೋಡುತ್ತಿರಲಿಕ್ಕೆ ಹಿಂದಿನಿಂದ ಬಂದ ಒಂದು ವ್ಯಕ್ತಿಯು ಆತನ ಹೆಗಲಮೇಲೆ ಮೆಲ್ಲಗೆ ಕೈಯಿಟ್ಟನು. ಆಗ ಚಕಿತನಾದ ಮಯೂಖನು ಅತ್ತ ಹೊರಳಿ ನೋಡಲು, ಅಸದಖಾನನು ಅವನನ್ನು ಆಲಿಂಗಿಸಿ:—ಮಯೂಖ, ನೀನು ನನ್ನ ಪರಮಮಿತ್ರನಾದ ದೇವೇಂದ್ರ ನಾರಾಯಣನ ಮಗನಾಗಿದ್ದು, ನನ್ನ ಜೀವನದಾತೃವಾಗಿರುತ್ತೀ. ಬಹಳ ದಿನಗಳ ತರುವಾಯ ನಿನ್ನ ದರ್ಶನವಾದದ್ದಕ್ಕಾಗಿ ನನಗೆ ತುಂಬಾ ಸಂತೋಷವಾಗಿರುತ್ತದೆ. ತಮ್ಮಾ, ಈಗ ನೀನು ಯಾವ

ಉದ್ಯೋಗವನ್ನು ಮಾಡುತ್ತಿರುವೆ? ನಿನ್ನ ವಾಸವೆಲ್ಲಿ? ಎಂದು ಪ್ರಶ್ನೆ ಮಾಡಿದನು.

ನಾನು ಮೂರು-ನಾಲ್ಕು ವರ್ಷಗಳಿಂದ ಈ ಆಗ್ರಾಪಟ್ಟಣದಲ್ಲಿಯೇ ಇರುತ್ತಿದ್ದು, ಬಾದಶಹನ ದರ್ಬಾರದಲ್ಲಿ ಚಾಕರಿಯನ್ನು ದೊರಕಿಸುವದಕ್ಕಾಗಿ ಪ್ರಯತ್ನಿಸುತ್ತಿರುತ್ತೇನೆ, ಎಂದು ಹೇಳಿ ತಾನು ಸಪ್ತಗ್ರಾಮದ ಯುದ್ಧದಲ್ಲಿ ಗಾಯಹೊಂದಿ ಅದೃಶ್ಯವಾದಂದಿನಿಂದ ಇಂದಿನ ವರೆಗಿನ ಸಮಸ್ತ ಸಂಗತಿಯನ್ನೂ ಅಸದಖಾನನಿಗೆ ಸಂಕ್ಷಿಪ್ತವಾಗಿ ತಿಳಿಸಿದನು.

ನೀನು ಇಷ್ಟು ದಿನಗಳ ವರೆಗೆ ಈ ಆಗ್ರಾಪಟ್ಟಣದಲ್ಲಿ ಸುಮ್ಮನೆ ಏಕೆ ಕಾಲಹರಣ ಮಾಡಿದೆ?

ನಾನು ಬಂದಾಗಿನಿಂದಲೂ ಚಾಕರಿಯ ಪ್ರಯತ್ನದಲ್ಲಿಯೇ ಇರುತ್ತೇನೆ; ಆದರೆ ಈ ವಿಸ್ತಾರವಾದ ಪಟ್ಟಣದಲ್ಲಿ ನನ್ನ ಗುರುತಿನವರಾರೂ ಇರದ್ದರಿಂದ ಈ ವರೆಗೆ ನನ್ನ ಯಾವ ಪ್ರಯತ್ನಗಳಿಗೂ ಸಾಫಲ್ಯವುಂಟಾಗಲಿಲ್ಲ.

ಹಾಗಾದರೆ ಇಂದು ನೀನು ಅದಾವ ಉಪಾಯದಿಂದ ಈ ಖಾಸ ದರ್ಬಾರಕ್ಕೆ ಬಂದಿರುತ್ತೀಯೆ?

ನಮ್ಮ ಮನೆಯ ಆ ವಿನೋದಿನಿವೈಷ್ಣವಿಯು ಬಾದಶಹನ ಅಂತಃಪುರದೊಳಗಿನ ಹಜರತ್‌ಬೇಗಮ್ಮಳಿಗೆ ಕಸೂತಿ ಕಲಿಸಲಿಕ್ಕೆ ಹೋಗುತ್ತಿದ್ದಳು. ಅವಳು ತನ್ನ ಛಿಡೆ-ಮೂರುವತ್ತುಗಳಿಂದ ಹಜರತ್‌ಬೇಗಮ್ಮಳಿಂದ ಆಸಫಖಾನರಿಗೊಂದು ಪತ್ರತಂದಿದ್ದಳು. ಆ ಪತ್ರದ ಸಲುವಾಗಿ ವಜೀರ ಆಸಫಖಾನರು ನನ್ನನ್ನು ಇಂದು ಇಲ್ಲಿಗೆ ಕರೆತಂದಿರುತ್ತಾರೆ.

ಮಯೂಖ, ಅಲ್ಲಾನ ದಯೆಯಿಂದ ಇಂದು ಆ ಬಂಗಾಲದೊಳಗಿನ ಫಿರಂಗಿಗಳ ಸತ್ಯಾನಾಶದ ಉಪಾಯವು ಕೈಗೂಡಿದಂತಾಗಿರುತ್ತದೆ. ಹೊಸ ಫಿರಂಗಿಗಳ ಸಹಾಯದಿಂದ ಆ ಹಳೇ ಪೋರ್ತುಗೀಜ ಫಿರಂಗೀದಸ್ಯುಗಳನ್ನು ನಿರ್ಮೂಲ ಮಾಡಬೇಕೆಂದಿರುತ್ತೇನೆ.

ಈ ಸಂಗತಿಯನ್ನು ಕೇಳಿ ಮಯೂಖನು ಬೆರಗಾಗಿ ಅಸದಖಾನನ ಕಡೆಗೆ ಟಕಮಕವಾಗಿ ನೋಡತೊಡಗಿದನು. ಇಷ್ಟರಲ್ಲಿ ನಗಾರಖಾನೆಯೊಳಗಿನ ನಗಾರಿ-ನೌಬತ್ತುಗಳು ಮೊಳಗಲಾರಂಭಿಸಿದವು. ಕೂಡಲೆ ಅಸದಖಾನನು ದಿವಾಣ-ಈ-ಖಾಸ ದರ್ಬಾರದ ಸಿಂಹಾಸನದ ಕಡೆಗೆ ಹೊರಳಿ ನಿಂತುಕೊಂಡನು. ಅಷ್ಟರಲ್ಲಿ ಮಯೂಖನ ಎದುರಗಡೆಯ ಆ ಸಿಂಹಾ

ಸನದ ಹಿಮ್ಮಗ್ಗಲಿನ ಆ ಹರಳುಕಲ್ಲಿನ ಗೋಡೆಯಲ್ಲಿಯ ಹಿಂದು ಬಂಗಾರದ ಗುಪ್ತದ್ವಾರವು ಹಿಮ್ಮೆಲೆ ತೆರೆದು, ಅದರೊಳಗಿಂದ ಬಾದಶಹನು ಹತ್ತಿದ್ದ ಪುಟ್ಟದಾದ ಆನೇಕೋರೆಯ ಮೇಣೆಯು ಒಳಗೆ ಪ್ರವೇಶಿಸಿತು. ಆ ಕೂಡಲೆ ಅಲ್ಲಿಗೆ ಬಂದಿದ್ದ ಸಭಾಸದರೆಲ್ಲರೂ ಬಾದಶಹನಿಗೆ ಮೂರು ಮೂರು ಸಾರೆ ಮುಜೂರೆ ಮಾಡಿ ಅಭಿವಂದಿಸಿದರು. ಮಯೂಖನೂ ಅದರಂತೆ ಸಲಾಮುಮಾಡಿದನು. ಬಾದಶಹನು ಮೇಣೆಯಿಂದಿಳಿದು ಸಿಂಹಾಸನವನ್ನು ಹತ್ತಿಕುಳಿತನು. ಬಳಿಕ ನಬಾಬಆಸಫಖಾ, ಬಕ್ಷಿನೂರುಲ್ಲಾಖಾ, ಆಸದಖಾ, ಶಹಾನಶಿಯಾಜಖಾ ಮುಂತಾದ ಸಭಾಸದರು ಆ ಸಿಂಹಾಸನವನ್ನು ಸುತ್ತುವರೆದು ನಿಂತುಕೊಂಡರು. ಆಸಫಖಾನನು ಎಲ್ಲಕ್ಕೂ ಮೊದಲು ಮಯೂಖನನ್ನು ಬಾದಶಹನ ಎದುರಿಗೆ ನಿಲ್ಲಿಸಲು, ಬಾದಶಹ ಶಹಾಜಹಾನನು ಪ್ರಸನ್ನವದನದಿಂದ:— ತರುಣಬಂಗಾಲೀಬಹದ್ದೂರ, ನಿನ್ನ ವಿಚಾರವನ್ನು ಕೈಕೊಳ್ಳುವದಕ್ಕಿಂತ ಮೊದಲು, ಆ ಫಿರಂಗಿದಸ್ಯುಗಳ ಪ್ರಕರಣವನ್ನು ವಿಚಾರಮಾಡುವೆನು, ಎಂದು ಹೇಳಿದನು. ಅದನ್ನು ಕೇಳಿ ನಬಾಬ ಆಸಫಖಾನನು ವಿಷಣ್ಣವದನದಿಂದ:—ಜನಾಬ, ಈ ತರುಣನು ಈ ನಿಮ್ಮ ಆಗ್ರಾಪಟ್ಟಣದಲ್ಲಿ ಕಳೆದ ಮೂರುವರ್ಷಗಳಿಂದ ಯಾವ ಉದ್ಯೋಗವೂ ಇಲ್ಲದೆ ಕೇವಲ ಬಡತನದಲ್ಲಿ ಕಾಲಕಳೆಯುತ್ತಿರುವನು. ಈತನ ತಂದೆಯು ಜನ್ನತಮಕಾನೀ-ಜಹಾಂಗೀರಬಾದಶಹರ ಕಾಲದಲ್ಲಿ ದರ್ಬಾರದ ಚಾಕರಿಯನ್ನು ಬಹು ಪ್ರಾಮಾಣಿಕತನದಿಂದ ಮಾಡಿರುತ್ತಾನೆ.

ನಬಾಬಸಾಹೇಬ, ನನಗೆ ಅದೆಲ್ಲವೂ ಗೊತ್ತಿರುತ್ತದೆ. ಎಷ್ಟು ತಡವಾದರೂ ಇಂದು ನಾನು ಈ ತರುಣನ ವಿಷಯವನ್ನು ಚೆನ್ನಾಗಿ ಪರಾಂಬರಿಸಿಯೇ ಈ ಖಾಸ ದರ್ಬಾರದಿಂದ ಏಳುವೆನು. ಇನ್ನು ನೀವು ಈ ತರುಣನ ಬಗ್ಗೆ ಆಲೋಚಿಸುವ ಕಾರಣವಿಲ್ಲ. ಆ ಸುರತದ ಫಿರಂಗಿಗಳ ದೂತನು ಎಲ್ಲಿದ್ದಾನೆ? ಎಂದು ಬಾದಶಹನು ಆತುರದಿಂದ ಕೇಳಿದನು.

ಇಲ್ಲಿಯೇ ಇರುತ್ತಾನೆ, ಎಂದು ವಜೀರನು ಹೇಳಿದನು. ಇಷ್ಟರಲ್ಲಿ ಶಾಹಿಸ್ತೇಖಾನನು ಒಬ್ಬ ಪ್ರೌಢವಯಸ್ಸಿನ ಫಿರಂಗಿಯನ್ನು ಕರೆತಂದು ಬಾದಶಹನ ಎದುರಿಗೆ ನಿಲ್ಲಿಸಿದನು. ಆ ಫಿರಂಗಿಯು ಮೂರು ಮೂರು ಸಾರೆ ನೆಲಮುಟ್ಟಿ ಬಾದಶಹನಿಗೆ ಕುರ್ನಿಸಾತ್‌ಮಾಡಿದನು. "ನಿನ್ನ ಹೆಸರೇನು?" ಎಂದು ವಜೀರ ಆಸಫಖಾನನು ಆ ಫಿರಂಗಿಗೆ ಪ್ರಶ್ನೆಮಾಡಲು,

ಫಿರಂಗಿಯು ಬಾದಶಹನನ್ನು ಮತ್ತೆ ಮೊದಲಿನಂತೆ ಅಭಿವಂದಿಸಿ, ನನ್ನ ಹೆಸರು ಓಯಾಲ್ಡನೆಂದು. ನಾನು ಸುರತ ಬಂದರದ ಇಂಗ್ಲಿಷರ ಮುಖ್ಯಸ್ಥನು; ಎಂದು ಹೇಳಿದನು.

ನಿಮಗೂ ಪೋರ್ತುಗೀಜ ಫಿರಂಗಿಗಳಿಗೂ ಹಗೆತನವಿರುವದೇನು?

ಅಹುದು.

ನೀವು ಕ್ರೈಸ್ತಮತದವರಲ್ಲವೆ?

ಹೌದು; ಆದರೆ ಪೋರ್ತುಗೀಜರಂತೆ ನಾವು ಲಫಂಗರಲ್ಲ

ನೀವು ಈಗ ಶಹಾನ್‌ಶಹಾ ಬಾದಶಹರ ಹುಕುಮನ್ನು ಮನ್ನಿಸುವದಾದರೆ ನಿಮ್ಮ ಅಭೀಷ್ಟವು ಕೈಗೂಡುವದು.

ಆಗ ಬಾದಶಹನು ಆಸದಖಾನನ್ನು ಕುರಿತು:—ಆಸದಖಾ, ಸಪ್ತಗ್ರಾಮದಲ್ಲಿ ಫಿರಂಗಿಗಳೊಡನೆ ನೀವೇಕೆ ಕಾದಾಡಬೇಕಾಯಿತು?

ಜಹಾಂಪನಾ, ಒಬ್ಬ ಕಾಫರನು ಫಿರಂಗೀ ಪಾದ್ರಿಗಳ ಉಪಟಳಕ್ಕಾಗಿ ಅವರ ಬಳಿಯಿಂದ ಓಡಿಬಂದು, ಬಾದಶಾಹೀ ಬಂದರವಾದ ಸಪ್ತಗ್ರಾಮದಲ್ಲಿ ಆಶ್ರಯ ಹೊಂದಿದ್ದನು. ನಂತರ ಫಿರಂಗೀ ಪಾದ್ರಿಯು ತನ್ನ ಶಿಪಾಯಿಗಳೊಡನೆ ಅಲ್ಲಿಗೆ ಬಂದು, ಅವನನ್ನು ಹಿಡಿದೊಯ್ಯಲಿಕ್ಕೆ ಪ್ರಯತ್ನ ಮಾಡಹತ್ತಿದನು. ಅದಕ್ಕೆ ನಾನು ಅಡ್ಡಿಯನ್ನು ಮಾಡಿದೆನು. ಅದರಿಂದ ಆ ಫಿರಂಗಿಯು ನನ್ನನ್ನು ಆಕ್ರಮಿಸಿದನು. ಅಂದು ದೇವೇಂದ್ರ-ನಾರಾಯಣನ ಮಗನಾದ ಈ ಮಯೂಖನೇ ನನಗೆ ಪ್ರಾಣದಾನಮಾಡಿರುತ್ತಾನೆ. ಆ ಕಾಫರನನ್ನು ಹಿಡಿದೊಯ್ಯುವದಾಗದ್ದರಿಂದ ಅಂದು ರಾತ್ರಿ ಆ ಫಿರಂಗಿಗಳು ಸಸೈನ್ಯವಾಗಿ ಬಂದು, ಆ ಬಂದರವನ್ನು ಮುತ್ತಿ ಸುಲಿಗೆಮಾಡಿದರು; ಆಗಲೂ ಈ ತರುಣ ಮಯೂಖನೇ ಆ ಸಪ್ತಗ್ರಾಮವನ್ನು ಆ ಫಿರಂಗಿಗಳಿಂದ ಕಾಪಾಡಿರುತ್ತಾನೆ.

ತಾವು ಅಂದು ರಾತ್ರಿ ಫಿರಂಗಿಗಳೊಡನೆ ಕಾದಿದಿರೇನು?

ಅಹುದು. ಆ ದಿನರಾತ್ರಿ ನಬಾಬಶಹಾನಓಯಾಜಖಾನರು ಆ ಸಪ್ತಗ್ರಾಮದಲ್ಲಿದ್ದರು. ಆಗ ಶಹಾನಓಯಾಜಖಾನನು ಮುಂದೆ ಬರಲು, ಬಾದಶಹನು ಅವನನ್ನುದ್ದೇಶಿಸಿ:—ಫಿರಂಗಿಗಳು ಸಪ್ತಗ್ರಾಮವನ್ನು ಮುತ್ತಿದಾಗ ನೀವು ಅಲ್ಲಿಯೇ ಇದ್ದಿರೇನು?

ಅಹುದು; ನಾನು ನನ್ನ ಸೊಸೆಯೊಡನೆ ಆ ರಾತ್ರಿಯಲ್ಲಿ ಫಿರಂಗಿಗೆ

ಳಿಂದ ಬಂಧಿಸಲ್ಪಟ್ಟಿದ್ದೆನು. ಇಷ್ಟರಲ್ಲಿ ಆ ಸಪ್ತಗ್ರಾಮದ ಸುಪ್ರಸಿದ್ಧ ವಣಿಕನಾದ ಗೋಕುಲವಿಹಾರಿಯು ದಂಡು ಫಿರಂಗಿಗಳನ್ನು ಆಕ್ರಮಿಸಹತ್ತಲು, ಅವರು ಓಡಿಹೋದರು. ಮರುದಿನ ಸಂಜೆಯುಮುಂದೆ ಆ ನೀಚ ಫಿರಂಗಿಗಳು ಗಂಗಾಪ್ರವಾಹದೊಳಗಿನ ನಮ್ಮ ನಾವನ್ನು ಮುತ್ತಿ, ನಮ್ಮನ್ನೆಲ್ಲ ಸೆರೆಹಿಡಿದು ಹುಗಳಿಗೆ ಕರೆದೊಯ್ದರು. ಆಗ ನನ್ನ ಸಾಕುಮಗಳಾದ ಗುಲ್‌ರುಖಳನ್ನೂ ಅವರು ಸೆರೆಹಿಡಿದಿದ್ದರು; ಆದರೆ ಹುಗುಳಿಯೊಳಗಿನ ಫಿರಂಗಿಗಳ ದಳಪತಿಯಾದ ಅಮೀರಉಲ್‌ಬಹರ ಡಿಸೋಝನು ನಮ್ಮ ಮೇಲೆ ದಯೆದೋರಿ, ನಮ್ಮನ್ನೆಲ್ಲ ಬಿಟ್ಟುಬಿಟ್ಟನು!

ಆಗ ನಬಾಬ ಆಸಫಖಾನನು ಅಲ್ಲಿದ್ದ ಇಂಗ್ಲಿಷಫಿರಂಗಿಗಳ ದೂತನಿಗೆ ಹೇಳುತ್ತಾನೆ:—ಫಿರಂಗೀ ನೀನೀ ಸಂಗತಿಯನ್ನೆಲ್ಲ ಕೇಳಿ ತಿಳಿದೆಯಷ್ಟೇ?

“ಚನ್ನಾಗಿ ತಿಳಿದಿರುತ್ತೇನೆ”

ಬಳಿಕ ಅಸದಖಾನನು ಬಾದಶಹನ ಬಳಿಗೆ ಬಂದು:—ಶಹಾನಶಹಾ ಬಾದಶಹರು ಅಭಿವಚನವನ್ನು ಕೊಟ್ಟರೆ ಈ ಪ್ರಸಂಗದಲ್ಲಿ ನಾನು ಕೆಲವು ಸಂಗತಿಯನ್ನು ನಿವೇದನಗೊಳಿಸಬೇಕೆಂದಿರುತ್ತೇನೆ.

ಕೂಡಲೆ ಬಾದಶಹನು ತಲೆಯನ್ನಲ್ಲಾಡಿಸಿ ಸಮ್ಮತಿಯಿತ್ತನು. ಆಗ ಅಸದಖಾನನು ವೃದ್ಧ ವಜೀರ ನಬಾಬಆಸಫಖಾನನನ್ನು ಕುರಿತು:—ಜನಾಬ, ಈ ಇಂಗ್ಲಿಷಫಿರಂಗೀದೂತನಿಗೆ ಸಮಸ್ತ ಸಂಗತಿಯೂ ಗೊತ್ತಾಗಿರುವಂತೆ ತೋರುವದಿಲ್ಲ ನಬಾಬಶಹಾನಓಯಾಜಖಾನರು ಹಿಂದುಸ್ತಾನದಲ್ಲಿಯ ಬಾದಶಾಹೀ ದರ್ಬಾರದೊಳಗಿನ ಒಬ್ಬ ಪ್ರಸಿದ್ಧ ಉಮರಾವರಾಗಿರುತ್ತಾರೆ. ನಾನು ಬಾದಶಹರ ಸೇವಕನು. ಆ ಸಾಮಾನ್ಯ ಫಿರಂಗಿಗಳ ವಣಿಕರು ನಮ್ಮಂಥವರ ಮೇಲೆಯೇ ಹೀಗೆ ಅತ್ಯಾಚಾರಗಳನ್ನು ಮಾಡುತ್ತಿರುವಾಗ್ಗೆ, ಅವರು ಆ ಬಂಗಾಲದೇಶದೊಳಗಿನ ಪ್ರಜೆಗಳನ್ನೆಷ್ಟುಪರಿಯಿಂದ ಪೀಡಿಸುತ್ತಿರುವರೆಂಬದನ್ನು ಅದಾರು ಕಲ್ಪಿಸಬೇಕು? ಅವರ ಆ ಅನನ್ವಿತ ಉಪಟಳದಿಂದ ತ್ರಸ್ತರಾದ ಇಬ್ಬರು ಸಾಕ್ಷಿದಾರರು ಇಲ್ಲಿಗೆ ಬಂದಿರುತ್ತಾರೆ; ನಬಾಬಸಾಹೇಬ, ಆ ಇಬ್ಬರ ಸಾಕ್ಷಿಗಳು ಸಾಕಾಗಲ್ಲಕ್ಕಿಲಿವೆ?

ಬಾದಹಹನು ಈ ವರೆಗೆ ಶಾಂತ ಚಿತ್ತದಿಂದ ಅಲ್ಲಿ ನಡೆದ ಸಂಭಾಷಣವನ್ನು ಕೇಳಿಕೊಳ್ಳುತ್ತಿದ್ದನು; ಆದರೆ, ಅಸದಖಾನನ ಆ ಮಾತುಗಳನ್ನು ಕೇಳಿ ಅವನು ಸತಂಾಪಗೊಂಡು ತನ್ನ ಸಿಂಹಾಸನದಿಂದ ಎದ್ದುನಿಂತನು.

ಆ ಕೂಡಲೆ ಅವನ ತಲೆಯ ಮೇಲಿನ ಮುತ್ತು-ರತ್ನಗಳಿಂದ ಕೆಚ್ಚಲ್ಪಟ್ಟ ಬಹುಮೂಲ್ಯ ಮುಕುಟವು ಒಮ್ಮೆಲೆ ಜಾರಿ ನೆಲಕ್ಕೆ ಬಿದ್ದಿತು. ಅದರಿಂದಂತೂ ಬಾದಶಹನ ಸಿಟ್ಟು ಅತಿರೇಕಗೊಳ್ಳಲು, ಅವನು:—ಆಸದಖಾನ, ಆ ಫಿರಂಗಿಗಳ ಉಪಟಳದ ಬಗ್ಗೆ ಇನ್ನು ನನಗೆ ಸಾಕ್ಷಿಗಳ ಅವಶ್ಯಕತೆಯಿರುವದಿಲ್ಲ. ನಾನು ಯಾವಾಗ ಯುವರಾಜನಾಗಿದ್ದೆನೋ, ಹಾಗು ನಾನು ನನ್ನ ತಂದೆಯ ವಿರುದ್ಧ ಬಂಡುಗಾರನಾಗಿದ್ದೆನೋ, ಆಗ ಕೇವಲ ಅಸಹಾಯಿಯೆಂದು ತಿಳಿದು, ಆ ನೀಚ ಫಿರಂಗಿಗಳು ನನ್ನ ಸಮಸ್ತ ವಸ್ತು-ಒಡವೆಗೆಗಳನ್ನೂ ಸುಲಿದು, ದಾಸ-ದಾಸಿಯರನ್ನೂ ಸೆರೆಹಿಡಿದು ನನ್ನನ್ನೂ ನನ್ನ ಹೆಂಡತಿಯನ್ನೂ ಅತ್ಯಂತ ಅವಮಾನಗೊಳಿಸಿರುತ್ತಾರೆ. ನಾನು ಈಗ ಬಾದಶಹನಾಗಿದ್ದರೂ ಆ ನನ್ನ ದಾಸ-ದಾಸಿಯರನ್ನು ಇದುವರೆಗೂ ಉದ್ಧಾರಗೊಳಿಸದಿರುವದು ನನಗೇ ಅತ್ಯಂತ ಲಾಂಛನಾಸ್ಪದವಾದ ವಿಷಯವಾಗಿರುತ್ತದೆ.

ಬಾದಶಹನ ಆಗಿನ ಕಾಲದ ಆ ಸಿಟ್ಟು ಬೆಂಕಿಸ್ವರೂಪವನ್ನು ಕಂಡು ಆಸದಖಾನನು ತುಸ ಹಿಂದಕ್ಕೆ ಸರಿದನು. ಬಾದಶಹನು ಪುನಃ:— ಈ ನೀಚ ಪೋರ್ತುಗೀಜ ಫಿರಂಗಿಗಳು ನಮ್ಮ ತಂದೆಯ ಬಳಿಗೆ ಹೋಗಿ ಶಹಾಜಾದಾ ಖುರ್ರಮನು ತಮ್ಮ ವಿರುದ್ಧ ಕಾದಲಿಕ್ಕೆಂದು ನಮ್ಮ ಸಹಾಯವನ್ನು ಬೇಡುತ್ತಿರುವನೆಂದು ಸುಳ್ಳು-ಸುಳ್ಳೇ ಹೇಳಿದ್ದರು. ನನ್ನ ಪತ್ನಿಗೆ ಪ್ರೀತಿಪಾತ್ರರಾಗಿದ್ದ ಇಬ್ಬರು ದಾಸಿಯರು ಈಗಲೂ ಸಪ್ತಗ್ರಾಮದಲ್ಲಿ ಆ ಫಿರಂಗಿಗಳ ಸೆರೆಮನೆಯಲ್ಲಿ ಕೊಳಲುತ್ತಿದ್ದಾರೆ. ನಬಾಬರೇ, ನಾನು ಇನ್ನು ತಡಮಾಡದೆ ಆ ಫಿರಂಗೀ ಪೋರ್ತುಗೀಜರನ್ನು ಬೊಗ್ಗುಬಡಿಯುವೆನು. ಓಯಾಲ್ಡ, ಆ ಫಿರಂಗಿಗಳನ್ನು ಹಣಿಯಲಿಕ್ಕೆ ನೀನು ನಮಗೆ ಸಹಾಯಮಾಡುವಿಯೋನು?

ಜಹಾಂಪನಾರವರ, ಹುಕುಮಿನಂತೆ ವರ್ತಿಸುತ್ತೇನೆ.

"ಪೋರ್ತುಗೀಜರ ಹಡಗವನ್ನು ಕಂಡಲ್ಲಿ ಮುಳುಗಿಸಿರಿ. ಪೋರ್ತುಗೀಜರ ವಣಿಕರನ್ನು ಕಂಡಲ್ಲಿ ಸುಲಿಯಿರಿ; ಅಂದರೆ, ಇಂಗ್ಲಿಷಫಿರಂಗೀ, ನಿಮಗೆ ಓಡಿಸಾ ಹಾಗು ಬಂಗಾಲ ಪ್ರಾಂತಗಳಲ್ಲಿ ನಿಮ್ಮ ವ್ಯಾಪಾರ ನಡಿಸಲಿಕ್ಕೆ ತಕ್ಕ ಸನದುಗಳನ್ನು ಕೊಡಿಸುತ್ತೇನೆ

ಸುರತ ಬಂದರದ ಸನ್ಮಾನನೀಯ ಇಂಗ್ಲಿಷ ಕಂಪನಿಯ ಅಧಿಕಾರಿಯು

ಬಾದಶಹನಿಗೆ ಕುರ್ನಿಸಾತ್ ಮಾಡಿ:—ಬಾದಶಹರಿಂದ ಈ ಬಗೆಯ ಲೇಖೀ ಹುಕುಮು ದೊರೆಯುತ್ತಲೆ ಕಾರ್ಯಪ್ರವೃತ್ತನಾಗುತ್ತೇನೆ.

ನಾಳೆ ಬೆಳಿಗ್ಗೆ ದಿವಾಣ-ಈ-ಆಮಕ್ಕೆ ಬಾ. ನಿನಗೆ ಆ ಬಗೆಯ ಹುಕುಮು ಕೊಡಿಸುವೆನು.

ಆ ಕಾಲಕ್ಕೆ ಇಂಗ್ಲಿಷರು ಪೋರ್ತುಗೀಜರ ವೈರಿಗಳಾಗಿದ್ದರು. ಅರಬೀ ಸಮುದ್ರದಲ್ಲಿ, ಇರಾಣೀ ಅಖಾತದಲ್ಲಿ ಹಾಗು ಸುರತ ಬಂದರದ ಬಳಿಯಲ್ಲಿ ಪೋರ್ತುಗೀಜರಿಗೂ ಇಂಗ್ಲಿಷರಿಗೂ ಎಷ್ಟೋ ಸಣ್ಣಪುಟ್ಟಯುದ್ಧಗಳಾಗಿದ್ದವು. ಅದರಿಂದ ಬಾದಶಹನು ಆ ಬಗೆಯಾಗಿ ಅಪ್ಪಣೆಮಾಡಲು, ಆ ಇಂಗ್ಲಿಷ ಕಂಪನಿಯ ಮುಖ್ಯಸ್ಥನಾದ ಓಯಾಲ್ಡನಿಗೆ ಹಿಡಿಸಲಾರದಷ್ಟು ಆನಂದವಾಯಿತು. ಆಗ ಅವನು ಮೂರು ಮೂರು ಸಾರೆ ನೆಲಕ್ಕೆ ಮುಟ್ಟಿ ಬಾದಶಹನಿಗೆ ಮುಜುರೆಮಾಡಿ ಅಭಿವಂದಿಸಿದನು. ಬಳಿಕ ಬಾದಶಹನು ವಜೀರನನ್ನು ಕುರಿತು:—ನಬಾಬಸಾಹೇಬ, ಫಿರಂಗಿಗಳೊಡನೆ ಕಾದಲಿಕ್ಕೆ ಫಿದಾಯತಖಾನನು ಯೋಗ್ಯನಾಗಿರುವದಿಲ್ಲ. ನಾಳಿನಿಂದ ಕಾಸೀಮುಖಾನನನ್ನು ಆ ಕಾಲಕ್ಕೆ ಯೋಜಿಸುವೆನು. ಈ ಬಂಗಾಲೀ ತರುಣನಾದ ಮಯೂಖನು ನಾಳಿನಿಂದ ಸಾವಿರ ಕುದುರೆಯ ಮನಸಬದಾರನು. ಇವನೂ ಫಿರಂಗಿಗಳೊಡನೆ ಕಾದಲಿಕ್ಕೆ ಹೊರಡಲಿ

ಬಾದಶಹನ ಆ ಹುಕುಮನ್ನು ಕೇಳಿ ಸಭಿಕರೆಲ್ಲರೂ ಮೋದಗೊಂಡು ಬಾದಶಹನನ್ನು ಅಭಿವಂದಿಸಿದರು. ಅಷ್ಟರಲ್ಲಿ ಈ ಮೊದಲಿನ ಆ ಹಸ್ತಿದಂತದ ಪುಟ್ಟ ಪಲ್ಲಕ್ಕಿಯು ಅಲ್ಲಿಗೆ ಬಂದಿತು. ಬಾದಶಹನು ದಿವಾಣ-ಈ-ಖಾಸದೊಳಗಿನ ಆ ಸಿಂಹಾಸನದಿಂದಿಳಿದು, ಆ ಪಲ್ಲಕ್ಕಿಯನ್ನೇರಿ, ಆ ಬಂಗಾರದ ಗುಪ್ತದ್ವಾರದಿಂದ ತನ್ನ ರಂಗಮಹಾಲನ್ನು ಪ್ರವೇಶಿಸಿದನು.



ಗಳನೇ ತರಂಗ

—:(0):—

# ಗುಪ್ತಮಾರ್ಗ

ದಿವಾಣ-ಈ-ಖಾಸ ದರ್ಬಾರದಿಂದ ಯಾವಾಗ ಮಯೂಖನು ತನ್ನ ಮನೆಯ ಕಡೆಗೆ ತಿರುಗಿದನೋ ಆಗ ಕತ್ತಲೆಯೊಳಗಿದ್ದ ಒಂದು ವ್ಯಕ್ತಿಯು ಇವನ ಹತ್ತರ ಬಂದು ಇವನ ಮೂಗಿಗೇನೋ ಹಿಡಿಯಿತು. ಆ ವಾಸನೆಯ ಮೂಲಕ ಮಯೂಖನು ಚೇತನಾವಿಹೀನನಾಗಿ ಒಮ್ಮೆಲೆ ನೆಲಕ್ಕೆ ಬಿದ್ದನು! ಕೂಡಲೆ ಆ ಗಂಡಸೂ ಒಬ್ಬ ಹೆಂಗಸೂ ಸೇರಿ ಮಯೂಖನ ಆ ಚೇತನಾವಿಹೀನ ದೇಹವನ್ನು ಹೊತ್ತುಕೊಂಡೊಯ್ದು ಒಂದು ಚಿಕ್ಕ ಡೋಣಿಯಲ್ಲಿ ಮಲಗಿಸಿದರು. ಮಯೂಖನು ಬಿದ್ದುಕೊಂಡಿದ್ದ ಸ್ಥಳದಿಂದ ಯಮುನಾನದಿಯು ದೂರದಲ್ಲಿದ್ದರೂ ಆ ರಮಣಿಯು ಸಮೀಪದ ಒಂದು ಗುಪ್ತ ಪಥದಿಂದ ಅವನನ್ನು ಅಷ್ಟು ತೀವ್ರವಾಗಿ ನದಿಗೆ ಸಾಗಿಸಿದ್ದಳು. ಅವರು ಆ ಅವಸರದಲ್ಲಿ ಆ ಗುಪ್ತಪಥದ ಬಾಗಿಲವನ್ನು ಮುಚ್ಚಿಕೊಳ್ಳಲಿಕ್ಕೆ ಮರೆತರು. ಅದರಿಂದ ಅವರನ್ನು ಅನುಸರಿಸಿ ಬರುತ್ತಿದ್ದ ಮತ್ತೊಂದು ವ್ಯಕ್ತಿಯ ಕಡೆಗೆ ಅವರ ಲಕ್ಷ್ಯವಿರಲಿಲ್ಲ. ಆ ಪುಟ್ಟ ನೌಕೆಯು ನದಿಯಲ್ಲಿ ವೇಗದಿಂದ ಹೊರಟು ಸಮೀಪದ ಪಾಣೀಘಟಕಕ್ಕೆ ಹತ್ತಿದ್ದನ್ನು ಕಂಡ ಆ ಮೂರನೇ ವ್ಯಕ್ತಿಯು ಮತ್ತೆ ಆ ಗುಪ್ತ ಪಥದಿಂದಲೇ ಹಿಂದಿರುಗಿ, ಆ ಸಂಗತಿಯನ್ನು ನಬಾಬ ಆಸಫಖಾನರಿಗೆ ತಿಳಿಸಹೊರಟಿತು.

ಮಯೂಖನಿಗೆ ಯಾವಾಗ ಪ್ರಜ್ಞೆಯುಂಟಾಯಿತೋ ಆಗ ಅವನು ಕಣ್ದೆರೆದು ನೋಡುತ್ತಾನೆ, ತಾನು ಒಂದು ಹುಸಿಯಂಥ ಕೇವಲ ಬರೇ ಉದ್ದಕ್ಕಿದ್ದ ಕೋಣೆಯೊಳಗಿನ ಒಂದು ಬಹು ಮೂಲ್ಯವಾದ ಮೆತ್ತನ್ನ ಹಾಸಿಗೆಯ ಮೇಲೆ ಪವಡಿಸಿರುವೆನೆಂಬದು ಅವನಿಗೆ ಗೋಚರವಾಯಿತು. ಆ ಕೋಣೆಯು ಎರಡು ಮೊಳಕ್ಕಿಂತ ಹೆಚ್ಚು ಅಗಲವಿರಲಿಲ್ಲ; ಆದರೆ ಅದರ ಉದ್ದಳತೆಯು ಮಾತ್ರ ಲೆಕ್ಕಹಾಕಲು ಅಸಾಧ್ಯವಾಗಿತ್ತು. ಆ ಅಪ್ರಶಸ್ತವಾದ ಕೋಣೆಯೊಳಗಿನ ಅಸ್ಪಷ್ಟವಾದ ಬೆಳಕಿನಲ್ಲಿ ಆಗ ಮಯೂಖನಿಗೆ ಅಲ್ಲಿ ಕಾಣಿಸಿದ್ದೇನೆಂದರೆ, ತನ್ನ ತಲೆಗಿಂಬಿನ ಬಳಿಯಲ್ಲಿ ಒಬ್ಬ ಭಯಂಕರ

ಸ್ವರೂಪದ ರಮಣಿಯು ಕುಳಿತಿರುವಳೆಂದು. ಆ ರಮಣಿಗೆ ಮೂಗು ಇರಲಿಲ್ಲೆಂದರೂ ಸಲ್ಲಬಹುದಾಗಿತ್ತು. ಅವಳ ಕಣ್ಣುಗಳು ಅತಿ ಸಣ್ಣವಾಗಿದ್ದು, ಅವು ತೀರ ಒಳಸೇರಿದಂತಾಗಿದ್ದವು. ಅವಳು ಅಸಡ್ಡಾಳಾದ ಹಳದೀ ಮೈಬಣ್ಣದವಳು. ಮಯೂಖನಿಗೆ ಚೇತನೆಯುಂಟಾಗುತ್ತಿರುವದನ್ನು ಕಂಡ ಆ ರಮಣಿಯು ಅವನ ಎದುರಿಗೆ ಬಂದಳು. ಆಗ ಅವಳ ಟೊಂಕದಲ್ಲಿ ನಿಡಿದಾದ ಬಿಚ್ಚುಗತ್ತಿಯು ಜೋತಾಡುತ್ತಿದ್ದದ್ದು ಮಯೂಖನ ದೃಷ್ಟಿಗೆ ಬಿದ್ದಿತು. ಆ ರಮಣಿಯು ತಾರ್ತರೀ ದೇಶದವಳು. ಆಗ ಬೇರೆ ಬೇರೆ ಜಾತಿಯ ತಾರ್ತರೀದೇಶದ ರಮಣಿಯರ ಹೊರತು ಅನ್ಯ ಯಾವ ದೇಶದ ಹೆಂಗಸರನ್ನೂ ಆ ಮೊಗಲ ಬಾದಶಹರ ಅಂತಃಪುರದೊಳಗಿನ ಚಾಕರಿಗೆ ನಿಯಮಿಸುತ್ತಿರಲಿಲ್ಲ. ಮಯೂಖನು ಇತ್ತೀಚೆಗೆ ಕೆಲ ವರ್ಷಗಳಿಂದ ಆ ಆಗ್ರಾಪಟ್ಟಣದಲ್ಲಿ ವಾಸಿಸುತ್ತಿದ್ದದರಿಂದ ಅವನು ತಾರ್ತರೀಜನರನ್ನು ಚೆನ್ನಾಗಿ ಬಲ್ಲವನಾಗಿದ್ದನು. ಅದರಿಂದ ಅವನು ತನ್ನ ಎದುರಿಗೆ ಬಂದಿದ್ದ ಆ ಬಿಚ್ಚುಗತ್ತಿಧರಿಸಿದ್ದ ತಾರ್ತರೀದಾಸಿಯನ್ನು ಕಂಡು ಗದಗದನೆ ನಡುಗಿದನು. ಯಾಕಂದರೆ ತಾರ್ತರರಿಗೆ ಅಸಾಧ್ಯವಾದ ಕಾರ್ಯವಾವುದೂ ಇಲ್ಲೆಂಬದನ್ನು ಅವನು ಈ ಮೊದಲೇ ತಿಳಿದಿದ್ದನು.

ಆ ತಾರ್ತರಿಯು ಮಯೂಖನ ಹತ್ತರಬಂದು:—ಎಚ್ಚತ್ತೆಯಾ? ನಿದ್ರೆಯು ಒಳ್ಳೇ ಗಾಢವಾಗಿ ಹತ್ತಿತ್ತಲ್ಲವೆ? ಸ್ವಲ್ಪ ಮದ್ಯವನ್ನು ಕುಡಿಯುವೆಯಾ? ಎಂದು ಪ್ರಶ್ನೆಮಾಡಿ, ತನ್ನ ಬಗಲೊಳಗಿನ ಮದ್ಯ ತುಂಬಿದ ಒಂದು ನಿಡಿದಾದ ಶೀಸೆಯನ್ನು ತೆಗೆದು ಮುಂದಿಟ್ಟಳು. ಆ ಶೀಸೆಗೆ ತೊಗಲಿನ ಚೀಲದ ಆವರಣವಿದ್ದಿತು. ತಾರ್ತರಿಯು ಮಯೂಖನ ತೀರ ಹತ್ತರ ಕುಳಿತು ಮಾತನಾಡಹತ್ತಿದ್ದರಿಂದ ಅವಳ ಬಾಯ ಸೆರೆಯ ದುರ್ಗಂಧವು ಅವನ ನಾಸಾರಂಧ್ರಗಳನ್ನು ಸೇರಹತ್ತಿತು. ಆ ತಾರ್ತರಿಯು ಎಷ್ಟು ದಿನಗಳಿಗೊಮ್ಮೆ ಮೈತೊಳಕೊಳ್ಳುತ್ತಿದ್ದಳೋ ಅದಾರು ಹೇಳಬೇಕು? ಹಾಗೆ ಅವಳು ತಿಂಗಳಗಟ್ಟಲೆ ಮೈತೊಳಕೊಳ್ಳದ್ದರಿಂದ ಅವಳ ಶರೀರದ ದುರ್ಗಂಧವು ಆ ಸೆರೆಯ ದುರ್ಗಂಧಕ್ಕಿಂತಲೂ ಹೆಚ್ಚಾಗಿತ್ತು. ಆ ಉಭಯ ಪ್ರಕಾರದ ದುರ್ಗಂಧದ ಮೂಲಕ ಮಯೂಖನಿಗೆ ಓಕರಿಕೆ ಬರಹತ್ತಿತು. ಅದರಿಂದ ಅವನು ಕಾರಿಕೊಳ್ಳಲಿಕ್ಕೆಂದು ಬಾಯಿತೆರೆಯಲು, ಇವನಿಗೆ ಸರಾಯಿಯೇ ಬೇಕಾಗಿದೆಯೆಂದು ಭಾವಿಸಿ, ಆ ತಾರ್ತರಿಯು ಆ ಶೀಸೆಯ

ಬೆಣೆಯನ್ನು ತೆರೆದು ಅದನ್ನು ಅವನ ಬಾಯಿಗೆ ಹಚ್ಚಿ ಎತ್ತಿದಳು. ಮಯೂಖನು ಇನ್ನೂ ಪೂರಾ ಎಚ್ಚತ್ತಿರಲಿಲ್ಲ. ಅವನಿನ್ನೂ ಆ ಹಾಸಿಗೆಯ ಮೇಲೆಯೇ ಬಿದ್ದುಕೊಂಡಿದ್ದನು. ಆದರೂ ಅವನು ಆ ತಾರ್ತರಿಯ ಆ ದುರಾಗ್ರಹವನ್ನು ಕಂಡು, ಅವಳ ಕೈಯೊಳಗಿನ ಶೀಸೆಯನ್ನು ಒಂದು ಬದಿಗೆ ದೂಡಿ ಚಟಕ್ಕನೆ ಎದ್ದು ನಿಂತನು!

ಕೂಡಲೆ ಆ ತಾರ್ತರೀ ರಮಣಿಯು ಅವನನ್ನು ಬಿಗಿದಪ್ಪಿಕೊಂಡು ನಿಂತಳು. ಆಗ ಮಯೂಖನು ಆ ತರುಣ ತಾರ್ತರಿಯ ಬಾಹುಪಾಶದಿಂದ ತನ್ನನ್ನು ಬಿಡಿಸಿಕೊಳ್ಳಲಿಕ್ಕೆ ಸಾಕಷ್ಟು ಹೆಣಗಾಡಿದನು; ಆದರೆ ಅದು ಸಾಧ್ಯವಾಗಲಿಲ್ಲ. ಅಷ್ಟರಲ್ಲಿ ಹಿಮ್ಮಗ್ಗಲಿನಲ್ಲಿ ಯಾರ ಕಾಲಸಪ್ಪಳವೋ ಕೇಳಬರಲು, ತಾರ್ತರಿಯು ಅವನನ್ನು ಬಿಟ್ಟುಗೊಟ್ಟಳು. ಆಗ ಮಯೂಖನು ಆ ಕಾಲಸಪ್ಪಳವು ಕೇಳಬರುವ ದಿಕ್ಕಿನ ಕಡೆಗೆ ಹೊರಳಿ ನಿಂತುಕೊಂಡನು. ಅಷ್ಟರಲ್ಲಿ ಇಬ್ಬರು ಸುಂದರ ತರುಣಿಯರು ಬಂದು ಅವನ ಹಾಸಿಗೆಯ ಬದಿಗೆ ನಿಂತಿದ್ದರು. ಅವಳಲ್ಲೊಬ್ಬಳು ಕೇತಕಿಯ ಬಣ್ಣದ ಭರ-ತಾರುಣ್ಯದ ಯುವನಿಯು. ಅವಳು ಒಳ್ಳೇ ಸೌಂದರ್ಯವತಿಯಾಗಿ ತೋರುತ್ತಿದ್ದರೂ ಅವಳ ಉಗ್ರವಾದ ಮುಖಚರ್ಯೆ, ನಸುಗೆಂಪಾದ ಕೂದಲುಗಳು, ಹಳದೀ ಬಣ್ಣದ ಕಣ್ಣುಗಳು ಇದರಿಂದ ಅವಳು ಅಷ್ಟೊಂದು ಮನೋಹರವಾಗಿ ತೋರುತ್ತಿರಲಿಲ್ಲ. ಆ ಯುವನಿಯ ಪಕ್ಕದಲ್ಲಿ ನಿಂತಿದ್ದ ಇನ್ನೊಬ್ಬಳು ಸ್ನಿಗ್ಧಪದ್ಮರಾಗದ ಮೈಬಣ್ಣದಿಂದಲೂ, ಉದ್ದನ್ನ ಅಚ್ಚುಕಪ್ಪಾದ ಕೂದಲುಗಳಿಂದಲೂ, ವಿಶಾಲವಾದ ನೀಲವರ್ಣದ ಕಣ್ಣುಗಳಿಂದಲೂ ನೋಡುವವರ ಮನಸ್ಸನ್ನು ಆಕರ್ಷಿಸಿ ಬಿಡುತ್ತಿದ್ದಳು. ಅವಳ ರೂಪವನ್ನು ಕಂಡು ವಿಸ್ಮಯಗೊಂಡ ಮಯೂಖನಿಗೆ ಇವಳು ತನ್ನ ಪೂರ್ವಪರಿಚಿತಳೆಂದು ಒಮ್ಮಲೆ ಗೊತ್ತಾಯಿತು; ಆದರೆ, ತಾನು ಇವಳನ್ನು ಎಲ್ಲಿ, ಯಾವಾಗ, ಎಂದು ನೋಡಿದ್ದೆನೆಂಬದು ತಿಳಿಯದಾಗಲು, ಅವನು ಆ ಬಗ್ಗೆ ಗೂಢವಾಗಿ ವಿಚಾರಮಾಡಹತ್ತಿದನು.

ಇಷ್ಟರಲ್ಲಿ ವೀಣಾನಿಂದಿತವಾದ ಕಂಠದಿಂದ:—ಶಹಾಜಾದೀ, ಇವನು ನನ್ನನ್ನು ಗುರ್ತಿಸಲೊಲ್ಲನು, ಎಂದು ಆ ರೂಪಶಾಲಿನಿಯು ನುಡಿದು, ತನ್ನ ಕರವಸ್ತ್ರವನ್ನು ತನ್ನ ಕಣ್ಣುಗಳಿಗೆ ಹಚ್ಚಿ ಅಳಹತ್ತಿದಳು.

ಆಗ ಮೊದಲನೇ ತರುಣಿಯು:—ಸರವ್ವೋಯಾರಖಾ, ನೀನು ನಿನ್ನ

ಈ ಲಗ್ನದ ಹೆಂಡತಿಯನ್ನು ಗುರ್ತಿಸುವದಿಲ್ಲವೆ?

ಆ ನುಡಿಯನ್ನು ಕೇಳಿ ಮಯೂಖನ ತಲೆತಿರುಗಹತ್ತಿತು. ಅದರಿಂದ ಆವನಿಗೆ ಒಮ್ಮೆಲೆ ಬವಳಿಬರಲು, ಅವನು ಸಮೀಪದ ಗೋಡೆಗೆ ಆತು ಕ್ಷಣಕಾಲದ ವರೆಗೆ ಕಣ್ಣು ಮುಚ್ಚಿ ನಿಂತುಕೊಂಡನು.

ಆಗ ಆ ಮೊದಲಿನ ತರುಣಿಯು ಪುನಃ:—ನಾನು ಯಾರೆಂಬದನ್ನು ನೀನು ಬಲ್ಲೆಯಾ?

ಆಗ ಮಯೂಖನು ಅಂಜುತ್ತಂಜುತ್ತ:—ಇಲ್ಲ.

"ನನ್ನ ಹೆಸರು ಶಹಾಜಾದೀ-ಜಹಾನಾರಾ ಬೇಗಮ್ಮ."

ಮಯೂಖನು ಮತ್ತಿಷ್ಟು ನಡಗುತ್ತ ಆ ಬಾದಶಾಹೀ ಕುವರಿಯನ್ನು ಅಭಿವಂದಿಸಿದನು.

ಶಹಾಜಾದಿಯು ಮತ್ತೆ ಅನ್ನುತ್ತಾಳೆ:—ನೀನು ಈಗ ಎಲ್ಲಿಗೆ ಬಂದಿರುತ್ತೀಯೆಂಬದನ್ನು ತಿಳಿದಿರುವಿಯೇನು?

ಮಯೂಖ:—ಇಲ್ಲ.

ಶಹಾಜಾದಿ:—ನಿನ್ನನ್ನು ಇಲ್ಲಿಗೆ ಏಕೆ ಕರೆತಂದಿದೆಯೆಂಬದನ್ನಾದರೂ ಬಲ್ಲೆಯಾ?

ಮಯೂಖ:—ಇಲ್ಲ.

ಆಗ ಶಹಾಜಾದಿಯು ತನ್ನ ಪಕ್ಕದಲ್ಲಿ ವಿಷಣ್ಣವದನದಿಂದ ನಿಂತುಕೊಂಡಿರುವ ಆ ರೂಪಶಾಲಿನಿಯಾದ ತರುಣಿಯ ಕಡೆಗೆ ಬೊಟ್ಟುಮಾಡಿ:— "ಇವಳು ಯಾರು?" ಎಂದು ಮಯೂಖನಿಗೆ ಪ್ರಶ್ನೆಮಾಡಿದಳು.

ಮಯೂಖ; —"ಇವಳು ಯಾರೆಂಬದನ್ನು ಹೇಳಲಾರೆನು." ಎಂದು ಮೆಲ್ಲಗೆ ನುಡಿದನು.

ಶಹಾಜಾದಿ:—ನೀನು ಇವಳನ್ನು ಈ ಮೊದಲೆಂದಾದರೂ ನೋಡಿದ್ದೆಯೋ?

ಮಯೂಖ:—ಚೆನ್ನಾಗಿ ನೆನಪಿಲ್ಲ

ಶಹಾಜಾದಿ:—ಸುಳ್ಳಾಡುತ್ತೀಯಾ? ಖೊಜಾ ಇತ್ತ ಬಾ, ಎನಲು,

ಆ ಕೂಡಲೆ ಇಬ್ಬರು ಹಬಸಿ ಹಾಗು ಇಬ್ಬರು ತಾರ್ತರೀ ದಾಸಿಯರು ಸಜ್ಜಾಗಿ ಬಂದು ಮಯೂಖನ ಹಿಂದುಗಡೆ ನಿಂತುಕೊಂಡರು. ಆಗ ಅವನು ಒಮ್ಮೆಲೆ ತನ್ನ ಟೊಂಕಕ್ಕೆ ಕೈಹಾಕಿದನು; ಆದರೆ ಅಲ್ಲಿ ಅವನ ಖಡ್ಗವಿರಲಿಲ್ಲ. ಅಷ್ಟರಲ್ಲಿ ಆ ಹಬಸಿಯರಿಬ್ಬರೂ ಅವನ ಕೈಹಿಡಿದರು.

ನಂತರ ಶಹಾಜಾದಿಯು ಅವನನ್ನು ಕುರಿತು:—ಮತ್ತೆ ನೋಡು, ಈಗಲಾದರೂ ಇವಳನ್ನು ಗುರ್ತಿಸಬಲ್ಲೆಯಾ?

ಮಯೂಖ:—ಇಲ್ಲ.

ಶಹಾಜಾದಿ:—ನಿನ್ನ ಹೆಸರೇನು?

ಮಯೂಖ:—ನನ್ನ ಹೆಸರು ಮಯೂಖನೆಂದು.

ಶಹಾಜಾದಿ:—ಸುಳ್ಳು ನಿನ್ನ ಹೆಸರು ಸರಫ್ರೋಯಾರಖಾನ.

ಮಯೂಖನು ವಿಸ್ಮಯಗೊಂಡು:—ಶಹಾಜಾದಿ, ತಾವು ಯಾವ ಹೆಸರನ್ನು ಉಚ್ಚರಿಸಿದಿರೋ, ಅದನ್ನು ನಾನು ಈ ಮೊದಲಿಂದೂ ಕೇಳಿರುವದಿಲ್ಲ ಸಹ! ನಾನು ಹಿಂದೂಜಾತಿಯವನು. ನನ್ನ ನಿವಾಸಸ್ಥಳವು ಬಂಗಾಲದೇಶವು. ನನ್ನ ಹೆಸರು ಮಯೂಖನೆಂದು. ನನ್ನ ತಂದೆಯ ಹೆಸರು ದೇವೇಂದ್ರನಾರಾಯಣನೆಂದು. ಡೆಪ್ಯುಟಿಅಮಲ್ದಾರ ಆಸದಖಾ, ನವಾಬ ಶಹಾನಓಯಾಜಖಾ ಮುಂತಾದ ಇಲ್ಲಿಯಅಮೀರ ಉಮರಾವರು ನನ್ನನ್ನು ಗುರ್ತಿಸುತ್ತಾರೆ.

ಆಗ ಆ ರೂಪಶಾಲಿನಿಯಾದ ಹೆಣ್ಣುಮಗಳು ಶಹಾಜಾದಿಯ ಕಿವಿಯಲ್ಲಿ ಏನೇನೋ ಹೇಳಿ, ನಂತರ:—ಬೇಗಮಸಾಹೇಬ, ಇವನಿಗೆ ಹುಚ್ಚು ಹಿಡಿದಂದಿನಿಂದ ಇವನು ಹೀಗೆಯೇ ಅನ್ನುತ್ತಿರುತ್ತಾನೆ. ಬಂಗಾಲ ದೇಶದೊಳಗಿನ ಸಪ್ತಗ್ರಾಮದಲ್ಲಿ ಇವನು ನಮ್ಮ ಸಾಕುತಂದೆಯಾದ ಶಹಾನಓಯಾಜಖಾನರವರ ಎದುರಿಗೆ ಹೀಗೆಯೇ ಹೇಳಿದ್ದನು. ಬೇಗಮಸಾಹೇಬರೇ, ನನ್ನ ದುರ್ದೈವವಲ್ಲದೆ ಮತ್ತೇನು! ನನ್ನ ಹಣೇಬರಹಕ್ಕೆ ಯಾರೇನು ಮಾಡುವರು? ಎಂದು ಮತ್ತೆ ಮುಳು ಮುಳು ಎಂದು ಅಳಹತ್ತಿದಳು. ಆಗ ಶಹಾಜಾದಿಯು ಅವಳನ್ನು ಆಲಿಂಗಿಸಿ ಅವಳ ದುಃಖವನ್ನು ಶಮನಗೊಳಿಸುವದಕ್ಕಾಗಿ:—ಗುಲ್‌ರುಖ, ನೀನು ಅಳುತ್ತಿರುವದೇಕೆ? ಇನ್ನೆರಡು ದಿನಗಳಲ್ಲೇ ನಾನು ಈ ಖಾನಸಾಹೇಬರ ಹುಚ್ಚನ್ನು ಇಳಿಸಿಬಿಡುತ್ತೇನೆ. ಸರಫ್ರಾಯಾರಖಾನ, ನೀನು ಹಿಂದುವಲ್ಲ; ಮುಸಲ್ಮಾನನು. ನಿನ್ನ ಹೆಸರು ಮಯೂಖನಲ್ಲ; ಸರಫ್ರೋಯಾರಖಾನನೆಂದು ನೀನು ಈ ಬೀಬಿಯ ಗಂಡನು.

ಮಯೂಖ:—ಬೇಗಮಸಾಹೇಬ, ನಾನು ಆಗಲೇ ಹೇಳಿದ್ದರಲ್ಲಿ ಒಂದಕ್ಷರವೂ ಸುಳ್ಳಾಗಿರುವದಿಲ್ಲ.

ಗುಲ್‌ರುಖಳು ಮತ್ತು ಶಹಾಜಾದಿಯ ಕಿವಿಯಲ್ಲಿ:—ಶಹಾಜಾದಿ, ಇವನು ನಿಜವಾದ ಹುಚ್ಚನಲ್ಲ; ಯಡ್ಡನು. ಆದುದರಿಂದ ಇವನೊಡನೆ ಇನ್ನು ಸುಮ್ಮನೆ ಮಾತು ಬೆಳಿಸಿದರೆ ಪ್ರಯೋಜನವೇನಾಗಬೇಕು?

ಶಹಾಜಾದಿಯು ನಕ್ಕು:—ಇನ್ನು ನಾನಿವನ ಕೂಡ ಮಾತು ಬೆಳಿಸುವದಿಲ್ಲ. ಇವನು ನನ್ನ ಅಪ್ಪಣೆಯಂತೆ ವರ್ತಿಸದಿದ್ದರೆ, ಅದನ್ನು ಇವನಿಗೆ ನನ್ನ ಸೇವಕರಿಂದ ಚೆನ್ನಾಗಿ ತಿಳಿಸಿಕೊಡುತ್ತೇನೆ.

ಶಹಾಜಾದಿಯ ಆ ಬಗೆಯ ಕಠೋರವರ್ತನವು ಗುಲ್‌ರುಖಳ ಮನಸ್ಸಿಗೆ ಬರಲಿಲ್ಲ ಆದ್ದರಿಂದ ಅವಳು ಮತ್ತೆ ಶಹಾಜಾದಿಯನ್ನು ಕುರಿತು:—ಬೇಗಮುಸಾಹೇಬ, ಇವನಿಗೆ ಒಮ್ಮೆಲೆ ಹಾಗೆ ಕಠೋರವಾದ ಶಾಸನವನ್ನು ಮಾಡಬೇಡಿರಿ. ಸವಿಮಾತಿನಿಂದಲೇ ಕಾರ್ಯಸಾಧಿಸಿಕೊಳ್ಳುವದು ಉತ್ತಮವಾಗಿರುತ್ತದೆ

ಬಳಿಕ ಶಹಾಜಾದಿಯು:—ಸರವ್ರೋಯಾರಖಾನ, ನೀನು ಹಿಂದುವಾಗಿದ್ದರೂ ಈಗ ಮುಸಲ್ಮಾನನಾಗಲೇಬೇಕು; ಹಾಗು ನನ್ನ ಹುಕುಮಿನಂತೆ ಇಂದು ಈ ಬೀಬಿಯನ್ನು ನೀನು ಲಗ್ನವಾಗಲೇಬೇಕು.

ಆಗ ಮಯೂಖನು ಮೂರು ಮೂರು ಸಾರೆ ನೆಲವನ್ನು ಮುಟ್ಟಿ ಶಹಾಜಾದಿಗೆ ಕುರ್ನಿಸಾತ್ ಮಾಡಿ:—ಬೇಗಮುಸಾಹೇಬರೇ, ತಾವು ದೀನದಯಾಲುಗಳು; ಈ ಮೊಗಲಸಾಮ್ರಾಜ್ಯದ ಶಾಸನಕರ್ತರು; ಆದರೆ ನಾನು ಕೇವಲ ಕ್ಷುದ್ರ ವ್ಯಕ್ತಿಯು. ತಾವು ಒಂದಿಷ್ಟು ಮುನಿದರೂ ನನ್ನನ್ನು ಸಹಜವಾಗಿ ಕೊಲ್ಲಿಸಲಿಕ್ಕೆ ಸಮರ್ಥರಾಗಿರುತ್ತೀರಿ; ಅದು ಹೇಗೆಯೇ ಇರಲಿ; ನಾನು ನಿಜವಾಗಿ ಹಿಂದುವೇ ಆಗಿರುತ್ತೇನೆ ನಾನು ನಮ್ಮ ಧರ್ಮವನ್ನು ತ್ಯಜಿಸಲಿಚ್ಛಿಸುವದಿಲ್ಲ; ಹಾಗು ಈ ಯವನ ತರುಣಿಯನ್ನು ಲಗ್ನವಾಗ ಬಯಸುವದಿಲ್ಲ.

ಶಹಾಜಾದಿಯು ಒಳ್ಳೇಗಂಭೀರಭಾವದಿಂದ:—ತರುಣಾ, ಇನ್ನೊಮ್ಮೆ ಚೆನ್ನಾಗಿ ಆಲೋಚಿಸಿ ಹೇಳು.

ಮಯೂಖ:—ಈ ವಿಷಯದಲ್ಲಿ ಇನ್ನು ನನ್ನ ಭಿನ್ನಾಭಿಪ್ರಾಯವೇ ಇರುವದಿಲ್ಲ.

ಶಹಾಜಾದಿ:—ಖಾನಸಾಹೇಬ, ಶಹಾಜಹಾನ ಬಾದಶಹನ ರಾಜ್ಯದಲ್ಲಿ ಜಾತಿಯ ಮುಸಲ್ಮಾನನು ಹಿಂದೂಧರ್ಮವನ್ನು ಸ್ವೀಕರಿಸಿದರೆ

ಇಲ್ಲವೆ ತಾನು ಹಿಂದುವೆಂದು ಸುಳ್ಳು ಹೇಳಿಕೊಂಡರೆ ಅವನಿಗೆ ಯಾವ ಶಿಕ್ಷೆಯಿದೆಯೆಂಬದನ್ನು ಬಲ್ಲಿಯಾ?

ಶಹಾಜಾದೀ, ನನಗದು ಚೆನ್ನಾಗಿ ಗೊತ್ತಿರುತ್ತದೆ; ಆದರೆ ನಾನು ಮುಸಲ್ಮಾನನೇ ಅಲ್ಲ. ಆದುದರಿಂದ ಕುರಾಣದೊಳಗಿನ ಆ ಶಿಕ್ಷೆಗೆ ನಾನು ಪಾತ್ರನಾಗುವಂತಿಲ್ಲ.

ನಿನ್ನೀ ಕೃತಿಯಿಂದ ನೀನು ಶೂಲದಂಡಣೆಗೆ ಪಾತ್ರನಾಗುತ್ತೀ.

ತಮ್ಮ ಇಚ್ಛೆಯೇ ಹಾಗಿದ್ದರೆ, ನಾನು ಆದಕ್ಕೆ ಸಾನಂದದಿಂದ ಒಪ್ಪುತ್ತೇನೆ.

ಹಾಗಾದರೆ ಸಿದ್ಧನಾಗು, ಎಂದು ಶಹಾಜಾದಿಯು ನುಡಿದಳು ಮಾತ್ರ. ಕೂಡಲೆ ಆ ಇಬ್ಬರು ಖೊಜ್ಜೇರು ಬಂದು ಮಯೂಖನ ಕಣ್ಣುಗಳನ್ನು ಕಟ್ಟಿ ಅವನನ್ನು ತಮ್ಮ ಹೆಗಲ ಮೇಲೆ ಹೊತ್ತುಕೊಂಡು ಅಲ್ಲಿಂದ ಬೇರೆ ಕಡೆಗೆ ನಡೆದರು. ಆ ಕೋಣೆಯಿಂದ ಹೊರಹೊಂಡುವಾಗ ಗುಲ್‌ರುಖಳು ಶಹಾಜಾದಿಯನ್ನು ಕುರಿತು:—ಶಹಾಜಾದೀ, ಇವನನ್ನು ಕೊಲ್ಲಿಸುವದಿಲ್ಲವಷ್ಟೇ! ಎಂದೆಂಬ ಶಬ್ದಗಳು ಮಯೂಖನಿಗೆ ಕೇಳಿಸಿದವು.

ಮಯೂಖನನ್ನು ಅಲ್ಲಿಂದ ಒಯ್ದ ಬಳಿಕ ಶಹಾಜಾದಿಯು ಆ ಕೋಣೆಯಿಂದ ಹೊರಟಳು ಯಾವ ಸ್ಥಳದಲ್ಲಿ ಮಯೂಖನನ್ನು ಈ ಮೊದಲು ಮಲಗಿಸಿದ್ದರೋ ಅದು ಯಾವುದೊಂದು ಕೋಣೆಯಾಗಿರಲಿಲ್ಲ. ಆಗ್ರಾ ದುರ್ಗದ ಅಂತಃಪುರದೊಳಗಿನ ವಿಶಾಲವಾದ ಗೋಡೆಗಳ ಮಧ್ಯದಲ್ಲಿಯ ಒಂದು ಗುಪ್ತ ಮಾರ್ಗವಾಗಿತ್ತು. ಶಹಾನಾರಾಬೇಗಮಳು ಅಲ್ಲಿಂದ ಹೊರಡಲು,ಗುಲ್‌ರುಖಳೂ ಅವಳನ್ನು ಅನುಸರಿಸಿ ನಡೆದಳು. ಆದರೆ ಇಷ್ಟರಲ್ಲಿ ಈ ಮೊದಲಿಗೆ ಮಯೂಖನ ತಲೆಗಿಂಬಿನ ಬಳಿಗೆ ಕುಳಿತಿದ್ದ ಆ ತಾರ್ತರೀ ದಾಸಿಯು ಆಕೆಯನ್ನು ನಡುವೇ ಅಡ್ಡಗಟ್ಟಿ, ಅವಳ ಕೈಹಿಡಿದಳು ಅದನ್ನು ಕಂಡು ಗುಲ್‌ರುಖಳು ವಿಸ್ಮಯಾನ್ವಿತಳಾದಳು; ಹಾಗು ಆ ದಾಸಿಯ ಕಡೆಗೆ ದಿಟ್ಟಿಸಿ ನೋಡಿದಳು. ಆಗ ಆ ದಾಸಿಯು:—ಬೇಗಮಸಾಹೇಬ, ತಾವು ನನ್ನದೊಂದು ಮಾತನ್ನು ನಡಿಸುವಿರಾ?

ಗುಲ್‌ರುಖಳು ಅವಳಿಂದ ತನ್ನ ಕೈಯನ್ನು ಬಿಡಿಸಿಕೊಳ್ಳುತ್ತ:— ಅದೇನದು?

ನಡಿಸುತ್ತೇನೆಂದು ಮೊದಲು ವಚನಕೊಡಿರಿ; ಅಂದರೆ ಹೇಳುತ್ತೇನೆ.

ಏನೂ ತಿಳಿಯದೆ ಅದೇನೆಂದು ವಚನಕೊಡುವದೇ?

ಬೇಗಮ್, ನೀನು ಈ ನಿನ್ನ ಗಂಡನನ್ನು ಬಿಟ್ಟುಬಿಡು.

ಅದೇಕೆಂಬದನ್ನು ಹೇಳು, ಕೇಳುವಾ.

ಇಂಥ ಮುತ್ಸದ್ಯಾಳ ಗಂಡನೊಡನೆ ನೀನು ಬಾಳುವೆ ಮಾಡಲಾರೆ.

ಅವನು ಹೇಗೆಯೇ ಇರಲಿ, ಆ ಸಂಗತಿಯು ನಿನಗೇತಕ್ಕೆ ಸಟವೀ?

ನಾಲಿಗೆಯನ್ನು ತುಸ ಬಿಗಿಹಿಡಿದು ಮಾತನಾಡು. ಬೇಗಮ್, ನಾನು ಜೀವಂತಳಾಗಿರುವವರೆಗೆ ನೀನು ಆತನಿಂದ ಭೋಗಸಂತುಷ್ಟಿಯನ್ನು ಹೊಂದಲಾರೆ.

ನಿನಗೆ ಆ ಉಸಾಬರಿಯೇತಕ್ಕೆ ಮುಂಡೆ? ನಿನ್ನನ್ನು ನಾಯಿಗೇಂದ ಹರಿಸಿ ತಿನ್ನಹಚ್ಚೇನು.

ನೀನು ಇಲ್ಲಿಂದ ಮರಳಿ ಹೋದರೆ ತಾನೆ ಉಳಿದ ವಿಚಾರಗಳು? ಎಂದು ಅಂದವಳೇ, ಆ ತಾರ್ತರೀದಾಸಿಯು ತನ್ನ ಟೊಂಕದೊಳಗಿನ ತೀಕ್ಷ್ಣ ಧಾರೆಯ ಚೆಪಗೊಡ್ಲಿಯನ್ನು ತೆಗೆದು, ಕೆರಳಿದ ಹೆಣ್ಣುಹುಲಿಯಂತೆ ಗುಲ್ ರುಖಬೇಗಮಳನ್ನು ಆಕ್ರಮಿಸಿದಳು. ಗುಲ್‌ರುಖಳು ಶಸ್ತ್ರಾಸ್ತ್ರವಿಹೀನಳು. ಆದರಿಂದ ತಾರ್ತರೀದಾಸೆಯಿಂದ ಆತ್ಮರಕ್ಷಣೆಯನ್ನು ಮಾಡಿಕೊಳ್ಳಲಿಕ್ಕೆ ಅಸಮರ್ಥಳಾದಳು ಆ ತಾರ್ತರಿಯು ಎಡಗೈಯಿಂದ ಅವಳ ಕೂದಲುಗಳನ್ನು ಜಗ್ಗಿಹಿಡಿದು, ತನ್ನ ಹದನಾದ ಕೊಡ್ಲಿಯನ್ನು ಬಲಗೈಯಿಂದ ಒಳ್ಳೇ ಕಸುವಿನಿಂದ ಎತ್ತಿ, ಇನ್ನು ಅವಳ ಶಿರವನ್ನು ಛೇದಿಸತಕ್ಕವಳು. ತಾರ್ತರೀದಾಸಿಯು ತನ್ನನ್ನು ಹೀಗೆ ಆಕಸ್ಮಿಕವಾಗಿ ಆಕ್ರಮಿಸಲು, ಹಾಹಾರಿದ ಗುಲ್‌ರುಖಳು ಗಟ್ಟಿ ಗಟ್ಟಿಯಾಗಿ ಚೀರತೊಡಗಿದಳು. ಆದರೆ ಆಗ್ರಾದುರ್ಗದ ಆ ಗೋಡೆಗಳು ಒಳ್ಳೇ ಕೌಶಲ್ಯದಿಂದ ಕಟ್ಟಲ್ಪಟ್ಟದ್ದರಿಂದ, ಆ ಗುಪ್ತಮಾರ್ಗದಲ್ಲಿ ತುಬಾಕಿ-ತೋಫುಗಳನ್ನು ಹಾರಿಸಿದರೂ ಅವುಗಳ ಸಪ್ಪಳವು ಅನ್ಯತ್ರದಲ್ಲೆಲ್ಲಿಯೂ ಕೇಳುವಂತಿರಲಿಲ್ಲ ಆದರಿಂದ ಗುಲ್‌ರುಖಳು ಎಷ್ಟು ಚೀತ್ಕಾರಮಾಡಿಕೊಂಡರೂ ಆ ದನಿಯನ್ನು ಕೇಳಿ ಅಲ್ಲಿಗೆ ಯಾರೂ ಬರಲಿಲ್ಲ.

ಆ ತಾರ್ತರಿಯು ಎತ್ತಿದ್ದ ಆ ಕೊಡ್ಲಿಯು ಇನ್ನೊಂದು ಅರೆನಿಮಿಷದಲ್ಲಿ ಗುಲ್‌ರುಖಳ ರುಂಡವನ್ನು ದಿಂಡದಿಂದ ವಿಂಗಡಿಸತಕ್ಕದ್ದು. ಅಷ್ಟರಲ್ಲಿ ಹಿಂದಿನಿಂದ ಬಂದ ಯಾರೋ ಆ ಕೊಡ್ಲಿಯನ್ನು ತಾರ್ತರಿಯ ಆ ಎತ್ತಿದ ಕೈಯೊಳಗಿಂದ ಒಮ್ಮೆಲೆ ಕಸಕೊಂಡರು; ಹಾಗು ಉದ್ವಾಮಳಾದ ಆ

ತಾರ್ತರೀದಾಸಿಯನ್ನು ಅಲ್ಲಿಂದ ಹತ್ತೆಂಟು ಮೊಳ ದೂರ ಹೋಗಿ ಬೀಳುವ ಹಾಗೆ ಎತ್ತಿ ಒಗೆದರು. ಗುಲ್‌ರುಖಳು ಆಗ ಮತ್ತಿಷ್ಟು ಭಯಚಕಿತ ಳಾಗಿ ನೋಡುತ್ತಾಳೆ, ಆ ತಾರ್ತರಿಯನ್ನು ಹಾಗೆ ಎತ್ತಿ ಬಿಸುಟಿದ ಒಬ್ಬ ಪುಷ್ಟಕಾಯದ ಕಳ್ಳನು ಅವಳನ್ನಲ್ಲಿ ಹಗ್ಗಗಳಿಂದ ಬಿಗಿಯುತ್ತಿದ್ದನು. ತಾರ್ತರಿಯನ್ನು ಚೆನ್ನಾಗಿ ಹೆಡಮುರಿಗೆಬಿಗಿದ ನಂತರ ಆ ವ್ಯಕ್ತಿಯು ಗಾಬ ರಿಗೊಂಡು ಹುಚ್ಚಿಯಂತೆ ಒತ್ತಟ್ಟಿಗೆ ನಿಂತುಕೊಂಡಿದ್ದ ಗುಲ್‌ರುಖಳ ಬಳಿಗೆ ಬಂದು, ಇಲ್ಲಿಂದ ಹೊರಟುಹೋಗೆಂದು ಅವಳಿಗೆ ಸಂಜ್ಞೆಮಾಡಿದನು. ಇವನೊಬ್ಬ ತನ್ನ ಭಾಗದದೇವತೆಯೇ ಬಂದಿರುವನೆಂದು ಭಾವಿಸಿದ ಆಕೆಯು ಪ್ರತಿಮಾತನಾಡದೆ, ಅಲ್ಲಿಂದ ಊರ್ಧ್ವಶ್ವಾಸದಿಂದ ಓಡಿ ಹೋದಳು.

ತಾಸರ್ಧತಾಸಿನ ನಂತರ ಶಸ್ತ್ರಾಸ್ತ್ರಧಾರಿಗಳಾದ ನೂರಾರು ಜನ ಖೊಜ್ಜೀರೂ ತಾರ್ತರೀ ಪಹರೆಯವರೂ ಬಂದು ಆ ಗುಪ್ತ ಪಥವನ್ನು ಮೂರು ಮೂರು ಸಾರೆ ಶೋಧಿಸಿದರು; ಆದರೆ ಆ ಸ್ಥಳದಲ್ಲಿ ಹೆಡಮುರಿಗೆ ಬಿಗಿಸಿಕೊಂಡು ಬದ್ದಿದ್ದ ಆ ತಾರ್ತರೀದಾಸಿಯೊಬ್ಬಳು ಮಾತ್ರ ಅವರಿಗೆ ದೊರತಳೇ ವಿನಃ, ಗುಲ್‌ರುಖಳನ್ನು ಆ ತಾರ್ತರಿಯಿಂದ ಮುಕ್ತಗೊಳಿಸಿದ್ದ ಆ ಕಳ್ಳನೇ ಆಗಲಿ, ಮತ್ತೆ ಯಾರೇ ಆಗಲಿ ಅವರಿಗೆ ಅಲ್ಲಿ ಸಿಗಲಿಲ್ಲ,



೧೫ ನೇ ತರಂಗ

—:(0):—

## ಶೋಧ.

ರಾತ್ರಿಯ ಎರಡನೇ ಪ್ರಹರದ ನೌಬತ್ತು ಬಾರಿಸಿದರೂ ಮಯೂಖನು ಮನೆಗೆ ಹಿಂದಿರುಗಿ ಬಾರದ್ದನ್ನು ಕಂಡು ವಿನೋದಿನಿಯು ಅತ್ಯಂತ ಚಿಂತಿತಳಾದಳು. ತರ್ಕರತ್ನಭಟ್ಟಾಚಾರ್ಯನಿಗೆ ಎಷ್ಟೋ ದಿನ ಗಳನಂತರ ಮಯೂಖನ ಪತ್ತೆಹತ್ತಿರಲು, ಅವನು ಮಯೂಖನೊಡನೆ ತಮ್ಮ ದೇಶಕ್ಕೆ ಯಾವಾಗ ಹೊರಡಬೇಕೆಂಬ ಬಗ್ಗೆಯೂ, ಲಲಿತೆಯ ಲಗ್ನ ಬಾರಬಕ್ಕಪರಗಣೆಗಳ ಸನದು ದೊರಕಿಸುವ ಪ್ರಯತ್ನ ಮುಂತಾದವುಗಳ

ಬಗ್ಗೆಯೂ ತನ್ನ ಮನಸ್ಸಿನಲ್ಲಿ ಬಹಳ ಹೊತ್ತಿನ ವರಗೆ ಆಲೋಚಿಸಿದನು. ಹೀಗೆ ಅವನ ಆಲೋಚನೆಯಲ್ಲಿ ರಾತ್ರಿಯ ದ್ವಿತೀಯ ಯಾಮವು ಕೂಡ ಸಂದುಹೋಯಿತು. ದಿಲ್ಲೀದ್ವಾರದಲ್ಲಿ ಮಧ್ಯರಾತ್ರಿಯ ನೌಬತ್ತು ಮೊಳಗ ಲಾರಂಭಿಸಿತು. ಆಗ ವಿನೋದಿನಿಯಿಂದ ತನ್ನ ಹಾಸಿಗೆಯ ಮೇಲೆ ಸುಮ್ಮನೆ ಬಿದ್ದುಕೊಳ್ಳುವದಾಗದ್ದರಿಂದ ಎದ್ದು, ಅವಳು ಆ ಮನೆಯಲ್ಲೇ ಅತ್ತಿತ್ತ ಅಡ್ಡಾಡಹತ್ತಿದಳು. ಅವಳ ಆಚಿಂತಿತಾವಸ್ಥೆಯನ್ನು ಕಂಡು ತರ್ಕರತ್ನನು:— ಅಮ್ಮಾ, ಹೀಗೇಕೆ ಚಿಂತಿತಳಾಗಿ ಅಡ್ಡಾಡುತ್ತಿರುವೆ? ಎಂದು ಕೇಳಿದನು.

ಅದಕ್ಕೆ ವಿನೋದಿನಿಯು:—ಆಚಾರ್ಯರೇ, ಈಗ ಇಷ್ಟು ರಾತ್ರಿ ಯಾದರೂ ನಮ್ಮ ಮಯೂಖನು ಏಕೆ ಬಂದಿರಲಿಕ್ಕಿಲ್ಲ?

ಈಗ ಎಷ್ಟು ತಾಸು ರಾತ್ರಿಯಾಗಿದೆ?

ಎರಡನೇ ಪ್ರಹರವು ಸಂದು ಹೋಗಿ, ಮೂರನೇ ಪ್ರಹರಕ್ಕೆ ಪ್ರಾರಂಭವಾಗಿರುತ್ತದೆ.

ಇಷ್ಟು ಅಪರಾತ್ರಿಯ ವರೆಗೆ ಬಾದಶಹನು ದರ್ಬಾರದಲ್ಲೆಂದಿಗೂ ಇರಲಾರನು ನಾನು ಅತ್ತ ಹೋಗಿ ಮಯೂಖನನ್ನು ನೋಡಿಕೊಂಡು ಬರುತ್ತೇನೆ, ಹೀಗೆಂದು ನುಡಿದು ಆ ತರ್ಕರತ್ನಭಟ್ಟಾಚಾರ್ಯನು ವಿನೋ ದಿನಿಯ ಆ ವಾಸಸ್ಥಳದಿಂದ ಹೊರಟು, ಆಗ್ರಾದುರ್ಗದ ದಿಲ್ಲೀದ್ವಾರದ ವರೆಗೆ ಬಂದನು ಅಲ್ಲಿಯ ವರೆಗೂ ಯಾವ ಮನುಷ್ಯನನ್ನೂ ಅವನು ಕಾಣ ದಾಗಲು, ಅವನು ನೆಟ್ಟಗೆ ಅಮರಸಿಂಹದ್ವಾರದ ಕಡೆಗೆ ಸಾಗಿದನು. ಆಗ ಆ ಆಗ್ರಾದುರ್ಗದ ನಾಲ್ಕೂ ಕಡೆಗಳಲ್ಲೂ ಜನಶೂನ್ಯವು. ಪ್ರತಿಯೊಬ್ಬ ಮನಸಬದಾರನ ಕಚೇರಿಯಲ್ಲಿ ಒಬ್ಬೊಬ್ಬ ಪಹರೆಯವನಿದ್ದು, ಅವನು ಆ ಮಧ್ಯರಾತ್ರಿಯಲ್ಲಿ ಸುಷುಪ್ತಾವಸ್ಥೆಯ ಮೂಲಕ ತನ್ನ ಸ್ವೀಕೃತಕಾರ್ಯಕ್ಕೆ ತುಸ ವಿಶ್ರಾಂತಿಯನ್ನು ಕೊಟ್ಟಿದ್ದನು. ಅದರಿಂದ ಆ ಅಮರಸಿಂಹದ್ವಾರದ ಲ್ಲಿಯೂ ಯಾರೊಬ್ಬರ ಸುಳುವೂ ಇರಲಿಲ್ಲ. ಅದನ್ನು ಕಂಡು ತರ್ಕರತ್ನನು ವಿಫಲಮನಸ್ಕನಾಗಿ ಮನೆಗೆಹಿಂದಿರುಗಿದನು ವಿನೋದಿನಿಯೂ, ಲಲಿತೆಯೂ ಇವನ ಮಾರ್ಗನಿರೀಕ್ಷಣೆಮಾಡುತ್ತ ಮನೆಯಲ್ಲಿ ಎಚ್ಚತ್ತಿದ್ದರು. ಆಗ ತರ್ಕ ರತ್ನನೊಬ್ಬನೇ ಮನೆಗೆ ಹಿಂದಿರುಗಿ ಬಂದುದನ್ನು ಕಂಡ ಲಲಿತೆಯ ನಯನ ಗಳಿಂದ ಟಪ ಟಪನೆ ಅಶ್ರುಗಳುದುರಹತ್ತಿದವು. ಅದನ್ನು ಕಂಡು ಆ ಆಚಾರ್ಯನ ಅಂತಃಕರಣವು ಕಳವಳಗೊಂಡಿತು! ಕೂಡಲೆ ಅವನು

ವಿನೋದಿನಿಯನ್ನು ಕುರಿತು ಮತ್ತೆ:—ಅಮ್ಮಾ, ನೀವು ಹೀಗೆ ಚಿಂತಾವ್ಯಾಕುಲರಾಗಬೇಡಿರಿ. ನಾನು ಈಗಲೇ ನವಾಬ ಯಾಮೀನ ಉದ್ದೌಲಾನ ಬಳಿಗೆ ಹೋಗುತ್ತೇನೆ; ಹಾಗು ಅವನಿಗೆ ಸಂಗತಿಯನ್ನೆಲ್ಲ ತಿಳಿಸಿ ಅವನಿಂದ ಈ ಆಗ್ರಾದ ಕೊತವಾಲನಿಗೆ ಹುಕುಮು ಮಾಡಿಸುತ್ತೇನೆ. ಕೊತವಾಲನು ಕ್ಷಿಪ್ರದಲ್ಲಿಯೇ ನಮ್ಮ ಮಯೂಖನ ಪತ್ತೆ ಹಚ್ಚದೆ ಇರಲಾರನು.

ಆಚಾರ್ಯರೇ, ನಿಮಗೆ ಯಾವದು ಸಯುಕ್ತಿಕವಾಗಿ ತೋರುವದೋ ಅದರಂತೆ ಮಾಡಿರಿ. ಈಗ ಅಪರಾತ್ರಿಯಾಗಿರದಿದ್ದರೆ ನಾನೇ ಬಾದಶಹ ಬೇಗಮಳ ಬಳಿಗೆ ಹೋಗಿ ಅವಳಿಂದ ಮಯೂಖನ ಶೋಧವನ್ನು ಮಾಡಿಸುತ್ತಿದ್ದೆನು.

ಬಳಿಕ ತರ್ಕರತ್ನನು ಅವರಿಗೆ ನಿಶ್ಚಿಂತೆಯಿಂದ ಮನೆಯಲ್ಲಿರಲಿಕ್ಕೆ ತಿಳಿಸಿ, ತಾನು ನವಾಬ ಅಸಫಖಾನನ ಮಹಲಿಗೆ ನಡೆತಂದನು. ತರ್ಕರತ್ನಭಟ್ಟಾಚಾರ್ಯನು ಅಸದಖಾನನ ಸೂಚನೆಯ ಮೇರೆಗೆ ಸಪ್ತಗ್ರಾಮದಿಂದ ಮಯೂಖನ ಶೋಧಕ್ಕಾಗಿ ನವಾಬ ಶಹಾನಬಿಯಾಜಖಾನನೊಡನೆ ಆಗ್ರಾಕ್ಕೆ ಯಾವಾಗ ಬಂದಿದ್ದನೋ ಆಗಲೆ ಅವನಿಗೆ ನವಾಬ ಅಸಫಖಾನನ ಪರಿಚಯವುಂಟಾಗಿದ್ದಿತು. ಬುದ್ಧಿವಂತನಾದ ಆ ಆಸಫಖಾನನು ಈ ಆಚಾರ್ಯರ ತೀಕ್ಷ್ಣ ಬುದ್ಧಿಗೆ ತಲೆದೂಗಿ ಇವರನ್ನು ಯಾವದೊಂದು ರಾಜಕಾರ್ಯದಲ್ಲಿ ತೊಡಗಿಸಬೇಕೆಂದು ಬಯಸಿದನು; ಆದರೆ ತಮ್ಮ ರಾಜಪುತ್ರನಾದ ಮಯೂಖನ ಸಂಧಾನವು ಅದುವರೆಗೂ ಹತ್ತದೆಯಿದ್ದ ಮೂಲಕ, ಆ ಆಚಾರ್ಯನ ಮನಸ್ಸು ವಿಚಲಿತವಾಗಿತ್ತು. ಅದರಿಂದ ಅವನು ಆಗ ನವಾಬನ ಆ ಬಿನ್ನಹಕ್ಕೆ ಒಪ್ಪದೆ, ತೀರ್ಥ-ಯಾತ್ರಾಟನೆಗಾಗಿ ಆಗ್ರಾದಿಂದ ಹೊರಟು ಹೋಗಿದ್ದನು.

ತರ್ಕರತ್ನನು ಯಾಮೀನ ಉದ್ದೌಲಾನ ಮಹಲನ್ನು ಪ್ರವೇಶಿಸಿದಾಗ ಆ ವೃದ್ಧ ನವಾಬನು ಇನ್ನೂ ತನ್ನ ಅಂತಃಪುರಕ್ಕೆ ಹೋಗಿರಲಿಲ್ಲ ಎಷ್ಟೋ ಜನ ಪಹರೆಯವರಿಗೂ ಕರ್ಮಚಾರಿಗಳಿಗೂ ತನ್ನ ಗುರುತನ್ನು ಹೇಳುತ್ತ ಹೇಳುತ್ತ ಕಡೆಗೊಮ್ಮೆ ಆ ತರ್ಕರತ್ನನು ಬಾದಶಹನ ಮಾವನಾದ ಆ ಯಾಮೀನ ಉದ್ದೌಲಾನ ಎದುರಿಗೆ ಹೋಗಿ ನಿಂತುಕೊಂಡನು. ಒಬ್ಬ ಖೋಜಾನು ಆ ಭಟ್ಟಾಚಾರ್ಯನನ್ನು ಚೆನ್ನಾಗಿ ಗುರ್ತಿಸುತ್ತಿದ್ದನಾದ್ದರಿಂದ ಅವನು ನಡುವಿನ ಎಲ್ಲ ಪ್ರಹರಿಗಳಿಗೆ ಹೇಳಿ ಅವನನ್ನು ಆಸಫಖಾನನ

ಬಳಿಗೆ ನಿರಾತಂಕವಾಗಿ ತಲುಪಿಸಿದ್ದನು. ಆಗ ನವಾಬನು ಯಮುನಾತೀರದ ತನ್ನ ಮಹಡಿಯ ಛಾವಣಿಯಲ್ಲಿ ಕುಳಿತಿದ್ದನು. ಅತ್ಯಂತ ಚಲುವೆಯರಾದ ತರುಣ ನರ್ತಕಿಯರು ಆಗ ಅವನೆದುರಿಗೆ ತಮ್ಮ ನೃತ್ಯವನ್ನು ನಡಿಸಿದ್ದರು. ಎಷ್ಟೋ ಜನ ಅಮೀರ-ಉಮರಾವರು ಆ ನಾಚಿನ ಸಮಾರಂಭಕ್ಕೆ ಅಲ್ಲಿಗೆ ಬಂದಿದ್ದರು. ಆಸಫಖಾನನು ತರ್ಕರತ್ನನನ್ನು ದೂರಿನಿಂದ ನೋಡಿದೊಡನೆಯೇ ಗುರ್ತಿಸಿ, ಮೇಲಕ್ಕೆ ಕರೆದು ಸಮ್ಮಾನದಿಂದ ಕುಳ್ಳಿರಿಸಿಕೊಂಡನು. ಆಗ ಭಟ್ಟಾಚಾರ್ಯನು ತಾನು ಬಂದ ಕಾರ್ಯವನ್ನು ಸಂಕ್ಷೇಪವಾಗಿ ಅರುಹಲು, ಅದನ್ನು ತಿಳಿದ ನವಾಬನು ಆಗಲೇ ಅಲ್ಲಿಂದ ಹೊರಹೊರಟನು ಕೂಡಲೆ ಆ ಸಮಾರಂಭವು ಅಲ್ಲಿಗೇ ನಿಂತುಹೋಯಿತು. ಅಷ್ಟರಲ್ಲಿ ಮೂರನೇ ಪ್ರಹರದ ನೌಬತ್ತುಗಳೂ ಬಾರಿಸಿದವು. ನಬಾಬನು ಅಲ್ಲಿಂದ ಆಚಾರ್ಯರೊಡನೆ ಬೇರೆ ದಿವಾಣಖಾನೆಗೆ ಹೋಗಿ, ಮಾತಾಡುತ್ತ ಕುಳಿತನು.

ತರ್ಕರತ್ನಭಟ್ಟಾಚಾರ್ಯನು ಮಯೂಖನು ಆಗ್ರಾಕ್ಕೆ ಬಂದ, ವಿನೋದಿನಿ ವೈಷ್ಣವಿಗೆ ಬಾದಶಹ ಬೇಗಮಳ ಪರಿಚಯವಾದ ಹಾಗು ಅಂದು ಮಯೂಖನು ದಿವಾಣ-ಈ-ಖಾಸಕ್ಕೆ ತೆರಳಿದ ಮುಂತಾದ ಸಂಗತಿಗಳನ್ನು ನವಾಬನಿಗೆ ವಿಶದವಾಗಿ ತಿಳಿಸಿದನು; ಹಾಗು ನವಾಬಸಾಹೇಬ, ನಾನು ವಿದೇಶಗಳಲ್ಲಿ ಸಂಚರಿಸಿ ನಮ್ಮ ಮಯೂಖನನ್ನು ಹುಡುಕುತ್ತಿರುವಾಗ ಅವನು ಇಲ್ಲಿಯೇ-ಈ ಆಗ್ರಾ ಪಟ್ಟಣದಲ್ಲಿಯೇ ವಾಸಿಸಿದ್ದನು. ನಾನು ಯಾವಾಗ ಹತಾಶನಾಗಿ ಈ ಆಗ್ರಾ ಪಟ್ಟಣವನ್ನು ತ್ಯಜಿಸಿದೆನೋ, ಆಗಲೂ ಅವನು ಆಗ್ರಾದಲ್ಲಿಯೇ ಇದ್ದನಂತೆ! ಇಷ್ಟು ದಿನಗಳ ನಂತರ ನಾನು ಆತನ ಸಂಧಾನವನ್ನೇನೋ ಹಚ್ಚಿದೆನು; ಆದರೆ ಇಂದು ಅವನು ಹೀಗೆ ಆಕಸ್ಮಿಕವಾಗಿ ಮರೆಯಾದ್ದರಿಂದ ಅವನ ದರ್ಶನಕ್ಕಾಗಿ ಹಾತೊರೆಯುತ್ತಿರುವೆನು; ಎಂದು ಹೇಳಿದನು.

ವಜೀರ ಆಸಫಖಾನನು ತರ್ಕರತ್ನನನ್ನು ಕುರಿತು:—ನೀವು ಚಿಂತಿಸಬೇಡಿರಿ. ನಾನು ಯಾವಾಗ ಆತನನ್ನು ಕಂಡಿರುತ್ತೇನೋ ಆಗ ನಿಮಗೂ ಆತನ ದರ್ಶನವಾಗದೆ ಇರಲಿಕ್ಕಿಲ್ಲ. ನಾನು ಬೇಗನೆ ಆತನ ಪತ್ತೆ ಹಚ್ಚುವೆನು; ಎಂದು ನಿಷ್ಕರ್ಷಪೂರ್ವಕವಾಗಿ ತಿಳಿಸಿದನು.

ನವಾಬಸಾಹೇಬ, ಆತನ ಸಲುವಾಗಿ ಅವನ ಊರವರು ಬಲು

ಯೊಚನೆಗೊಳಗಾಗಿರುತ್ತಾರೆ.

ತಾವು ಅವರನ್ನು ಸಮಾಧಾನ ಪಡಿಸಿರಿ. ಹಾಗೆ ಸುಮ್ಮ-ಸುಮ್ಮನೆ ಚಿಂತೆಮಾಡುವದರಿಂದ ಪ್ರಯೋಜನವಾಗದೆಂಬದನು ಅವರಿಗೆ ಚೆನ್ನಾಗಿ ತಿಳಿಹೇಳಿರಿ. ನಾನು ಆತನ ಸಂಧಾನವನ್ನೇ ನಡಿಸಿರುತ್ತೇನೆ. ಅವನ ಪತ್ತೆಯನ್ನು ಬೇಗನೆ ಹಚ್ಚದೆ ಇರಲಾರೆನು.

ತರ್ಕರತ್ನನು ಅತ್ಯಂತ ಅಧೀರತೆಯಿಂದ:—ನವಾಬಸಾಹೇಬ, ಆ ನಮ್ಮ ಮಯೂಖನು ಯಾವಾಗ ಬರುತ್ತಾನೆ? ನಮಗೆ ಆತನ ದರ್ಶನವು ಯಾವಾಗ ಆಗುತ್ತದೆ?

ಅದನ್ನು ಈಗಲೆ ನಿಷ್ಕರ್ಷವಾಗಿ ತಿಳಿಸಬರುವಂತಿಲ್ಲ ಆದರೂ ಅವನು ತೀವ್ರವೇ ಬಂದಾನು; ಹಾಗು ತೀವ್ರವೇ ನಿಮಗಾತನ ಭೆಟ್ಟಿ ಯಾದೀತು. ತರ್ಕರತ್ನರೇ, ನಿಮ್ಮೊಡನೆ ಬಂದಿದ್ದ ಆ ಸಪ್ತಗ್ರಾಮದ ಫಕೀರನೆಲ್ಲಿರುತ್ತಾನೆ?

ತಾವು ಯಾರ ಬಗ್ಗೆ ವಿಚಾರಿಸುತ್ತಿರುವಿರಿ? ಆ ಚೈತನ್ಯದಾಸ ನನ್ನಲ್ಲವೆ?

ನನಗೆ ಆತನ ಹೆಸರು ನೆನಪಿಲ್ಲ ಪೋರ್ತುಗೀಜಫಿರಂಗಿಗಳು ಹುಗಳಿ ಯಲ್ಲಿ ಯಾವಾತನ ಎಲುವುಗಳನ್ನು ಪುಡಿಪುಡಿ ಮಾಡಿದ್ದರೋ, ಆತನ ವಿಷಯುವಾಗಿಯೇ ನಾನೀಗ ಕೇಳುತ್ತಿರುವದು.

ಆ ಚೈತನ್ಯದಾಸ ಗೋಸಾವಿಯು ಈಗ ಬೃಂದಾವನದಲ್ಲಿರುತ್ತಿದ್ದು, ಭಿಕ್ಷೆಯಿಂದ ಉಪಜೀವಿಸುತ್ತಿರುತ್ತಾನೆ.

ಅಲ್ಲಿ ಯಾರ ಮನೆಯುಲ್ಲಿರುತ್ತಾನೆ?

ಶಚೀನಂದನ ಗೋಸ್ವಾಮಿಯೆಂಬ ಹೆಸರಿನ ಪಂಡಾ ಬ್ರಾಹ್ಮಣನಲ್ಲಿ ವಾಸಿಸುತ್ತಾನೆ.

ಆತನನ್ನು ಇಂದು ಆಗ್ರಾಕ್ಕೆ ಕರೆಯಿಸಬೇಕಾಗಿರುತ್ತದೆ.

ಬಹುಶಃ ಅವನು ಇಲ್ಲಿಗೆ ಬರಲಿಕ್ಕೆ ಒಪ್ಪಲಿಕ್ಕಿಲ್ಲ.

ಬಾದಶಹನ ಅಪ್ಪಣೆಯು ಮೇರೆಗೆ ಅವನನ್ನು ಇಂದು ದಿವಾಣ-ಈ-ಖಾಸ ದರ್ಬಾರಕ್ಕೆ ಹಾಜರಪಡಿಸಲೇಬೇಕಾಗಿದೆ.

ಹಾಗಾದರೆ ಮಥುರೆಯ ಫೌಜದಾರನಿಗೆ ಹುಕುಂ ಮಾಡಿ, ಅವನನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಕಳಿಸಲಿಕ್ಕೆ ತಿಳಿಸಿರಿ. ಅಂದರೆ ಅವನು ಇಲ್ಲಿಗ

ಬಂದಾನು ಪಾಪ! ಆ ಚೈತನ್ಯದಾಸನು ಪೋರ್ತುಗೀಜ ಪಾದ್ರಿಗಳ ಅನುಗ್ರಹದಿಂದ ನಡೆಯಲಾರದವನಾಗಿರುತ್ತಾನೆ!

ಕೂಡಲೆ ವಜೀರನು ಚುಟಕೆಯನ್ನು ಬಡಿದು ಸಂಕೇತ ಮಾಡಲು, ಒಬ್ಬ ಖೊಜ್ಜೇರವನು ಧಾವಿಸುತ್ತ ಅವನೆಡೆಗೆ ಬಂದನು. ಆಗ ಆಸಫಖಾನನು ಅವನಿಗೆ ಖಾಸನವೀಸನನ್ನು ಕರೆಯ ಹೇಳಿದನು. ಅಲ್ಪ ಕ್ಷಣಗಳಲ್ಲಿಯೇ ಖಾಸನೀಸನು ಬರಲು, ವಜೀರನು ಚೈತನ್ಯದಾಸನನ್ನು ಕಳಿಸಿಕೊಡುವ ಸಲುವಾಗಿ ಪತ್ರ ಬರೆದು ಅವನೊಡನೆ ಮಥುರೆಗೆ ಕಳಿಸಿದನು. ಇಷ್ಟಾಗುವಷ್ಟರಲ್ಲಿ ಮೂರನೇಯಾಮದ ನೌಬತ್ತು ಬಾರಿಸಿ ಹೋದ್ದರಿಂದ ತರ್ಕರತ್ನನು ಮನೆಗೆ ಹೋಗುವ ಸಲುವಾಗಿ ವಜೀರನ ಅಪ್ಪಣೆಯನ್ನು ಕೇಳಿದನು ಅಪ್ಪಣೆಕೊಡುವಾಗ ವಜೀರನು:—ನಾಳಿನ ದಿವಾಣ-ಈ-ಆಮ ದರ್ಬಾರದಲ್ಲಿಯೂ, ದಿವಾಣ-ಈ-ಖಾಸ ದರ್ಬಾರದಲ್ಲಿಯೂ, ನೀವು ಹಾಜರಾಗತಕ್ಕದ್ದು, ಎಂದು ಅವನಿಗೆ ಹೇಳಿದನು. ಹಾಗೂ ಇವರನ್ನು ದರ್ಬಾರದಲ್ಲಿ ನಿರಾತಂಕವಾಗಿ ಬಿಡಬಹುದೆಂದು ಖಾಸ ಚೌಕಿಯ ಮನಸಬದಾರನಾದ ತನ್ನ ಮಗ ಶಾಹಿಸ್ತೇಖಾನನಿಗೆ ಅದರಂತೆ ಪತ್ರ ಬರಕೊಟ್ಟನು. ಬಳಿಕ ತರ್ಕರತ್ನನು ವಿನೋದಿನಿಯ ಬಿಡಾರಕ್ಕೆ ಹಿಂದಿರುಗಿದನು.

ತರ್ಕರತ್ನನು ಹೊರಟುಹೋದನಂತರ ವಜೀರನು ಮತ್ತೆ ಚುಟುಕೆಯನ್ನು ಬಡಿದನು. ಕೂಡಲೆ ಮತ್ತೋರ್ವ ಖೊಜ್ಜೆಯು ಲಗುಬಗೆಯಿಂದ ಬಂದು ನಿಂತುಕೊಂಡನು. ಆಗ ವಜೀರನು ಪ್ರಶ್ನೆಮಾಡತ್ತಾನೆ:—ಖಾಟಿಯಾಸ ಅಮಾನತ್ತಖಾನನು ಬಂದನೇ?

ಖೋಜಾ:—ಬಂದಿರುತ್ತಾನೆ.

ವಜೀರ:—ಕರೆ, ಅವನನ್ನಿಲ್ಲಿಗೆ.

ಖೊಜ್ಜೆಯು ಧಾವಿಸುತ್ತ ಹೋಗಿ, ಕೆಲಹೊತ್ತಿನಲ್ಲಿಯೇ ತನ್ನೊಡನೆ ಬೆನ್ನಿನಮೇಲೆ ಕೂನಿದ್ದ ಒಬ್ಬ ಹಬಸಿಯನ್ನು ಕರೆತಂದನು. ಅವರಿಬ್ಬರೂ ಮರಳಿ ಆ ದಿವಾಣಖಾನೆಯನ್ನು ಪ್ರವೇಶಿಸಿದಾಗ ನಬಾಬನು ಚಿಂತಾಕ್ರಾಂತನಾಗಿ ಕೆಳಗೆ ಮೋರೆ ಹಾಕಿಕೊಂಡು ಕುಳಿತಿದ್ದನು. ಎಷ್ಟೋ ಹೊತ್ತಿನವರೆಗೆ ಅವರಿಬ್ಬರು ಖೊಜ್ಜೇರು ಶಿಲಾಮೂರ್ತಿಗಳಂತೆ ತಟಸ್ಥರಾಗಿ ಅಲ್ಲಿ ನಿಂತುಕೊಂಡರು. ಗಳಿಗೆರಡು ಗಳಿಗೆಗಳನಂತರ ವಜೀರನು ಮುಖವನ್ನೆತ್ತಿನೋಡಲು, ಆ ಕೂನುಳ್ಳ ಹಬಸಿಯು ವಜೀರನನ್ನು ಅಭಿ

ವಂದಿಸಿದನು. ಆಗೆ ವಜೀರನು ಅವನನ್ನುದ್ದೇಶಿಸಿ:—ಅಮಾನತ್‌ಖಾನ, ಎಲ್ಲ ಕೆಲಸವನ್ನು ಪೂರೈಸಿ ಬಂದೆಯಾ?

"ಜನಾಬ, ಪೂರೈಸಿಯೇ ಬಂದೆನು.''

ಆ ಬಂಗಾಲೀ ತರುಣನು ಎಲ್ಲಿಗೆ ಹೋದನ ?

ಜನಾಬ, ಅವನು ಪಾಣೀಫಟಕದಿಂದ ರಂಗಮಹಲನ್ನು ಪ್ರವೇಶಿಸಿದನು.

ಹಾಗೆ ಅವನು ಅಲ್ಲಿಗೆ ಹೋದುದನ್ನು ಮತ್ತೆ ಯಾರೂ ನೋಡಲಿಲ್ಲವಷ್ಟೇ?

ಇಲ್ಲ; ಆದರೆ ಆಲಿಂಪನಾ, ಮತ್ತೋರ್ವ ವೃದ್ಧ ಬಂಗಾಲಿಯು, ಇತ್ತ ನದಿಯಲ್ಲಿ ಮುಳುಗಿ, ಪಾಣೀಫಟಕದ ಹತ್ತರ ಎದ್ದು ಅವನೂ ರಂಗೆಮಹಲನ್ನು ಪ್ರವೇಶಿಸಿರುತ್ತಾನೆ.

ಶಾಬಾಸ! ಅವನ ಸಂಗತಿಯನ್ನು ಒಳಗೆ ತಿಳಿಸಿ ಬಂದೆಯಷ್ಟೇ?

ಮೆಹೆದೀಬೀಬಿಯವರಿಗೆ ತಿಳಿಸಿ ಬಂದಿರುತ್ತೇನೆ; ಹಿಲಾಲಖಾನನ ಮುಖಾಂತರ ರಂಗಮಹಲಿನ ಬಕ್ಷಿಯಾಗಿರುವ ಹಿಮ್ಮತಖಾನ ಯಾಕೂತನಿಗೂ ತಿಳಿಸಿರುತ್ತೇನೆ.

ಆ ಬಂಗಾಲೀ ತರುಣನನ್ನು ಸೆರೆಹಿಡಿದವರಾರೆಂಬ ಬಗ್ಗೆ ಪತ್ತೆ ಹಚ್ಚಿದೆಯಾ?

ಆ ಸಂಗತಿಯು ಇನ್ನೂ ಸಂಪೂರ್ಣವಾಗಿ ತಿಳಿದಿರುವದಿಲ್ಲ ಆದರೂ ಇಂದು ಸಂಜೆಗೆ ಕತ್ತಲೆ ಬಿದ್ದ ಬಳಿಕ ಯಾಕೂತದಾಸಿಯಾದ ಗುಲ್‌ಜಾರ, ಕಾಲ್ಮಿಕ್ ಇರಾಮತ್‌ಖಾ ಇವರಿಬ್ಬರೂ ಒಂದು ನೌಕೆಯಲ್ಲಿ ಪಾಣೀಫಟಕಕ್ಕೆ ಬಂದರು. ಇರಾಮತ್‌ಖಾನನು ಅಲ್ಲಿ ಇಳಿದು ಹೋದನು ಗುಲ್‌ಜಾರಳು ಮಾತ್ರ ಆ ನಾವನ್ನು ರಂಗಮಹಲಿನೊಳಗೆ ತೆಗೆದುಕೊಂಡು ಹೋದಳು. ಆ ಮುದುಕ ಬಂಗಾಲಿಯು ಹೇಳಿದ್ದೇನಂದರೆ, ತಮ್ಮ ರಾಜಪುತ್ರನನ್ನು ಒಬ್ಬ ಗಂಡಸು ಹಾಗು ಒಬ್ಬ ಹೆಂಗಸು ಕೂಡಿ ನಾವೆಯಲ್ಲಿ ಹಾಕಿಕೊಂಡು ಹೋದರೆಂದು. ಆ ಗುಲ್‌ಜಾರದಾಸಿಯೇ ಆ ಬಂಗಾಲೀ ತರುಣನನ್ನು ಕೈದು ಮಾಡಿರುವಳು. ಆ ಬಗ್ಗೆ ಇನ್ನು ಸಂದೇಹವೇ ಇಲ್ಲ.

ಒಳ್ಳೇದು; ನೀನು ಇನ್ನು ನಿನ್ನ ಕೆಲಸಕ್ಕೆ ನಡೆ

ಬಳಿಕ ಆ ಖೋಜ್ಯೇರಿಬ್ಬರೂ ನಬಾಬನನ್ನು ಅಭಿವಂದಿಸಿ ಹೊರಟು

ಹೋದರು. ನಂತರ ಆಸಫಖಾನನು ತನ್ನ ಅಂತಃಪುರವನ್ನು ಪ್ರವೇಶಿಸಿದನು. ಸರಾಸರಿ ಮೂರೂವರೆ ಪ್ರಹರ ರಾತ್ರಿಯು ಸಂದಿದ ಬಳಿಕ ಆ ಮೊಗಲರಾಜ್ಯದ ಮುಖ್ಯ ವಜೀರನಿಗೆ ಅಂದು ತುಸ ವಿಶ್ರಾಂತಿಗೆ ಅವಕಾಶವು ದೊರೆಯಿತು.

---

೧೬ನೇ ತರಂಗ.

—:(o):—

## ನಬಾಬ ಆಲಿಯಾ ಬೇಗಮ.

ಆಗ್ರಾ ದುರ್ಗದೊಳಗಿನ ಬಾದಶಹನ ಅಂತಃಪುರವನ್ನು ಪ್ರವೇಶಿಸಲಿಕ್ಕೆ ಮುಖ್ಯವಾದ ಎರಡು ಬಾಗಿಲುಗಳಿದ್ದವು. ಮೊದಲನೇದು ದಿಲ್ಲೀ ದ್ವಾರದ ಎದುರಿನಿಂದ; ಎರಡನೇದು ಅಮುಂಸಿಂಹ ದ್ವಾರದ ಬಳಿಯಿಂದ. ಇವೆರಡರ ಹೊರತು ಪಾಣೀಘಟಕದಿಂದಲೂ ಅಂತಃಪುರವನ್ನು ಪ್ರವೇಶಿಸುವ ಮೂರನೇದೊಂದು ದ್ವಾರವಿದ್ದಿತು; ಆದರೆ ಅದು ಸರ್ವಸಾಮಾನ್ಯರ ಸಲುವಾಗಿ ಇರದೆ, ಬಾದಶಹನ ಕೇವಲ ಅನುಗ್ರಹಕ್ಕೆ ಪಾತ್ರರಾದಂತಹ ರಮಣೀಗಣದ ಸಲುವಾಗಿ ಇದ್ದಿತು ಮೇಲೆ ವಿವರಿಸಿರುವ ಈ ಮೂರು ಮಾರ್ಗಗಳ ಹೊರತು ಆ ಬಾದಶಾಹೀ ಅಂತಃಪುರವನ್ನು ಪ್ರವೇಶಿಸುವ ಇನ್ನೊಂದು ತೀರ ಗುಪ್ತವಾದ ಮಾರ್ಗವಿದ್ದಿತು ಸ್ವತಃ ಶಹಾಜಹಾನ ಬಾದಶಹನ ಹೊರತು ಮಿಕ್ಕವರಾರಿಗೂ ಆ ಮಾರ್ಗವು ಗೊತ್ತಾಗಿರಲಿಲ್ಲ.

ಅಕಬರ ಹಾಗು ಜಹಾಂಗೀರ ಬಾದಶಹರುಗಳ ಕಾಲಕ್ಕೆ ಆ ಆಗ್ರಾ ದುರ್ಗದೊಳಗಿನ ರಂಗಮಹಲಿನಲ್ಲಿ ಒಬ್ಬ ಬೇಗಮೆಯ ಮಹಲಿನಿಂದ ಇನ್ನೊಬ್ಬ ಬೇಗಮೆಯ ಮಹಲಿಗೆ ಹೋಗಿ ಬರುವ ಅನೇಕ ಗುಪ್ತ ಮಾರ್ಗಗಳು ನಿರ್ಮಿಸಲ್ಪಟ್ಟಿದ್ದವು. ಶಹಾಜಹಾನ ಬಾದಶಹನ ಕಾಲಕ್ಕೆ ಅವನ ಕೇವಲ ಪ್ರೀತಿಗೆ ಪಾತ್ರಳಾಗಿದ್ದ ಆರಜಮುಂದಬಾನೂ ಬೇಗಮಳ ಹೊರತು ಅನ್ಯರಾರೂ ಇರದ್ದರಿಂದ, ಆ ರಂಗಮಹಲಿನೊಳಗಿನ ಆ ಗುಪ್ತ ಪಥಗಳೆಲ್ಲ ಈಗ ಅಷ್ಟೊಂದು ವಹಿವಾಟಿಯುಲ್ಲಿರಲಿಲ್ಲ. ಜೋಧಬಾಯಿ ಮಹಲಿನ ಹಿಮ್ಮಗ್ಗಲಿಗಿದ್ದ ಬಾದಶಹ ಬೇಗಮಳ ಮಹಲಿನ ಹಿಂದು ಪಕ್ಕದಲ್ಲಿ ಹಿಂದು

ಗುಪ್ತಪಥವಿದ್ದಿತು. ಆ ಗುಪ್ತ ಮಾರ್ಗದಲ್ಲಿ ಆಗಲೂ ಒಂದು ಗಲ್ಲಿಗೇರಿಸಿ ಕೊಲ್ಲುವ ಸ್ಥಳವು ದೃಷ್ಟಿಗೆ ಬೀಳುತ್ತಿದ್ದಿತು. ಯಾವಳೊಬ್ಬ ಅಂತಃಪುರ ವಾಸಿನಿಯು ರೀತಿಗೆ ವಿರುದ್ಧವಾಗಿ ನಡೆದರೆ, ಸ್ವತಃ ಬಾದಶಹನಾಗಲಿ, ಪ್ರಧಾನ ಬೇಗಮಳಾಗಲಿ ಅವಳನ್ನು ಆ ಗುಪ್ತ ಗೃಹದಲ್ಲಿ ಗಲ್ಲಿಗೇರಿಸಿ ಕೊಲ್ಲುತ್ತಿದ್ದರು! ಆ ಗೃಹವು ಆಗ್ರಾ ದುರ್ಗದಲ್ಲಿ ಈಗಲೂ ಅವಶಿಷ್ಟವಾಗಿದ್ದು, ಅದನ್ನು ನೋಡುವವರ ಹೃದಯದಲ್ಲಿ ಈಗಲೂ ಭೀತಿಸಂಚಾರ ವಾಗದೆ ಇರದು!

ಶಹಾಜಹಾನನ ಕಾಲಕ್ಕೆ ಆ ವಧಮಂಚಕವು ಬಹು ದಿನಗಳಿಂದ ಉಪಯೋಗಿಸಲ್ಪಟ್ಟಿರಲಿಲ್ಲ. ಬಹಳ ದಿನಗಳಿಂದ ಯಾವ ಅಂತಃಪುರವಾಸಿನಿಯೂ ಅಂಥ ಘೋರ ದಂಡಣೆಗೆ ಪಾತ್ರವಾಗುವಂತಹ ಅಪರಾಧವನ್ನೂ ಮಾಡಿರಲಿಲ್ಲ; ಅದರಿಂದ ಆ ಕೋಣೆಯಲ್ಲಿ ಇತ್ತೀಚೆಗೆ ಯಾರೂ ಪ್ರವೇಶಿಸಿರಲಿಲ್ಲ. ಆ ಕೋಣೆಯಲ್ಲಿ ಅಲ್ಲಲ್ಲಿ ಜೇಡನ ಪರಿಗಳು ಹೆಣದಿದ್ದು, ನೆಲವು ಅತ್ಯಂತ ಧೂಳಿಯಿಂದ ಮುಸುಕಿತ್ತು. ಅಂಥ ಆ ಅಮಂಗಲ ಗೃಹದಲ್ಲಿ ಬಹು ದಿನಗಳ ತರುವಾಯ ಒಂದು ರಾತ್ರಿಯಲ್ಲಿ ಎಷ್ಟೋ ಹಿಲಾಲುಗಳ ದೀಪಗಳು ಒಮ್ಮೆಲೆ ಪ್ರಕಾಶಮಾನವಾದವು. ಮಯೂಖನನ್ನು ಹೊತ್ತಂಥ ನಾಲ್ವರು ಖೋಜ್ಜೇರು ಅವನನ್ನು ಈ ಮೇಲೆ ವರ್ಣಿಸಲ್ಪಟ್ಟ ಕೋಣೆಗೆ ಕರೆತಂದರು. ಅವರ ಮುಂದೆ ಹತ್ತು ಜನ ಹಿಂದೆ ಹತ್ತು ಜನ ಹಿಲಾಲುಗಳನ್ನು ಹಿಡಿದಿದ್ದ ತಾರ್ತರೀಪಹರೆಯವರು ಸಾಗಿದ್ದರು. ಅವರ ಹಿಂದಿನಿಂದ ಜಹನಾರಾಬೇಗಮಳೂ ಆಕೆಯ ಹಿಂದಿನಿಂದ ಗುಲ್‌ರುಖಳೂ ಅಲ್ಲಿಗೆ ನಡೆದಿದ್ದರು. ಕಟ್ಟಕಡೆಗೆ ತೀಕ್ಷ್ಣ ಧಾರೆಯುಳ್ಳ ಕೊಡ್ಲಿಯನ್ನು ಧರಿಸಿದ್ದ ಒಬ್ಬ ಖೋಜಾನೂ, ಅವನ ಹಿಂದಿನಿಂದ ಒಳ್ಳೇ ಹುರಿಕಟ್ಟಾದ ನೂಲಿನ ಹಗ್ಗವನ್ನು ಹಿಡಿದಿದ್ದ ಒಬ್ಬ ತಾರ್ತರೀದಾಸಿಯೂ ಬಂದರು. ಅವರೆಲ್ಲರೂ ಆ ಕೋಣೆಯನ್ನು ಪ್ರವೇಶಿಸುತ್ತಲೇ ಅದರ ಬಾಗಿಲವು ಒಮ್ಮೆಲೆ ಮುಚ್ಚಲ್ಪಟ್ಟಿತು.

ಆ ವಧಮಂಚಕದ ಹತ್ತಿರ ಹೋದ ಬಳಿಕ ಮಯೂಖನನ್ನು ಹೊತ್ತುಕೊಂಡು ಬಂದಂಥ ಹಬಸೀಜನರು ಅವನನ್ನು ಕೆಳಗಿಳಿಸಿ, ಅವನ ಬಂಧನಗಳನ್ನು ಬಿಚ್ಚಿದರು; ಹಾಗು ಅವನನ್ನು ಜಹಾನಾರಾಬೇಗಮಳ ಎದುರಿಗೆ ನಿಲ್ಲಿಸಿ ತಾವೆಲ್ಲರೂ ಹಿಂದಕ್ಕೆ ಸರಿದುನಿಂತುಕೊಂಡರು. ಹಿಲಾಲು

ಗಳನ್ನು ಹಿಡಿದಂಥ ತಾರ್ತರೀದಾಸಿಯರು ಎರಡೂ ಮಗ್ಗಲಿನ ಗೋಡೆಗಳಿಗೆ ಹೊಂದಿಕೊಂಡು ಸಾಲು ಸಾಲಾಗಿ ನಿಂತುಕೊಂಡರು. ಕೊಡ್ಲಿಯನ್ನು ಹಿಡಿದಂಥ ಆ ಅತ್ಯಂತ ಕ್ರೂರ ಖೋಜ್ಜಿಯು ಬಹು ದಿನಗಳ ತರುವಾಯದ ಆ ತನ್ನ ಭೀಷಣ ಕರ್ಮಕ್ಕೆ ಸಜ್ಜಾಗಿ, ಆ ಗಲ್ಲಿನ ಹಲಿಗೆಯನ್ನು ಸಜ್ಜುಗೊಳಿಸಿಕೊಂಡು ನಿಂತನು. ನೂಲಿನ ಹಗ್ಗವನ್ನು ಹಿಡಿದಂಥ ತಾರ್ತರಿಯು ತನ್ನ ಆ ಹಗ್ಗವನ್ನು ಆ ಗಲ್ಲಿನ ಕಂಬಕ್ಕೆ ಯೋಗ್ಯರೀತಿಯಿಂದ ಕಟ್ಟಿ, ಕೆಳಗಿನ ಮಣೆಯ ಕೀಲವನ್ನು ಹಿತ್ತಿದಳು. ಕೂಡಲೆ ಆ ಮಣೆಯು ಧಡಕ್ಕನೆ ಸರಿಯಲು, ಅದರ ಕೆಳಗಿನ ವಿಸ್ತೃತವಾದ ಕಿಂಡಿಯೊಳಗಿಂದ ಖಳ ಖಳವೆಂದು ಹರಿಯುವ ಯಮುನಾಪ್ರವಾಹವು ದೃಗ್ಗೋಚರವಾಗತೊಡಗಿತು!

ಆಗ ಶಹಾಜಾದಿಯು ಮಯೂಖನನ್ನು ಕುರಿತು:—ಸರಪೋಯಾರಖಾನ, ಕಂಡುಕೊಂಡೆಯಾ ನಿನ್ನ ಭವಿತವ್ಯವನ್ನು? ಎಂದು ಪ್ರಶ್ನಮಾಡಲು, ಮಯೂಖನು ಏನೂ ಮಾತನಾಡದೆ, ಕಣ್ಣುಮುಚ್ಚಿಕೊಂಡು ಮನಸ್ಸಿನಲ್ಲಿಯೇ ತನ್ನ ಕುಲದೈವತವನ್ನು ಸ್ಮರಿಸುತ್ತ ಮರಣಕ್ಕೆ ಸಿದ್ಧನಾಗಿ ನಿಂತುಕೊಂಡನು.

ಶಹಾಜಾದಿಯು ಮತ್ತೆ ಅನ್ನುತ್ತಾಳೆ;—ಖಾನ, ಈಗಲಾದರೂ ನಿನ್ನೀ ಧರ್ಮಪತ್ನಿಯನ್ನು ಗೃಹಿಸುವದಾದರೆ, ನೀನು ಅಮರನಾಗುವೆ.

ಕಣ್ಣು ಮುಚ್ಚಿಕೊಂಡೇ ಮಯೂಖನು:—ಶಹಾಜಾದೀ, ನಾನು ಹಿಂದುವು. ಪ್ರಾಣಭಯಕ್ಕಾಗಿ ಸುಳ್ಳಾಡುವ ಜಾತಿಯವನಲ್ಲ. ನಾನು ಜಾತಿಯಿಂದ ಬ್ರಾಹ್ಮಣನು; ಮುಸಲ್ಮಾನನಲ್ಲ ನನ್ನ ಹೆಸರು ಮಯೂಖನೆಂದು, ಸರಪೋಯಾರಖಾನನಲ್ಲ. ಅದರಿಂದ ನಾನು ಈ ರಮಣಿಯನ್ನು ಗುರ್ತಿಸುವದೂ ಇಲ್ಲ; ಲಗ್ನವಾಗುವದೂ ಇಲ್ಲ. ನಾನು ಮರಣಕ್ಕಾಗಿ ಸಜ್ಜಾಗಿರುತ್ತೇನೆ. ತಡಮಾಡಿ ನನ್ನ ಮನಸ್ಸಿನ ಚಾಂಚಲ್ಯವನ್ನು ಹೆಚ್ಚಿಸಬೇಡ, ಎಂದು ಅಸ್ಖಲಿತ ವಾಣಿಯಿಂದ ನುಡಿದನು.

ಈಗಲೂ ನೀನು ನಿನ್ನೀ ಪತ್ನಿಯನ್ನು ಗೃಹಿಸುವದಿಲ್ಲವೆ?

ಇವಳು ನನ್ನ ಹೆಂಡತಿಯಲ್ಲ; ಯಾಕಂದರೆ ಈ ವರೆಗೂ ನಾನು ಬಾಲ ಬ್ರಹ್ಮಚಾರಿಯೇ ಇರುತ್ತೇನೆ. ಶಹಾಜಾದೀ, ನಾನು ಸುಳ್ಳು ಹೇಳುವದಿಲ್ಲ; ಈ ಯವನಿಯನ್ನು ವರಿಸುವದಿಲ್ಲ; ನನ್ನ ಪವಿತ್ರ ಧರ್ಮವನ್ನು ತ್ಯಜಿಸುವದಿಲ್ಲ.

ಕೂಡಲೆ ಶಹಾಜಾದಿಯು ಕಣ್ಣ ಸನ್ನೆಯನ್ನು ಮಾಡಿದಳು. ಆ ಕೂಡಲೆ ಭೀಕರರೂಪದ ಕೊಲೆಗಡಕನು ಮಯೂಖನ ಕೈಹಿಡಿದು ಜಗ್ಗಿದನು. ಇಷ್ಟರಲ್ಲಿ ಆಗ್ರಾ ದುರ್ಗದ ಆ ಗುಪ್ತ ಗೃಹದ ಬಹು ಎತ್ತರವಾದ ಕಪ್ಪು ಬಣ್ಣದ ಗೋಡೆಗಳ ಮೇಲಿನ ಕಾರ್ಗತ್ತಲೆಯೊಳಗಿಂದ ಒಂದು ಬಹು ಕಪ್ಪು ಬಣ್ಣದ ಮೂರ್ತಿಯು ನೆಲಕ್ಕೆ ಹಾರಿ, ಆ ಕೊಲೆಗಡಕನನ್ನು ತನ್ನ ಪಾದದಿಂದ ಒದ್ದು, ಆ ಕೆಳಗಿನ ಕಿಂಡಿಯೊಳಗಿಂದ ಕಾಣುವ ಯಮುನಾ ಪ್ರವಾಹದಲ್ಲಿ ಕೆಡವಿಬಿಟ್ಟಿತು! ಹಾಗು ಅದು ಅಲ್ಲಿ ಯಾವ ಮಾಯೆಯಿಂದ ಬಂದಿತ್ತೋ ಅದೇ ಮಾಯೆಯಿಂದ ಗುಪ್ತವಾಗಿ ಬಿಟ್ಟಿತು. ಅದನ್ನೆಲ್ಲ ಕಂಡ ಮಯೂಖನು ವಿಸ್ಮಯ ಚಕಿತನಾದನು! ಗುಲ್‌ರುಖಳು ಚಟ್ಟನೆ ಚೀರಿ ಮೂರ್ಛೆಹೊಂದಿ ನೆಲಕ್ಕೆ ಬಿದ್ದಳು!! ಶಹಾಜಾದಿಯು ಭಯಕಂಪಿತಳಾಗಲು, ಅವಳ ಸರ್ವಾಂಗವು ಬೆವರಿನಿಂದ ತೊಯ್ದು ತಪ್ಪಡಿಯಾಯಿತು!

ಆ ಪ್ರಸಂಗವು ಸಂದಿದ ನಂತರ ಎಷ್ಟೋ ನಿಮಿಷಗಳವರೆಗೆ ಯಾರೂ ಪಿಟ್ಟೆಂದುಸುರಲಿಲ್ಲ ಕಡೆಗೆ ಮಯೂಖನೇ:—ಶಹಾಜಾದೀ, ಸುಮ್ಮನೆ ವಿಲಂಬ ಮಾಡುವದರಿಂದೇನು ಪ್ರಯೋಜನ? ಕೊಡ್ಲಿಯು ಹೋದರೂ ಹೋಗಲಿ, ಹಗ್ಗವಾದರೂ ಇರುವದಷ್ಟೇ? ತಮ್ಮ ದಾಸದಾಸಿಯರಿಗೆ ಅದನ್ನು ನನ್ನ ಕೊರಳಿಗೆ ಕಟ್ಟಲಿಕ್ಕೆ ಅಂಜಿಕೆ ಬರುತ್ತಿದ್ದರೆ, ನಾನೇ ಅದರಿಂದ ನನ್ನ ಕೊರಳಿಗೆ ಉರ್ಲು ಹಾಕಿಕೊಳ್ಳುತ್ತೇನೆ.

ಶಹಾಜಾದಿಯ ಬಾಯಿಂದ ಶಬ್ದಗಳೇ ಹೊರಡಲಿಲ್ಲ. ಯಾವ ತಾರ್ತರಿಯು ಆ ನೂಲಿನ ಹಗ್ಗವನ್ನು ಆ ವಧಸ್ತಂಭಕ್ಕೆ ಕಟ್ಟಿದ್ದಳೋ ಅವಳು ಅತ್ತನೋಡಲು, ಅದು ಮೇಲಿಂದಮೇಲೆಯೇ ಕತ್ತಲಲ್ಲಿ ಮಾಯವಾಗಿ ಹೋಗಿತ್ತು! ಆಗ ಅವಳು ಪರಮಾಶ್ಚರ್ಯದಿಂದ:—"ಶೋಭಾನಾಲ್ಲಾ!" ಎಂದು ಚೀರಿದವಳೇ ದೂರ ಸರಿದು ನಿಂತಳು. ಶಹಾಜಾದಿಯು ಮತ್ತಿಷ್ಟು ನಡುಗಹತ್ತಿದಳು. ಇಷ್ಟರಲ್ಲಿ ಆ ಕಾರ್ಗತ್ತಲೆಯಂಥ ಕಪ್ಪು ವರ್ಣದ ಗೋಡೆಯ ಮೇಲಿನಿಂದ ಕೆಳಗಿದ್ದ ಒಬ್ಬ ಖೋಜಾನನ್ನು ಯಾರೋ ಚೆನ್ನಾಗಿ ಒದ್ದರು. ಅದರಿಂದ ಆ ಖೊಜ್ಜೆಯ ಕೈಯೊಳಗಿನ ನಗ್ನ ಖಡ್ಗವು ನೆಲಕ್ಕೆ ಬಿದ್ದಿತು. ಆ ಕತ್ತಿಯು ನೆಲಕ್ಕೆ ಬಿದ್ದಿತೋ ಇಲ್ಲವೋ ಇಷ್ಟರಲ್ಲಿ ಆ ಗೋಡೆಯ ಮೇಲಿನ ಮೂರ್ತಿಯು ಕೆಳಕ್ಕೆ ಹಾರಿ, ಆ ನೆಲದ ಮೇಲಿನ ಕತ್ತಿಯಿಂದ ಮತ್ತೊರ್ವ ಖೋಜಾನ ರುಂಡವನ್ನು ದಿಂಡದಿಂದ ಬೇರೆ

ಮಾಡಿದನು! ಆ ರುಂಡವು ಹಳ್ಳೀ ವೇಗದಿಂದ ಹೋಗಿ ಆ ಜಹಾನಾರಾ ಬೇಗಮಳ ಮೈಮೇಲೆ ಬಿದ್ದಿತು! ಕೂಡಲೆ ಅಲ್ಲಿದ್ದ ಉಳಿದ ಎಲ್ಲ ಖೋಜ್ಜೇರೂ ತಾರ್ತರಿ ದಾಸಿಯರೂ ಆ ಆಗಂತುಕನನ್ನು ಸುತ್ತುವರೆದು ನಿಂತುಕೊಂಡರು. ಆಗ ಆ ಆಗಂತುಕನು ತಮ್ಮ ಬಂಗಾಲೀ ಭಾಷೆಯಿಂದ:—ಮಹಾರಾಜ, ಹೀಗೆ ಬೆಪ್ಪನ ಹಾಗೆ ನೋಡುತ್ತ ನಿಂತಿರುವಿರೇಕೆ? ತಗೊಳ್ಳಿರಿ, ಈ ಕೆಳಗಿನ ಅಸಿಯನ್ನು. ಹಾಗು ಸಂಹರಿಸಿರಿ ಇವರೆಲ್ಲರನ್ನು, ಎಂದು ಹೇಳಿದನು.

ಚಿತ್ರದೊಳಗಿನ ಬೊಂಬೆಯಂತೆ ನಿಂತಿದ್ದ ಮಯೂಖನಿಗೆ ಆ ಆಗಂತುಕನ ದನಿಯು ಗುರುತು ಹತ್ತಲು, ಅವನ ಭ್ರಮೆಯೆಲ್ಲ ಬೈಲಾಗಿ ಹೋಯಿತು. ಕೂಡಲೆ ಅವನು ಅಲ್ಲಿ ಬಿದ್ದಿದ್ದ ಕತ್ತಿಯನ್ನು ತಕ್ಕೊಂಡನು. ಅತ್ತ ಆ ಖೋಜ್ಜೇರು ತಮ್ಮ ತಮ್ಮೊಳಗೆ:—ಇವನು ಮನುಷ್ಯನಲ್ಲ ಪಿಶಾಚಿಯೆಂದು ಕೆಲವರೂ; ಪಿಶಾಚಿಯಲ್ಲ ಮನುಷ್ಯನೆಂದು ಕೆಲವರೂ ವಾದಿಸುತ್ತ ನಿಂತಿದ್ದರು. ಅವರ ಆ ಭಾಷಣವನ್ನು ತಿಳಿದ ಆ ಆಗಂತುಕನು ಅವರನ್ನುದ್ದೇಶಿಸಿ:—ಮಕ್ಕಳಿರಾ, ನಾನು ಪಿಶಾಚಿಯಲ್ಲ, ಮನುಷ್ಯನೇ ಇರುತ್ತೇನೆ.

ಆಗಂತುಕನ ಈ ನುಡಿಯನ್ನು ಕೇಳಿ ಮಯೂಖನು:—ಭುವನ! ಎಂದು ಅನ್ನಲು,

ಭುವನನು ಅನ್ನುತ್ತಾನೆ:—ಹುಜೂರ, ಈಗ ತಡಮಾಡಿ ಪ್ರಯೋಜನವಿಲ್ಲ.

ಹೀಗೆ ಅವರು ಆ ಸ್ವಾಮಿ-ಸೇವಕರು ಮಾತನಾಡುತ್ತಿರಲಿಕ್ಕೆ, ಅಲ್ಲಿದ್ದ ಆ ದಾಸ-ದಾಸಿಯರೆಲ್ಲರೂ ಅವರೀರ್ವರನ್ನು ಮುತ್ತಿದರು. ಕೂಡಲೆ ಮಯೂಖನೂ ಭುವನನೂ ಕೂಡಿ ಆ ಖೋಜಾ ಹಾಗೂ ಆ ತಾರ್ತರೀ ದಾಸಿಯರ ಕೈಗಳನ್ನು ಮೊದಲು ತುಂಡರಿಸಿದರು. ಅದರಿಂದ ಅವರ ಕೈಯಲ್ಲಿದ್ದ ಹಿಲಾಲುಗಳೆಲ್ಲ ನೆಲಕ್ಕೆ ಬಿದ್ದು ನಂದಿಹೋದವು. ಆ ಕೂಡಲೆ ಆ ಗುಪ್ತ ಗೃಹವು ಅಂಧಕಾರಮಯವಾಯಿತು! ಅದೇ ಹೊತ್ತಿಗೆ ಸರಿಯಾಗಿ ಈ ವರೆಗೆ ಮೂರ್ಛಾಗತಳಾಗಿ ಬಿದ್ದುಕೊಂಡಿದ್ದ ಗುಲರುಖಳು ಚೇತನಗೊಂಡು, ಶಹಾಜಾದಿಯ ಕಾಲಿಗೆರಗಿ:--ಶಹಾಜಾದೀ, ಇವನನ್ನು ಕೊಲ್ಲಿಸಬೇಡಿರಿ. ನಾನೇ ಇನ್ನೊಮ್ಮೆ ಇವನನ್ನು ಕಂಡು ಮಾತಾಡಿಸುವೆನು, ಎಂದು ಬಿನ್ನಹ ಮಾಡಿಕೊಂಡಳು.

ಇಷ್ಟರಲ್ಲಿ ಆ ಬಾದಶಾಹಜಾದಿಯು ಬೇರೆ ಖೋಜಾಗಳಿಗೆ ಹಿಲಾಲು

ಹಚ್ಚ ಹೇಳಲು, ಭುವನನು ಮತ್ತೆ ಆ ಗೋಡೆಯನ್ನೇರಿ ಅವರಿಗೆ ಕಾಣ ದಂತಾದನು! ಅವರೆಲ್ಲರೂ ಕೂಡಿ ಆ ನೆಲಮನೆಯನ್ನು ಎಷ್ಟು ಶೋಧಿಸಿ ಸಿದರೂ ಅವನ ಶೋಧವಾಗಲಿಲ್ಲ. ಬಳಿಕ ಗುಲರುಖಳ ಆಜ್ಞೆಯ ಮೇರೆಗೆ ಆ ಖೋಜಾಗಳೂ ದಾಸಿಯರೂ ಆ ಕೋಣೆಯಿಂದ ಬೇರೆ ಕಡೆಗೆ ಹೊರಟುಹೋಗಲು, ಅವಳು ನಿದಾನದಿಂದ ಮಯೂಖನ ಹತ್ತರಕ್ಕೆ ಹೋಗಿ ನಿಂತಳು. ಶಹಾಜಾದಿಯೂ ಬೇರೆ ಕಡೆಗೆ ನಡೆದಳು.

ಅವಳನ್ನು ಕಂಡು ಮಯೂಖನು:—ಬೀಬೀ, ನೀನು ಯಾರು? ನೀನು ನನ್ನನ್ನೇಕೆ ಪೀಡಿಸುತ್ತಿರುವೆ?

ಮಯೂಖನ ಆ ನುಡಿಗಳನ್ನು ಕೇಳಿ ಗುಲರುಖಳು ತುಸ ಮುಂದ ರಿದು ನಿಂತಳು. ಆಗ ಅವಳ ಎದೆಯು ಧಡ್ ಧಡೆಂದು ಹಾರುತ್ತಿತ್ತು. ಅವಳ ನಾಲಿಗೆಯು ಒಣಗಿಹೋಗಿತ್ತು. ಆದರಿಂದ ಅವಳ ಬಾಯಿಂದ ಶಬ್ದಗಳೇ ಹೊರಡದಾದವು.

ತನ್ನ ಕೈಯಲ್ಲಿರುವ ಬಿಚ್ಚುಗತ್ತಿಯನ್ನು ಕಂಡು ಇವಳು ಹೆದರುತ್ತಿ ರುವಳೋ ಏನೋ ಎಂದು ಊಹಿಸಿದ ಮಯೂಖನು ಅದನ್ನು ಓರೆಗೆ ಹಿತ್ತಟ್ಟಿಗೆ ಇರಿಸಿ, ಮತ್ತೆ:—ಬೀಬೀ, ನೀನಾರೆಂಬದನ್ನು ನಾನು ಗುರ್ತಿ ಸಲಾರೆನು.

ಕೂಡಲೆ ಗುಲರುಖಳ ಪ್ರಾಣಗೆ ಚೇತನೆಯುಂಟಾಗಲು, ಅವಳು ಹಳ್ಳೀ ದುಃಖದಿಂದ:—ತಮಗೆ ನನ್ನ ಗುರ್ತು ಹತ್ತಲಿಲ್ಲವೇ?

ಇಲ್ಲ

ತಾವು ಸಪ್ತಗ್ರಾಮದ ಯುದ್ಧದಲ್ಲಿ ಗಾಯಪಟ್ಟಿದ್ದಾದರೂ ತಮ್ಮ ಸ್ಮರಣದಲ್ಲಿರುವದೇ?

ಇರುತ್ತದೆ.

ತ್ರಿವೇಣಿಯ ಸಂಗಮದೊಳಗಿನ ನನ್ನ ನಾವಿನಲ್ಲಿ ನಾನು ನಿಮ್ಮ ಶುಶ್ರೂಷೆ ಮಾಡಿದ್ದಾದರೂ ನಿಮ್ಮ ಸ್ಮರಣದಲ್ಲಿದೆಯೋ?

ಅವಳೇ ನೀನೇನು?

ಅಹುದು, ನಾನೇ ಅವಳು.

ನಾನು ಆಗ ಒಂದು ವಿಚಿತ್ರ ಸ್ವಪ್ನವನ್ನು ಕಂಡೆನು. ನನ್ನ ತಲೆಯ ಬಳಿಯಲ್ಲಿ ಕುಳಿತು ಲಲಿತೆಯು ಸತಾರವನ್ನು ಬಾರಿಸುತ್ತಿದ್ದಳು; ಆದರೆ

ಲಲಿತೆಗಂತೂ ಸತಾರಿನ ಅಭ್ಯಾಸವಿರಲಿಲ್ಲ.

ಅಲ್ಲ, ಆಗ ಸತಾರ ಬಾರಿಸುತ್ತಿದ್ದವಳು ಲಲಿತೆಯಲ್ಲ; ನಾನೇ.

ನಾನು ನಿನ್ನನ್ನು ಆ ಮೊದಲೆಂದೂ ನೋಡಿರಲಿಲ್ಲವಲ್ಲ

ಪ್ರಿಯಾ, ಇಲ್ಲ. ಅಂದು ತ್ರಿವೇಣಿಯ ಘಾಟನಲ್ಲಿ ನಿನ್ನನ್ನು ನೋಡಿದಾಗಿನಿಂದಲೇ ನಾನು ನಿನ್ನ ಚರಣಗಳಲ್ಲಿ ಆತ್ಮಸಮರ್ಪಣೆಯನ್ನು ಮಾಡಿಬಿಟ್ಟಿರುತ್ತೇನೆ; ಹೀಗೆಂದು ನುಡಿದು, ಗುಲರುಖಳು ಮಯೂಖನ ಪಾದಯುಗ್ಮಗಳನ್ನು ಹಿಡಿದಳು. ಮಯೂಖನು ಮೂಂದುಗಾಣದಾದನು. ಆಗ ಮತ್ತೆ ಗುಲರುಖಳೇ:—ಪ್ರಿಯಂಕರಾ, ನಿನ್ನನ್ನು ಹೊಂದುವೆನೆಂಬ ಭರವಸೆಯಿಂದ ಈ ಸ್ತ್ರೀಜನ್ಮದ ಲಜ್ಜೆ-ನಾಚಿಕೆಗಳನ್ನು ತೊರೆದೆನು. ಅಸದಖಾ ಹಾಗು ಶಹಾನಓಯಾಜಖಾ ಮುಂತಾದ ಪ್ರತಿಷ್ಠಿತ ಗೃಹಸ್ಥರೆದುರಿಗೆ ನಾನು ನಿನ್ನ ಲಗ್ನದ ಹೆಂಡತಿಯೆಂದು ಹೇಳಿಕೊಂಡಿರುತ್ತೇನೆ ನೀನು ಸಪ್ತಗ್ರಾಮದಲ್ಲಿ ಫಿರಂಗಿ ದಸ್ಯುಗಳಿಂದ ಗಾಯಹೊಂದಿ ಚೇತನಾವಿಹೀನನಾಗಿ ದಾರಿಯಲ್ಲಿ ಬಿದ್ದುಕೊಂಡಾಗ ನನ್ನ ಅನುರೋಧದಿಂದಲೇ ಶಹಾನಓಯಾಜಖಾನರು ನಿನ್ನನ್ನು ನನ್ನ ನಾವಿನಲ್ಲಿ ತಂದರು. ಆಗಲೇ ನಾವು ನಿನ್ನನ್ನು ಔಷಧಾದಿಗಳಿಂದ ಉಪಚರಿಸಿದೆವು ಆ ನಾವಿನಲ್ಲಿ ನೀನು ೩-೪ ದಿನಗಳವರೆಗೆ ಸ್ಮೃತಿತಪ್ಪಿ ಬಿದ್ದುಕೊಂಡಿದ್ದೆ. ಆ ಅವಸ್ಥೆಯಲ್ಲಿಯೇ ನೀನು ನನ್ನನ್ನು ಲಲಿತೆಯೆಂದು ಕರೆಯುತ್ತಿದ್ದೆ. ನೀನು ನನ್ನಲ್ಲಿ ಆದರವನ್ನು ತಾಳಿಯೇ ಹಾಗೆ ನನ್ನನ್ನು ಸಂಬೋಧಿಸುತ್ತಿರುವೆಯೆಂದು ನಾನು ತಿಳಿದಿದ್ದೆನು ಹುಗಳಿಯ ಫಿರಂಗಿಗಳು ಯಾವಾಗ ನಮ್ಮ ಆ ನಾವನ್ನು ಮುತ್ತಿ, ಅದನ್ನು ನಾಶಗೊಳಿಸಿದರೋ, ಅಂದಿನಿಂದ ನಿನ್ನನ್ನು ಕಾಣದಾದೆನು.

ಆ ಬಳಿಕ ಯಾವಾಗ ನೀನು ಈ ಯಮುನಾತೀರದ ಪಾಣಿಘಟಕದ ಬಳಿಯಲ್ಲಿ ನಿನ್ನ ನಾವಿನಲ್ಲಿ ಕುಳಿತಿದ್ದೆಯೋ, ಆಗಲೇ ನಿನ್ನನ್ನು ಪುನಃ ನೋಡಿದೆನು; ಹಾಗು ನನ್ನ ಅನುಜ್ಞೆಯಿಂದಲೇ ನಿನ್ನನ್ನಿಲ್ಲಿಗೆ ತಂದಿರುತ್ತಾರೆ. ನಮ್ಮ ಶಹಾಜಾದಿಯ ಬಳಿಯಲ್ಲೂ ನೀನು ನನ್ನ ಲಗ್ನದ ಗಂಡನೆಂದೇ ತಿಳಿಸಿರುತ್ತೇನೆ. ನಿನ್ನನ್ನು ನೋಡುವ ಸಲುವಾಗಿ, ನಿನ್ನನ್ನು ಹೊಂದುವ ಸಲುವಾಗಿ, ನಿನ್ನೊಡನೆ ಸಂಸಾರಮಾಡುವ ಸಲುವಾಗಿ ನಾನು ನಿನಗೆ ಈ ವರೆಗೆ ಅನೇಕ ಬಗೆಯ ಕಷ್ಟಗಳನ್ನಿತ್ತಿರುತ್ತೇನೆ. ಪ್ರಿಯಾ-ಪ್ರಿಯಕರಾ, ನೀನು ನನ್ನವನಾಗಲಾರೆಯಾ? ನೋಡು; ನಾನು ಅಬಲೆಯು.

ರಮಣಿಯು-ನಾರೀಧರ್ಮಕ್ಕೆ ತಕ್ಕದ್ದಾದ ಲಜ್ಜೆಯನ್ನು ಪರಿತ್ಯಜಿಸಿ, ನಿನ್ನೆದುರಿಗೆ ಸೆರಗೊಡ್ಡುತ್ತೇನೆ. ಹೇಗಾದರೂ ಮಾಡಿ ನನ್ನನ್ನು ನಿನ್ನವಳನ್ನಾಗಿ ಮಾಡಿಕೋ.

ಮಯೂಖನು ಗುಲ್‌ರುಖಳ ಮಾತನ್ನು ಸುಮ್ಮನೆ ನಿಂತುಕೊಂಡು ಕೇಳುತ್ತಿದ್ದನೇ ಹೊರತು, ಒಂದು ತುಟಿ ಎರಡು ಮಾಡಲಿಲ್ಲ. ಕೆಲಹೊತ್ತಿನ ಮೇಲೆ ಅವನು:—ಬೀಬಿ, ನಾನು ಹಿಂದುವು; ಮೇಲಾಗಿ ಬ್ರಾಹ್ಮಣನು. ನೀನು ನನ್ನನ್ನು ಅನುಗ್ರಹಿಸಿ, ಕ್ಷಮಿಸಿ ಬಿಟ್ಟುಬಿಡು; ಎಂದನು.

ಪ್ರಿಯಕರಾ, ನೀನು ನನ್ನ ಏಕಮಾತ್ರ ದೈವತವು. ಯಾವನು ಬಹಿರಂಗದಲ್ಲಿ ಇಷ್ಟು ಸುಂದರನಾಗಿರುವನೋ, ಅವನ ಅಂತರಂಗವೆಂದೂ ಮಲಿನವಾಗಿರಲಾರದು. ಯಾವನು ಇಷ್ಟು ರೂಪಸಂಪನ್ನನಾಗಿರುವನೋ ಅವನು ನಿರ್ಗುಣನೆಂದೂ ಆಗಲಾರನು. ನಾನು ರಮಣಿಯು, ಮುಗ್ಧೆಯು; ಸ್ವೇಚ್ಛೆಯಿಂದ ನಾರೀಧರ್ಮವನ್ನು ತ್ಯಜಿಸಿ, ನಿನ್ನ ಚರಣಗಳಲ್ಲಿ ಆಶ್ರಯ ಹೊಂದಬೇಕೆಂದು ಬಂದಿರುತ್ತೇನೆ. ಮುಸಲ್ಮಾನನು ಹಿಂದುವಾಗಬಲ್ಲನು; ಹಿಂದುವು ಮುಸಲ್ಮಾನನಾಗಬಹುದು ಹಿಂದೂ ಹಾಗು ಮುಸಲ್ಮಾನರಲ್ಲಿ ಅನೇಕ ಪತ್ನಿತ್ವವು ರೂಢವಾಗಿದೆ. ಈ ಬಾದಶಾಹೀ ಅಂತಃಪುರದಲ್ಲಿ ನನ್ನ ವರ್ಚಸ್ಸು ಚೆನ್ನಾಗಿ ಇರುತ್ತದೆ. ನಾನು ಬಾದಶಹನ ಪಟ್ಟದರಸಿಯಿಂದ ಅನುಗ್ರಹಿತಳಾದವಳು ಶಹಾನಶಹಾ ಶಹಾಜಹಾನ ಬಾದಶಹನು ನನ್ನನ್ನು ಪ್ರೀತಿಸುತ್ತಿರುತ್ತಾನೆ. ನೀನು ನನಗೆ ನಿನ್ನ ಚರಣದೆಡೆಯಲ್ಲಿ ಆಶ್ರಯವನ್ನಿತ್ತರೆ, ನಾನು ನಿನ್ನ ಸಲುವಾಗಿ ಅಸಾಧ್ಯಸಾಧನವನ್ನೂ ಸಾಧಿಸಿಕೊಡಬಲ್ಲೆನು. ನಿನಗೆ ಬೇಕಾದ ಅಧಿಕಾರ, ದ್ರವ್ಯ, ಜಹಾಗೀರು ಮುಂತಾದವುಗಳನ್ನೆಲ್ಲ ಕ್ಷಿಪ್ರದಲ್ಲಿಯೇ ಕೊಡಿಸುತ್ತೇನೆ.

ಮಯೂಖನು ಅವಳನ್ನು ಹೆಚ್ಚು ಮಾತಾಡಗೊಡದೆ:—ಬೀಬಿ ಸಾಹೇಬ, ತಾವೇನೋ ಬಹು ಮೆಹೆರ್ಬಾನಗಿಯನ್ನು ಮಾಡುತ್ತಿರುವಿರಿ; ಆದರೆ ನಾನು ಮಾತ್ರ ಎಂದಿಗೂ ಮುಸಲ್ಮಾನನಾಗಲಾರೆನಲ್ಲ!

ಹಾಗಾದರೆ ನಾನೇ ಹಿಂದುವಾಗುತ್ತೇನೆ.

ಮುಸಲ್ಮಾನರೆಂದೂ ಹಿಂದುಗಳಾಗಲಾರರು.

ಅದೇಕೆ? ವೈಷ್ಣವರಂತೂ ಆಗಬಹುದಲ್ಲವೇ?

ನಾನು ಬ್ರಾಹ್ಮಣನು; ವೈಷ್ಣವನಾದರೆ ನಾನು ಜಾತಿಭ್ರಷ್ಟ

ನಾದಂತಾಗುತ್ತದೆ.

ಪ್ರಿಯಕರಾ, ನೋಡು; ನಾನು ಶಹಾಜಾದಿಗೆ ಹೇಳಿರುವದೇನಂದರೆ, ನೀನು ನನ್ನ ಗಂಡನಾದ ಸರವ್ರೋಯಾರಖಾನನೆಂದು ನೀನು ಹಬ್ಬ ಹಿಂದೂ ಕಾಫರ ರಮಣಿಯ ಮೋಹಜಾಲದಲ್ಲಿ ಸಿಲುಕಿ ಹಿಂದುವಾಗಿರುತ್ತೀಯೆಂದು. ಈ ಮುಸಲ್ಮಾನೀ ರಾಜ್ಯದಲ್ಲಿ ಹಿಂದುಗಳು ಮುಸಲ್ಮಾನರಾದರೆ ಆತಂಕವಿಲ್ಲ; ಆದರೆ ಯಾವನೊಬ್ಬ ಮುಸಲ್ಮಾನನು ಹಿಂದುವಾದರೆ ಅವನಿಗೆ ಪ್ರಾಣ ದಂಡಣದ ಶಿಕ್ಷೆಯೇ ಶಿಕ್ಷೆಯು! ಈಗ ನೀನು ನನ್ನ ಮಾತಿಗೆ ಒಡಂಬಡ ದಿದ್ದರೆ, ಶಹಾಜಾದಿಯು ನಿನ್ನನ್ನು ಕೊಲೆಗೈಸದೆ ಬಿಡಳು.

ಬೀಬಿ, ನಾನು ಮರಣಕ್ಕೆ ಅಂಜಿದರಷ್ಟೆ?

ಪ್ರಿಯಕರಾ, ಹಾಗೆ ಅವಿಚಾರಕ್ಕೆ ಮನಸ್ಸು ಮಾಡಬೇಡ. ಈಗ ನನ್ನ ಮಾತಿಗೆ ಒಪ್ಪಿ ಇಲ್ಲಿಂದ ಪಾರಾಗು; ಆಮೇಲೆ ನಿನ್ನ ಮನಸ್ಸು ಬರ ದಿದ್ದರೆ ನನ್ನನ್ನು ತ್ಯಜಿಸಿ ಹೋಗಿಬಿಡು.

ಬೀಬಿ, ಅದೆಲ್ಲ ಅಸಂಭವದ ಮಾತು; ಒಮ್ಮೆ ಸಮ್ಮತಿಸಿದ ಬಳಿಕ ತಿರುಗಿ ಅಸಮ್ಮತಿ ಪಡುವದೆಂತು?

ಹಾಗಾದರೆ ಪ್ರಿಯಕರಾ, ನನಗೆ ತಮ್ಮ ಚರಣದೆಡೆಯಲ್ಲಿ ಆಶ್ರಯ ವನ್ನು ಕೊಡಲಾರಿರಾ?

ಬೀಬಿಸಾಹೇಬ, ಮೆಹೆರಬಾನಗಿ ಮಾಡಿ ನನ್ನನ್ನು ಕ್ಷಮಿಸಿರಿ. ತಾವು ಹೇಗೂ ಬಾದಶಹರ ಸಾಕು ಪುತ್ರಿಯು. ಎಂಥೆಂಥ ಶ್ರೀಮಂತ ಅಮೀರ ಉಮರಾವರು ತಮ್ಮನ್ನು ವರಿಸಲಿಕ್ಕೆ ಸಿದ್ಧರಾಗಿರುತ್ತಾರೆ. ನಾನು ಬಡವನು. ತೀರ ಸಾಮಾನ್ಯ ವ್ಯಕ್ತಿಯು. ಸುಮ್ಮನೆ ನನ್ನನ್ನು ಅಪರಾಧಿಯನ್ನಾಗಮಾಡಬೇಡಿರಿ.

ಪ್ರಿಯಕರಾ, ನಾನು ಅದನ್ನೆಲ್ಲ ಬಲ್ಲೆನು; ಹಾಗು ನಿಮ್ಮನ್ನು ಮರೆತು ಬಿಡಬೇಕೆಂದು ಎಷ್ಟೋ ಪ್ರಯತ್ನಿಸಿದೆನು; ಆದರೆ ಕಾಲತ್ರಯ ದಲ್ಲಿಯೂ ಅದು ನನ್ನಿಂದ ಸಾಧ್ಯವಾಗದಾಗಿದೆ. ಪ್ರಿಯಕರಾ, ನೀನೇ ನನ್ನ ಪ್ರಾಣವು. ನೀನೇ ನನ್ನ ಆತ್ಮವು. ನನ್ನ ಸ್ವಾರ್ಥದ ಸಲುವಾಗಿ ನಾನು ನಿನಗೆ ಹಲವು ಬಗೆಯ ಕಷ್ಟಗಳನ್ನು ಕೊಟ್ಟೆನು. ಅದಕ್ಕಾಗಿ ಪ್ರಿಯಾ, ನೀನು ನನ್ನನ್ನು ಕ್ಷಮಿಸು. ಸಾಧ್ಯವಾದಷ್ಟು ಹೆಣಗಿ ಇನ್ನು ನಾನು ನಿನ್ನನ್ನು ಇಲ್ಲಿಂದ ಮುಕ್ತಗೊಳಿಸುವ ಉದ್ಯೋಗಕ್ಕೆ ಹತ್ತುತ್ತೇನೆ;

ಆದರೆ ಒಂದು ವೇಳೆ ಅದು ಸಾಧಿಸದಿದ್ದರೆ, ನಾನೂ ನಿನ್ನೊಡನೆ ಇಲ್ಲಿಯೇ ಸತ್ತು ಹೋಗುತ್ತೇನೆ. ನನ್ನ ಪ್ರಯತ್ನವು ಫಲಿಸಿ ಬರಹತ್ತಿದೆ; ಎಂದಂದು ಗುಲ್‌ರುಖಳು ಮತ್ತೊಮ್ಮೆ ಮಯೂಖನ ಪಾದಧೂಳಿಯನ್ನು ತನ್ನ ಶಿರಸ್ಸಿನಲ್ಲಿ ಧರಿಸಿದಳು; ಹಾಗು ತಟ್ಟನೆ ಹೋಗಿ ಆ ಕೋಣೆಯ ಬಾಗಿಲ ವನ್ನು ಬಡಿದಳು. ಕೂಡಲೆ ಒಬ್ಬ ಖೋಜಾನು ಬಂದು ಕದವನ್ನು ತೆರೆದನು.

ಆಗ ಶಹಾಜಾದಿಯು ಗುಲ್‌ರುಖಳನ್ನು ಕುರಿತು:—ಗುಲ್‌ರುಖ, ನಿನ್ನ ಗಂಡನೇನೆಂದನು? ಅವನು ನಿನ್ನನ್ನು ಹೊಂದಲಿಕ್ಕೆ ಒಪ್ಪಿಕೊಂಡನೇ?

ಗುಲ್‌ರುಖಳ ದುಃಖವು ಒತ್ತರಿಸಿತು. ಅದರಿಂದ ಅವಳು ಒಳ್ಳೇ ಕಷ್ಟದಿಂದ:—ಶಹಾಜಾದೀ, ಇಂದಿನ ಮಟ್ಟಿಗೆ ನೀನು ಅವನನ್ನು ಕ್ಷಮಿಸು.

ಶಹಾ:—ಹಾಗಾದರೆ ಅವನು ನಿನ್ನೊಡನೆ ಬಾಳುವೆ ಮಾಡಲಿಕ್ಕೆ ಒಪ್ಪಲಿಲ್ಲವಷ್ಟೆ?

ಗುಲ್‌ರುಖ:—ಒಪ್ಪುತ್ತಾನೆ; ಆದರೆ ಕೆಲವು ಕಾಲ ಕಳೆಯ ಬೇಕಾಗಿದೆ.

ಶಹಾ:—ಅದಾಗದು. ನಿನ್ನ ಗಂಡನಾದ ಅವನು ನನ್ನ ಆಜ್ಞೆಯ ನ್ನುಲ್ಲಂಘಿಸುತ್ತಿರುವದನ್ನು ನಾನು ಸಹಿಸಲಾರೆನು ನಾನು ಈಗಲೆ ಅವ ನನ್ನು ಕೊಲೆ ಮಾಡಿಸುವೆನು; ಹಾಗೂ ನಾಳೆಯೇ ನಿನ್ನ ನಿಕಾ ಮಾಡಿ ಕೊಡುವೆನು.

ಹೀಗೆಂದು ನುಡಿದು ಶಹಾಜಾದಿಯು ಕ್ರುದ್ಧಮುದ್ರೆಯಿಂದ ಮಯೂಖನಿದ್ದ ಆ ಕೋಣೆಯನ್ನು ಪ್ರವೇಶಿಸಿದಳು. ಮಯೂಖನ ಬಳಿಗೆ ಹೋಗಿ ಅವಳು ಮತ್ತೆ ಅವನನ್ನು ಕುರಿತು:—ಸರಪೋಯಾರಖಾನ, ನೀನು ನಿನ್ನ ಹೆಂಡತಿಯೊಡನೆ ಬಾಳುವೆ ಮಾಡುವೆಯಾ?

ಮಯೂಖ:—ಶಹಾಜಾದೀ, ಅವಳು ನನ್ನ ಹೆಂಡತಿಯೇ ಅಲ್ಲ.

ಶಹಾ:—ಲುಚ್ಚಾ, ಮತ್ತೆ ಸುಳ್ಳಾಡುವೆಯಾ?

ಮಯೂಖ:—ಜನ್ಮದಾರಭ್ಯ ನಾನೆಂದೂ ಸುಳ್ಳಾಡಿರುವದಿಲ್ಲ.

ಶಹಾಜಾದಿಯು ಆ ನುಡಿಯನ್ನು ಕೇಳಿ ಒಳ್ಳೇ ತ್ವೇಷದಿಂದ:—ಜಲ್ಲಾದ! ಎಂದು ಕೂಗಿದಳು. ಕೂಡಲೆ ೨೦ ಜನ ನಗ್ನ ಖಡ್ಗಧಾರಿಗಳಾದ ಖೋಜಾಗಳು ಮಯೂಖನನ್ನು ಸುತ್ತುವರಿದು ನಿಂತುಕೊಂಡರು.

ಹನ್ನೆರಡುಜನ ತಾರ್ತರೀ ದಾಸಿಯರು ಕತ್ತಿಗಳನ್ನು ಹಿಡಿದುಕೊಂಡು ನಾಲ್ಕೂ ದಿಕ್ಕಿನ ಗೋಡೆಗಳನ್ನು ಸರಿಸಿ ನಿಂತು ಪಹರೆ ಮಾಡಹತ್ತಿದರು. ಜಲ್ಲಾದನೆಂಬ ಕೊಲೆಗಡಕನು ಮಯೂಖನ ಕೈ ಹಿಡಿದು, ಎಳೆಯ ಹತ್ತಿದನು. ಬೇರೆ ಉಪಾಯವನ್ನೇ ಕಾಣದ ಭವನನು ಮೇಲಿನಿಂದ ಒಮ್ಮೆಲೆ ಜಿಗಿದು, ಶಹಾಜಾದಿಯ ಕಾಲುಗಳನ್ನು ಹಿಡಿದು ಗದ್ಗದ ಕಂಠದಿಂದ:— ಶಹಾಜಾದೀ, ನಾನು ಈ ನಮ್ಮ ರಾಜಪುತ್ರನನ್ನು ಈತನ ಜನ್ಮದಾರಭ್ಯ ಸಂರಕ್ಷಿಸಿರುತ್ತೇನೆ. ಆದುದರಿಂದ ನೀವು ನನ್ನೆದುರಿಗೆ ಈತನನ್ನು ಕೊಲ್ಲ ಬೇಡಿರಿ. ಈತನನ್ನು ಕೊಲ್ಲುವದೇ ನಿಮ್ಮ ಮುಖ್ಯ ಉದ್ದೇಶವಾಗಿದ್ದರೆ, ನೀವು ಮೊದಲು ನನ್ನನ್ನು ಸಂಹರಿಸಿ ಬಳಿಕ ನಿಮ್ಮ ಇಚ್ಛೆಯಂತೆ ನಡಕೊಳ್ಳಬಹುದು, ಎಂದು ಪ್ರಾರ್ಥಿಸಿದನು. ಆದರೆ ಆ ಮುದುಕನ ಆ ಕರುಣಾಪೂರ್ಣ ಪ್ರಾರ್ಥನೆಯನ್ನು ಶಹಾಜಾದಿಯು ಮನ್ನಿಸಲಿಲ್ಲ.

ಎರಡು ಮೂರು ಜನ ಖೋಜ್ಜೇರು ಮಯೂಖನನ್ನು ಅಡ್ಡಗೆಡವಿ, ಅವನ ರುಂಡವನ್ನು ಅಲ್ಲಿಯ ಒಂದು ಕಚ್ಚುಬಡ್ಡಿಯಮೇಲೆ ಇಟ್ಟರು. ಕೊಲೆಗಡಕ ಜಲ್ಲಾದನು ತನ್ನ ತೀಕ್ಷ್ಣಧಾರೆಯ ಕೊಡ್ಲಿಯನ್ನು ಒಳ್ಳೇ ಕಸುವಿನಿಂದ ಎತ್ತಿದನು. ಇನ್ನೊಂದು ನಿಮಿಷದಲ್ಲಿ ಮಯೂಖನ ರುಂಡವು ದಿಂಡದಿಂದ ವಿಂಗಡಿಸಲ್ಪಡತಕ್ಕದ್ದಿತ್ತು. ಅಷ್ಟರಲ್ಲಿ ಆ ಗುಪ್ತಗೃಹದ ಒತ್ತಟ್ಟಿಗಿನ ಗೋಡೆಯು ಒಮ್ಮೆಲೆ ಹಿಂದಕ್ಕೆ ಸರಿದು, ಅಲ್ಲಿ-ಆ ಕಾರ್ಗತ್ತಲೆಯ ಕೋಣೆಯಲ್ಲಿ-ಚಂಡಮಾರ್ತಂಡನ ಪ್ರಚಂಡ ಕಿರಣಗಳು ಪ್ರಕಾಶಗೊಂಡವು. ಅದನ್ನು ಕಂಡ ಅಲ್ಲಿಯವರೆಲ್ಲರ ಕಣ್ಣುಗಳು ಒಮ್ಮೆಲೆ ಕುಕ್ಕಿಹೋದವು! ಕ್ಷಣಾರ್ಧದಲ್ಲಿ ಅಲ್ಲಿಯ ಎಲ್ಲ ಖೋಜಾಗಳೂ, ತಾರ್ತರೀ ದಾಸಿಯರೂ ತಮ್ಮ ಖಡ್ಗಗಳನ್ನು ನೆಲದಮೇಲೆ ಚೆಲ್ಲಿಕೊಟ್ಟು, ನೆಲವನ್ನು ಮುಟ್ಟಿ ಸಲಾಮು ಮಾಡತೊಡಗಿದರು. ಶಹಾಜಾದಿಯ ಮುಖವು ಕಳೆಗುಂದಿತು. ಗುಲರುಖಳ ದೇಹವು ಪುಲಕಿತವಾಯಿತು. ಮಯೂಖನು ಕಣ್ದೆರೆದು ನೋಡುತ್ತಾನೆ, ಆ ಕಾರ್ಗತ್ತಲೆಯ ಕೋಣೆಯ ಒತ್ತಟ್ಟಿಗಿನ ಗೋಡೆಯು ಸರಿದು ಹೋಗಿದ್ದು, ಆ ಕಡೆಗೆ ಪ್ರಶಾಂತಳೂ, ಅಪರೂಪ ಸೌಂದರ್ಯಶಾಲಿನಿಯೂ ಆದ ಓರ್ವ ರಮಣಿಯು ನಿಂತುಕೊಂಡಿರುತ್ತಾಳೆ. ಅವಳನ್ನು ದೃಷ್ಟಿಸಿದೊಡನೆಯೇ ಅವನಲ್ಲಿ ಜೀವಕಳೆಯು ತುಂಬಿದಂತಾಯಿತು. ಆಶಾಂಕುರವು ಉದ್ಭವಿಸಿದಂತಾಯಿತು. ಇಷ್ಟರಲ್ಲಿ ಖೋಜ್ಜೇರು

ಅವನ ತಲೆಯನ್ನು ಬಿಟ್ಟುಬಿಟ್ಟಿದ್ದರು. ಅದರಿಂದ ಅವನು ಓಡುತ್ತ ಹೋಗಿ ಆ ಮಾತೃಸದೃಶ ಮೂರ್ತಿಯ ಪಾದಗಳನ್ನು ಹಿಡಿದುಕೊಂಡು:-- ತಾಯೇ, ನನ್ನನ್ನು ಈ ವಿಪತ್ತಿನಿಂದ ಪಾರುಮಾಡು.

ಆ ಮೂರ್ತಿಯು ಅವನನ್ನು ಹಿಡಿದೆತ್ತಿ, ಅವನ ತಲೆಯ ಮೇಲೆ ಕೈಯಾಡಿಸಿ:-'ತಮ್ಮಾ, ಹೆದರಬೇಡ. ನಿನಗೆ ಇನ್ನಾರ ಭಯವೂ ಇರುವದಿಲ್ಲ.'

ಹೀಗೆ ಮಯೂಖನನ್ನು ಹರಸಿದ ಆ ಸ್ತ್ರೀ ಮೂರ್ತಿಯು ಬೇರೆ ಯಾರೂ ಆಗಿರದೆ, ಶಹಾಜಹಾನ ಬಾದಶಹನ ಮುಖ್ಯ ಬೇಗಮಳಾದ ನವಾಬ ಆಲಿಯಾ ಬೇಗಮಳಾಗಿದ್ದಳು.

---

## ೧೭-ನೇ ತರಂಗ.



# ಮಂತ್ರಾಗಾರ.



ದಿವಾಣ-ಈ-ಆಮ ದರ್ಬಾರವು ಮುಗಿಯಿತು. ಬಾದಶಹನು ತನ್ನ ಸಿಂಹಾಸನದಿಂದ ಎದ್ದನು. ದಿವಾಣ-ಈ-ಆಮ ದರ್ಬಾರದ ಹಿಮ್ಮಗ್ಗಲಿನಲ್ಲಿ ಚಿನ್ನದಿಂದ ನಿರ್ಮಿತವಾದ ಹಾಗು ಮುತ್ತು-ರತ್ನಗಳಿಂದ ಕೆಚ್ಚಲ್ಪಟ್ಟ ವಿಚಿತ್ರ ಪಲ್ಲಕ್ಕಿಯನ್ನು ಹೊತ್ತುಕೊಂಡು ಎಂಟು ಜನ ತಾರ್ತಾರೀ ಬೋವಿಗಳು ಬಾದಶಹನ ಮಾರ್ಗವನ್ನು ನಿರೀಕ್ಷಿಸುತ್ತಿದ್ದರು. ಬಾದಶಹನು ಬಂದು ಆ ಪಲ್ಲಕ್ಕಿಯನ್ನು ಹತ್ತುತ್ತಲೆ ಬೋವಿಗಳು ಅದನ್ನು ತಕ್ಕೊಂಡು ನಡೆದರು. ದಿವಾಣ-ಈ-ಆಮ ದರ್ಬಾರದ ಉಳಿದ ಸಭಾಸದರೆಲ್ಲರೂ ನಗಾರಖಾನೆಯ ಬಾಗಿಲದಿಂದ ಸ್ವಸ್ಥಾನವನ್ನು ಕುರಿತು ತೆರಳಿದರು. ವಜೀರ ಆಸಫಖಾನ, ಶಹಾನವಾಜಖಾನ, ಅಸದಖಾನ, ಕಾಸೀಮಖಾನ, ಇನಾಯತುಲ್ಲಾಖಾನ, ಬಹಾದ್ದರಖಾನ ಮತ್ತು ಡೆಪ್ಯೂಟಿ ಅಮಲ್ದಾರ ಹರೀಕೃಷ್ಣರಾಯ ಇಷರಿಷ್ಟೇ ಜನರು ಮಾತ್ರ ದಿವಾಣ-ಈ-ಆಮ ದರ್ಬಾರದ ಹಿಮ್ಮಗ್ಗಲಿನ ದ್ವಾರದಿಂದ ದಿವಾಣ-ಈ-ಖಾಸ ದರ್ಬಾರ ಗೃಹವನ್ನು ಪ್ರವೇಶಿಸಿದರು. ಅಲ್ಲಿಂದ ಅವರೆಲ್ಲರೂ

ದಿವಾಣ-ಈ-ಖಾಸ ದರ್ಬಾರ ಗೃಹದ ಹಿಮ್ಮಗ್ಗಲಿನ ಮಂತ್ರಾಗಾರ ವನ್ನು ಹೊಕ್ಕರು.

ಮಂತ್ರಾಗಾರವೆಂದರೆ, ಮೊಗಲ ಬಾದಶಹರ ಮಂತ್ರಾಲೋಚನೆಯ ಗೃಹವು. ದಿವಾಣ-ಈ-ಆಮ ದರ್ಬಾರದನಂತರ ಬಾದಶಹನು ಆ ಮಂತ್ರಾ ಗಾರದಲ್ಲಿ ಕುಳಿತು, ಮುಖ್ಯ ಮುಖ್ಯ ಮಂತ್ರಿಗಳೊಡನೆ ಆಲೋಚಿಸಿ, ಅಲ್ಲಿಯೇ ರಾಜ್ಯದಾಢಳಿತದ ಹುಕುಮುಗಳನ್ನು ಬರೆಸುತ್ತಿದ್ದನು; ಹಾಗು ಎಲ್ಲ ಗುಪ್ತ ರಾಜ್ಯ ತಂತ್ರಗಳನ್ನು ಅಲ್ಲಿಯೇ ಮಾಡುತ್ತಿದ್ದನು.

ವಜೀರಾದಿಗಳು ಮಂತ್ರಾಗಾರವನ್ನು ಪ್ರವೇಶಿಸಿ ಬಾಗಿಲ ಬಳಿಯಲ್ಲಿ ಸಾಲಾಗಿ ನಿಂತುಕೊಂಡರು. ಅಷ್ಟರಲ್ಲಿ ಬಾದಶಹನ ಪಲ್ಲಕ್ಕಿಯು ಅಲ್ಲಿಗೆ ಬಂದು ಪಲ್ಲಕ್ಕಿಯಿಂದ ಇಳಿದ ಬಾದಶಹನು ಮಂತ್ರಾಗಾರದೊಳಗಿನ ಸಿಂಹಾಸನದಮೇಲೆ ಹೋಗಿ ಕುಳಿತನು. ಕೂಡಲೆ ವಜೀರನೂ, ವೃದ್ಧ ಶಹಾನಬಿಯಾಜಖಾನನೂ ಸಮೀಪದ ಆಸನಗಳಲ್ಲಿ ಕುಳಿತುಕೊಂಡರು. ಉಳಿದವರು ಅವರನ್ನು ಸುತ್ತುವರೆದು ನಿಂತುಕೊಂಡರು. ಬಳಿಕ ಶಹಾ ಜಿಹಾನ ಬಾದಶಹನು ಆಸಫಖಾನನನ್ನು ಕುರಿತು:—ಸಾಹೇಬ, ನಮ್ಮ ಹೊಸ ಮನಸಬದಾರನೆಲ್ಲಿರುತ್ತಾನೆ? ಎಂದು ಪ್ರಶ್ನ ಮಾಡಿದನು. ಆ ಪ್ರಶ್ನೆಯನ್ನು ಕೇಳಿ ವಜೀರನು ಗೊಂದಲದಲ್ಲಿ ಬಿದ್ದನು. ಆ ಮಂತ್ರಾ ಗಾರದಲ್ಲಿ ಮಯೂಖನ ಸಂಗತಿಯನ್ನು ಪ್ರಕಾಶಪಡಿಸುವದು ಅತ್ಯವಶ್ಯಕ ವಾಗಿದ್ದರೂ, ವಜೀರನು ಹಾಗೆ ಮಾಡಲಿಕ್ಕೆ ಸಂಕೋಚಗೊಂಡು:— ಜಹಾಂಪನಾ, ಬಾದಶಹರ ಆ ಹೊಸ ಸಾವಿರ ಕುದುರೆಯ ಮನಸಬದಾರ ನಾದ ಮಯೂಖನು ನಿನ್ನೆಯಿಂದ ಪತ್ತೆಯಿಲ್ಲದಂತಾಗಿರುತ್ತಾನೆ. ವಜೀರನ ಆ ನುಡಿಯನ್ನು ಕೇಳಿ ಬಾದಶಹನು ವಿಸ್ಮಯಗೊಂಡು:—ಸಾಹೇಬ, ಇದೇ ನನ್ನು ಹೇಳುವಿರಿ? ಆ ಮನುಷ್ಯನು ನಿನ್ನೆ ರಾತ್ರಿಯಲ್ಲಿ ನಮ್ಮ ಬಳಿಗೆ ಬಂದಿರಲಿಲ್ಲವೆ? ಅಂಥವನು ಇಂದು ಬೆಳಗಾಗುವಷ್ಟರಲ್ಲಿ ಪತ್ತೆಯಿಲ್ಲದಂತಾ ದನೇ! ಆಸದಖಾನ, ಈ ಆಗ್ರಾದ ಕೊತವಾಲನನ್ನು ಕರೆಸು.

ಆಸದಖಾನನು ಬಾದಶಹನಿಗೆ ಕುರ್ನಿಸಮಾಡಿ, ಮಂತ್ರಾಗಾರದಿಂದ ಹೊರಹೊರಟನು. ಕೂಡಲೆ ಬಾದಶಹನು ಚಪ್ಪಾಳೆ ಬಡಿದನು. ತತ್‍ಕ್ಷ ಣದಲ್ಲಿ ಒಬ್ಬ ತಾರ್ತರೀ ಜಾತಿಯ ಖೋಜ್ಜೆಯು ಬಂದು ಬಾದಶಹನನ್ನು ಅಭಿವಂದಿಸಿ ನಿಂತುಕೊಂಡನು. ಬಾದಶಹನು ರಂಗಮಹಾಲಿನ ಜಮಾ

ದಾರನಾದ ಗುಲಸೇರಖಾನನನ್ನೂ, ಬಕ್ಷಿಯಾದ ಹಿಮ್ಮತಖಾನ ಯಾಕೂತ ನನ್ನೂ ಕರೆಯಹೇಳಿದನು. ಆ ಕಾರ್ತಾರಿಯು ಮತ್ತು ಬಾದಶಹನನ್ನು ಅಭಿವಂದಿಸಿ ಹೊರಟುಹೋಗಲು, ಬಾದಶಹನು ವಜೀರ ಆಸಫಖಾನನನ್ನು ಕುರಿತು:—ಸಾಹೇಬ, ಸುರತದ ಇಂಗ್ಲಿಷರ ಕಡೆಯ ವಕೀಲನೂ, ಬಂಗಾಲ ದೇಶದ ಆ ಹಿಂದೂ ಫಕೀರರೂ ಹಾಜರಿರುವರೋ? ಎಂದು ಕೇಳಲು, "ಜನಾಬಅಲಿ, ಅವರೆಲ್ಲರೂ ಹಾಜರಿರುತ್ತಾರೆ;" ಎಂದು ಆಸಫಖಾನನು ವಿನಯದಿಂದ ತಿಳಿಸಿದನು.

ಆಸಫಖಾನನು ಬಾದಶಹನಿಗೆ ಈ ಪ್ರಕಾರದ ಉತ್ತರವನ್ನು ಕೊಟ್ಟು ಹಿಮ್ಮೆ ಚಪ್ಪಾಳೆ ಬಾರಿಸಿದನು. ಕೂಡಲೆ ಆ ಮಂತ್ರಾಗಾರದ ಹವಾಲದಾರನಾದ ಅಮಾನತಖಾನನು ಅಸದಖಾನನನ್ನು ಅಭಿವಂದಿಸಿ ನಿಂತುಕೊಳ್ಳಲು, "ಖಾಸಚೌಕಿಯ ಮನಸಬದಾರನಾದ ಶಾಹಿಸ್ತೇಖಾನ ನನ್ನು ಕರೆ" ಎಂದು ವಜೀರನು ಅವನಿಗೆ ಹೇಳಿದನು ಅಲ್ಪಾವಧಿಯಲ್ಲೇ ವಜೀರನ ಮಗನಾದ ಶಾಹಿಸ್ತೇಖಾನನು ಬಂದು ಬಾದಶಹನಿಗೂ ವಜೀ ರನಿಗೂ ಕುರ್ನಿಸಮಾಡಿದನು. ಆಗ ಆಸಫಖಾನನು ತನ್ನ ಮಗನಿಗೆ ಹೇಳಿ ದನೇನಂದರೆ:—ಸುರತದ ಆ ಇಂಗ್ಲಿಷ ವಕೀಲನನ್ನೂ, ಬಂಗಾಲದೇಶದ ಆ ಹಿಂದೂ ಫಕೀರರನ್ನೂ ಇಲ್ಲಿಗೆ ಕರೆತರಬೇಕು. ಶಾಹಿಸ್ತೇಖಾನನು ಮುಂದೆ ಸ್ವಲ್ಪ ಹೊತ್ತಿನಲ್ಲಿಯೇ ಇಂಗ್ಲಿಷವಕೀಲ ಓಯಾಲ್ಡ, ತರ್ಕರತ್ನ ಭಟ್ಟಾಚಾರ್ಯರನ್ನು ಬಾದಶಹನ ಆ ಮಂತ್ರಾಗಾರಕ್ಕೆ ಕರೆತಂದನು. ಚೈತನ್ಯದಾಸಬ್ಬೈರಾಗಿಯನ್ನು ಇಬ್ಬರು ಸೇವಕರು ಬಗಲಲ್ಲಿ ಕೈಹಾಕಿಕೊಂಡು ತಂದರು. ಅವನು ಬಾದಶಹನೆದುರಿಗೆ ಬರುತ್ತಲೇ ನೆಲದ ಮೇಲೆ ಉರುಳಿ ಕೊಂಡು ಬಿಟ್ಟನು! ಇಷ್ಟರಲ್ಲಿ ಆಗ್ರ್ರದ ಕೊತವಾಲನಾದ ಜಾಫರಖಾ ನನು ಅಲ್ಲಿಗೆ ಬಂದು ಬಾದಶಹನನ್ನು ಅಭಿವಂದಿಸಿ ನಿಂತುಕೊಂಡನು.

ಜಾಫರಖಾನನನ್ನು ಕಂಡು ಬಾದಶಹನು ಅತ್ಯಂತ ರೇಗಿಗೆದ್ದು:—ಜಾಫರಖಾನ, ನೀನು ನಮ್ಮ ಖ್ವಾಜಾಅಬ್ದುಲ್ಲಹುಸೇನನ ಮಗನು ಅಂತೇ ನಿನಗೆ ಈ ನಮ್ಮ ರಾಜಧಾನಿಯ ಅತ್ಯಂತ ಮಹತ್ವದ ಕೊತವಾಲಿಕೆಯನ್ನು ಕೊಟ್ಟಿರುತ್ತೇವೆ; ಆದರೆ ನಿನ್ನ ಈ ದಿವಸ ಅಜಾಗರೂಕತೆಯನ್ನು ಕಂಡು ನೀನು ಈ ಕೆಲಸಕ್ಕೆ ತೀರ ಅಯೋಗ್ಯನೆಂದು ನಮಗೆನಿಸಿರುತ್ತದೆ. ನಿನ್ನಿನ ರಾತ್ರಿಯಲ್ಲಿ ಹಿಬ್ಬ ಬಂಗಾಲೀ ತರುಣನನ್ನು ನಾವು ಸಾವಿರ ಕುದುರೆಯ

ಮನಸಬದಾರನನ್ನಾಗಿ ನೇಮಿಸಿರುತ್ತೇವೆ. ನಿನ್ನೆ ರಾತ್ರಿಯ ಮೊದಲನೇ ಪ್ರಹರದ ಕೊನೆಯ ವರೆಗೆ ಅವನು ನಮ್ಮ ದಿವಾಣ-ಈ ಖಾಸ ದರ್ಬಾರ ದಲ್ಲಿ ಹಾಜರಿದ್ದನು. ಅವನು ಇಲ್ಲಿಂದ ತನ್ನ ಮನೆಗೆಂದು ಹೊರಟವನು ಮನೆಗೆ ತಲುಪಲೇ ಇಲ್ಲವಂತೆ. ನಿನಗೆ ಈ ಬಗ್ಗೆ ಏನಾದರೂ ಸಂಗತಿ ತಿಳಿದಿದೆಯೋ?

ಜಾಫರಖಾನನು ಅವನತ ಮುಖದಿಂದ ಗೊತ್ತಿಲ್ಲವೆಂದು ಮೆಲ್ಲಗೆ ಹೇಳಿದನು.

ಜಾಫರಖಾನ, ಇಂದು ರಾತ್ರಿಯು ದಿವಾಣ-ಈ-ಖಾಸ ದರ್ಬಾರದಲ್ಲಿ ಅವನ ಸಂಬಂಧದ ವೃತ್ತಾಂತವನ್ನು ನೀನು ಬಂದು ತಿಳಿಸದಿದ್ದರೆ, ನಿನ್ನನ್ನು ಈ ಆಗ್ರಾದಿಂದ ಹೊರಗೆ ಹಾಕಿಸುತ್ತೇವೆ. ನಿನ್ನನ್ನು ಹಾಗೆಯೇ ಹೊರಗೆ ಹಾಕಿಸುತ್ತೇವೆಂದು ತಿಳಿಯಬೇಡ; ನಿನ್ನ ಗಡ್ಡ-ಮೀಸೆಗಳನ್ನು ಬೋಳಿಸಿ, ನಿನ್ನ ಕೈಯಲ್ಲಿ ಬಳೆ ತೊಡಿಸಿ ನಿನಗೆ ಸೀರೆ ಉಡಿಸಿ,ಕತ್ತೆಯ ಮೇಲೆ ಕೂಡ್ರಿಸಿ ಈ ಊರತುಂಬ ಮೆರಿಸಿ, ನಿನ್ನನ್ನು ಹೊರಗೆ ಹಾಕಿಸುತ್ತೇವೆಂಬದನ್ನು ಚೆನ್ನಾಗಿ ನೆನಪಿಟ್ಟುಕೋ, ನಡೆ.

ಆಗ್ರಾದ ಕೊತವಾಲನಾದ ಜಾಫರಖಾನನು ನಡಗುತ್ತ ಬಾದಶಹ ನನ್ನು ಅಭಿವಂದಿಸಿ ತನ್ನ ಕೆಲಸಕ್ಕೆ ಹೊಂಟುಹೋದನು. ಕೊತವಾಲನು ಹೊರಟು ಹೋದ ಬಳಿಕ ವಜೀರನು ಸಂಧಿಯನ್ನು ಸಾಧಿಸಿ ಬಾದಶಹನ ಕಿವಿಯಲ್ಲಿ ಮೆಲ್ಲಗೆ ಹೇಳುತ್ತಾನೆ:—ಜಹಾಂಪನಾ, ಇದರಲ್ಲಿ ಜಾಫರಖಾನ ಕೊತವಾಲನ ಅಪರಾಧವಿಲ್ಲ. ರಂಗಮಹಲಿನ ಬಕ್ಷಿಯಾದ ಹಿಮ್ಮತಖಾನ ಯಾಕೂತ, ಜಮಾದಾರ ಗುಲ್‌ಸೇರಖಾನ ಹಾಗು ಅಲ್ಲಿಯ ಸರದಾರಿಣಿ ಯಾದ ಮೇಹಿದೀ ಬಿಬಿ ಇವರಿಗೆ ಆ ಹೊಸ ಮನಸಬದಾರನ ವಿಷಯವು ಗೊತ್ತಿರುವಂತೆ ತಿಳಿಯುತ್ತದೆ. ಈ ಸಂಗತಿಯನ್ನು ಕೇಳಿ ಬಾದಶಹನು ವಿಸ್ಮಯವಿಸ್ಫೂರಿತ ನೇತ್ರಗಳಿಂದ ವಜೀರನ ಕಡೆಗೆ ನೋಡಹತ್ತಿದನು.

ಇದೇ ಸಮಯಕ್ಕೆ ಇಂಗ್ಲಿಷವಕೀಲನಾದ ಓಯಾಲ್ಡನು ಬಾದಶಹ ನಿಗೆ ಕುರ್ನಿಸವಾಡಿದನು. ಅವನ ಹತ್ತರವೇ ಬಿದ್ದುಕೊಂಡಿದ್ದ ಆ ಚೈತನ್ಯ ದಾಸಬೈರಾಗಿಯ ಕಡೆಗೆ ಬಾದಶಹನ ದೃಷ್ಟಿಯು ತಿರುಗಲು, ಬಾದಶಹನು ಆ ಬಡ ಪ್ರಾಣಿಯ ವಿಕಲಾಂಗಗಳನ್ನು ಕಂಡು ಮನದಲ್ಲಿ ನೊಂದು ಕೊಂಡು ಶಹಾನಬಯಾಜಖಾನನ ಕಡೆಗೆ ನೋಡಲು, ಅವನು:—ಜನಾಬ,

ಆಲಿ, ಫಿರಂಗಿ ಪಾದ್ರಿಗಳು ಇವನ ದೇಹದ ಎಲವುಗಳನ್ನೆಲ್ಲ ಪುಡಿ ಪುಡಿ ಮಾಡಿರುತ್ತಾರೆ ಇವನಿಗೆ ಎದ್ದು ನಿಲ್ಲಲಿಕ್ಕೂ ಕೂಡ ಶಕ್ತಿಯಿಲ್ಲದಾಗಿದೆ, ಎಂದನು.

ಬಾದಶಹ:—ನಬಾಬಸಾಹೇಬ, ಆನೀಚ ಫಿರಂಗಿಪಾದ್ರಿಗಳು ಇವನ ಎಲುವುಗಳನ್ನು ಪುಡಿ ಪುಡಿ ಮಾಡಿದ ಕಾರಣವೇನು?

ಶಹಾನಶಹಾ, ಅದನ್ನೆಲ್ಲ ಈ ಹಿಂದೂಫಕೀರನಿಂದಲೇ ತಿಳಿಯುವದು ಉಕ್ತವಾಗಿದೆ, ಎಂದು ನಬಾಬನು ಹೇಳಲು, ವಜೀರನ ಆಜ್ಞೆಯು ಮೇರೆಗೆ ಹರೇಕೃಷ್ಣರಾಯನು ದುಭಾಷಿಯಕೆಲಸವನ್ನು ಕೈಕೊಂಡು ಬಾದಶಹನಪ್ರಶ್ನೆಗಳನ್ನು ಭಾಷಾಂತರಮಾಡಿ ಚೈತನ್ಯದಾಸನಿಗೆ ಕೇಳುತ್ತಲೂ, ಅವನ ಉತ್ತರಗಳನ್ನು ತರ್ಜುಮೆಮಾಡಿ ಬಾದಶಹನಿಗೆ ತಿಳಿಸುತ್ತಲೂ ನಿಂತುಕೊಂಡನು.

ಬಾದ:—ಹಿಂದೂಫಕೀರ, ಆ ಫಿರಂಗಿಪಾದ್ರಿಗಳು ನಿನ್ನ ಮೇಲೆ ಈ ತರದ ಅತ್ಯಾಚಾರವನ್ನೇಕೆ ಮಾಡಿದರು?

ಚೈತನ್ಯ:—ಅವರು ನನ್ನ ಬಂಧುಗಳು; ಅದಕ್ಕಾಗಿ ಹಾಗೆ ಮಾಡಿರುತ್ತಾರೆ.

ಬಾದ:—ಅವರು ನಿನ್ನ ಬಂಧುಗಳೇ! ಎಂದು ಆಶ್ಚರ್ಯಭರದಿಂದ ಕೇಳಲು,

ಚೈತನ್ಯ:—ಮಹಾರಾಜ, ಯಾವನು ಸರಳ ದಾರಿಯನ್ನು ಬಿಟ್ಟು ಅಡ್ಡದಾರಿಗೆ ಬಿದ್ದಿರುವನೋ, ಅವನನ್ನು ನಿಜ ಮಾರ್ಗಕ್ಕೆ ಹಚ್ಚುವವರು ಬಂಧುಗಳಲ್ಲದೆ ಮತ್ತೇನು?

ಬಾದ:—ದಾರಿ ತಪ್ಪಿ ನೀನು ಅವರ ಹುಗಳಿಗೆ ಹೋಗಿದ್ದೆಯೇನು?

ಚೈತನ್ಯ:—ಇಲ್ಲ ಬೇಕಂತಲೇ ಅಲ್ಲಿಗೆ ಹೋಗಿದ್ದೆನು.

ಬಾದ:—ಹಾಗಾದರೆ ನೀನು ದಾರಿ ತಪ್ಪಿದುದು ಹೇಗೆ?

ಚೈತನ್ಯ:—ಮಹಾರಾಜ, ಬೈರಾಗಿಯಾಗಿ ದ್ರವ್ಯಲೋಭಕ್ಕೆ ಮನಸ್ಸು ಮಾಡಿದ್ದು ದಾರಿತಪ್ಪಿದಂತಾಗಲಿಲ್ಲವೆ?

ಬಾದ:—ಪೋರ್ತುಗೀಜ ಫಿರಂಗಿಗಳು ನಿನ್ನ ಮೇಲೆ ಅತ್ಯಾಚಾರ ಮಾಡಿದ್ದೇಕೆ?

ಚೈತನ್ಯ:—ಶ್ರೀ ಕೃಷ್ಣಪರಮಾತ್ಮನ ಆಜ್ಞೆಯು ಮೇರೆಗೆ.

ಬಾದ:—ಯಾವ ಕೃಷ್ಣನು?

ಚೈತನ್ಯ:—ಯಾವನು ಅಖಿಲ ವಿಶ್ವಕ್ಕೆ ಒಡೆಯನೋ, ರಾಜರ ರಾಜನೋ, ಬಾದಶಹರ ಬಾದಶಹನೋ, ನನ್ನ ನಿಮ್ಮ ಎಲ್ಲರ ಪ್ರಭುವೋ, ಆ ಜಗದೀಶನಾದ ಶ್ರೀ ಕೃಷ್ಣಪರಮಾತ್ಮನು.

ಚೈತನ್ಯದಾಸ ಬೈರಾಗಿಯ ಆ ನುಡಿಯನ್ನು ಕೇಳಿ ಬಾದಶಹನು ಗಹಗಹಿಸಿ ನಕ್ಕನು. ಬಳಿಕ:—ಬೈರಾಗೀ, ದೇವರು ನಿನ್ನ ಮೇಲೆ ಅತ್ಯಾಚಾರ ಮಾಡುವದಕ್ಕಾಗಿ ಆ ನೀಚ ಫಿರಂಗಿ ಪಾದ್ರಿಗಳಿಗೆ ಹೇಳಿದನೇನು?

ಚೈತನ್ಯ:—ಖಂಡಿತವು. ಹಾಗಿಲ್ಲದಿದ್ದರೆ ಒಬ್ಬ ಮನುಷ್ಯನು ಬೇರೊಬ್ಬ ಮನುಷ್ಯನ ಮೈಮೇಲೆ ಕೈಮಾಡಲಿಕ್ಕೆ ಸಾಧ್ಯವೇ?

ಬಾದ:—ಫಕೀರ, ನಿನಗೆ ಹುಚ್ಚುಗಿಚ್ಚು ಹಿಡಿದಿಲ್ಲವಷ್ಟೇ?

ಚೈತನ್ಯ:--ಮಹಾರಾಜ, ಲೋಭ-ಮೋಹಗಳ ಜಾಲದಲ್ಲಿ ಯಾವಾಗ ನಾನು ಸಿಲುಕಿದ್ದೆನೋ, ಆಗ ನಾನು ನಿಜವಾಗಿಯೇ ಹುಚ್ಚನಾಗಿದ್ದೆನು; ಆದರೆ ಆ ಮನಮೋಹನನ ದಯೆಯಿಂದ ನನ್ನಲ್ಲಿಯ ಆ ಹುಚ್ಚು-ಬೆಪ್ಪುಗಳು ನಿರ್ನಾಮವಾಗಿ ಹೋಗಿವೆ.

ಅದೇ ಕಾಲಕ್ಕೆ ಆಸದಖಾನನು ನಡುವೆ ಬಾಯಿಹಾಕಿ ಬಾದಶಹನಿಗೆ ಅರಿಕೆಮಾಡಿಕೊಂಡನೇನಂದರೆ:--ಜಹಾಂಪನಾ, ಈ ಬ್ರಾಹ್ಮಣನು ಆ ಕಾಲಕ್ಕೆ ಹುಗಳಿಯಲ್ಲೇ ಇದ್ದನು. ಇವನಿಗೆ ಆ ಫಿರಂಗಿ ಪಾದ್ರಿಗಳ ಅತ್ಯಾಚಾರದ ಸಂಗತಿಯೆಲ್ಲ ಚೆನ್ನಾಗಿ ಗೊತ್ತಿದೆ. ಜನಾಬ ಆಲಿಯವರು ಇವನನ್ನು ಕೇಳಿ ತಿಳಿಯಬಹುದು, ಎಂದು ಹೇಳಿದರು.

ಬಾದಶಹನ ಅಪ್ಪಣೆಯ ಮೇರೆಗೆ ತರ್ಕರತ್ನಭಟ್ಟಾಚಾರ್ಯನು ಚೈತನ್ಯದಾಸನನ್ನು ನಿಷ್ಕಾರಣವಾಗಿ ಆ ದೊಡ್ಡ ಗಾಲಿಗೆ ಕಟ್ಟಿ ಪಾದ್ರಿಗಳು ಅವನ ಮೈಎಲುವುಗಳನ್ನು ಪುಡಿಪುಡಿ ಮಾಡಿದ ಸಮಸ್ತ ಸಂಗತಿಯನ್ನೂ ವಿವರಿಸಿ ಹೇಳಿದನು ಆ ಕರುಣಾಜನಕ ಸಂಗತಿಯನ್ನು ಕೇಳಿ ಬಾದಶಹನ ಮೈನಡುಗಿತು. ಆಗ ಬಾದಶಹನು ಓಯಾಲ್ಡನನ್ನು ಕುರಿತು:—ಇಂಗ್ಲಿಷ ಫಿರಂಗೀ, ನಿಮ್ಮ ಕಡೆಯ ಎಲ್ಲ ಫಿರಂಗಿ ಪಾದ್ರಿಗಳು ಇದೇ ಬಗೆಯ ಅತ್ಯಾಚಾರಗಳನ್ನು ಮಾಡುತ್ತಿರುತ್ತಾರೇನು?

ನತಮುಖದಿಂದ ಓಯಾಲ್ಡನು:—ಜಹಾಂಪನಾ, ನಮ್ಮ ಕ್ರಿಶ್ಚನ್ ಸಮಾಜದಲ್ಲಿ ಪೋರ್ತುಗೀಜ ಹಾಗು ಸ್ಪೇನದೇಶದ ಪಾದ್ರಿಗಳು ಮಾತ್ರ ಇಂಥ ಅತ್ಯಾಚಾರಿಗಳಿರುತ್ತಾರೆ. ಈ ಭರತಖಂಡದವರಿಗೆ ಆ ಪಾದ್ರಿಗಳ

ಅತ್ಯಾಚಾರಗಳ ಅನುಭವವಿಲ್ಲ. ಅವರು ಸ್ವದೇಶದಲ್ಲಿ ಅನ್ಯ ಮತದ ಕ್ರಿಶ್ಚನ್ನರ ಮೇಲೆ ಕೂಡ ಆಗಾಗ್ಗೆ ಭಯಂಕರ ಅತ್ಯಾಚಾರಗಳನ್ನು ಮಾಡುತ್ತಿರುತ್ತಾರೆ.

ಬಾದ:—ಹಾಗಾದರೆ ನಮ್ಮ ರಾಜ್ಯದಲ್ಲಿ ಇಂಥ ನೀಚರನ್ನು ಉಳಿಯುಗೊಡಲಾಗದು.

ಓಯಾಲ್ಡ:—ಶಹಾನಶಹರ ದರ್ಬಾರಿಗೆ ಈ ಮೊದಲೆಷ್ಟೋ ಸಾರೆ ಪೋರ್ತುಗೀಜರು ನಮ್ಮ ಮೇಲೆ ಮಾಡಿದ ಅತ್ಯಾಚಾರಗಳ ವರದಿಗಳನ್ನು ಕಳಿಸಿರುತ್ತೇವೆ. ಆದರೂ ದರ್ಬಾರದಿಂದ ಅವರ ಅತ್ಯಾಚಾರಕ್ಕೆ ಈ ವರೆಗೂ ತಡೆಯುಂಟಾಗಿರುವದಿಲ್ಲ.

ಬಾದ:—ಓಯಾಲ್ಡ, ನೀವೂ ಫಿರಂಗಿಗಳು; ಪೋರ್ತುಗೀಜರೂ ಫಿರಂಗಿಗಳು. ಇಬ್ಬರೂ ಈ ದೇಶಕ್ಕೆ ವ್ಯಾಪಾರಕ್ಕಾಗಿ ಬಂದಿರುತ್ತೀರಿ. ನಿಮ್ಮ ನಿಮ್ಮೊಳಗಿನ ಈರ್ಷೆಗಾಗಿ ನೀವು ಅವರ ವಿರುದ್ಧ ಹೀಗೆ ಏನಾದರೊಂದು ಹೇಳುತ್ತಿರಬಹುದೆಂದು ನಾವು ತಿಳಿದಿದ್ದೆವು. ನಮ್ಮ ಪ್ರಜೆಗಳ ಮೇಲಿನ ಅವರ ಅತ್ಯಾಚಾರವು ಇದೇ ಮೊದಲಿನದಾಗಿ ತೋರುತ್ತದಲ್ಲವೇ?

ಓಯಾಲ್ಡ:—ಜಹಾಂಪನಾ, ಬಾದಶಾಹೀ ರಾಜ್ಯದ ಬಡಪ್ರಜೆಗಳ ಎಲ್ಲ ದೂರುಗಳು ಬಾದಶಹರ ಕಿವಿಗೆ ಬೀಳುವ ಸಂಭವವೇ ಇರುವದಿಲ್ಲ; ಎಂದಂದು ವಜೀರನ ಕಡೆಗೆ ವಕ್ರದೃಷ್ಟಿಯಿಂದ ನೋಡಿದನು.

ಕೂಡಲೆ ವಜೀರನು:—ಜಹಾಂಪನಾ, ನಡುನಡುವೆ ಈ ಬಗೆಯ ದೂರಿನ ಪತ್ರಗಳು ದರ್ಬಾರಿಗೆ ಬರುತ್ತಿದ್ದವು; ಆದರೆ ಜನಾಬ ಅಲಿಯುವರಿಗೆ ಅವನ್ನೆಲ್ಲ ಕೇಳಿಕೊಳ್ಳಲಿಕ್ಕೆ ಸಮಯವಿರದ್ದರಿಂದ ಅವುಗಳಲ್ಲಿಯ ಕೆಲ ಮುಖ್ಯಮುಖ್ಯ ಪತ್ರಗಳ ಸಂಗತಿಗಳನ್ನಷ್ಟು ಶಹಾನಶಹರಿಗೆ ನಿವೇದಿಸಿ, ಉಳಿದ ಪತ್ರಗಳನ್ನೆಲ್ಲ ರಂಗಮಹಾಲಿಗೆ ಕಳಿಸುತ್ತಿದ್ದೆನು

ಬಾದ:—ವಜೀರಸಾಹೇಬ, ಈ ಮೊದಲು ಫಿರಂಗಿಗಳ ಅತ್ಯಾಚಾರಗಳ ಪತ್ರಗಳು ನಮ್ಮ ದರ್ಬಾರಿಗೆ ಬಂದಿದ್ದವೇ? ಅವನ್ನು ನಮಗೆ ಓದಿ ತೋರಿಸಿದ್ದಿರಾ?

ವಜೀರ:—ಅಹುದು. ಅಹಮ್ಮದಾಬಾದ, ಸುರತ, ಸಪ್ತಗ್ರಾಮ, ಜಹಾಂಗೀರನಗರ ಮುಂತಾದ ಕಡೆಯಿಂದ ಇಂಥ ಪತ್ರಗಳು ಬಂದಿದ್ದವು.

ಬಾದ:—ಸಾಹೇಬ, ಅದು ಹೇಗೆಯೇ ಇರಲಿ; ಇನ್ನು ಮುಂದೆ

ಬಂಗಾಲಸುಭೆಯು ಹಾಗು ಗುಜರಾಥಸುಭೆಯು ಎಲ್ಲ ಪತ್ರವ್ಯವಹಾರವನ್ನು ನನಗೆ ತೋರಿಸಲಿಕ್ಕೆ ತಪ್ಪಲಾಗದು, ಎನ್ನಲು, ವಜೀರನು ತಲೆಬಾಗಿ ಅದಕ್ಕೆ ಒಪ್ಪಿಕೊಂಡನು. ಬಳಿಕ ಬಾದಶಹನು ಇಂಗ್ಲಿಷವಕೀಲನನ್ನು ಕುರಿತು:— ಓಯಾಲ್ಡ ಸಾಹೇಬ, ಇನ್ನುಮೇಲೆ ನಮ್ಮ ಕಾಸೀಮಖಾನನು ಬಂಗಾಲದ ಸುಭೇದಾರನಾಗಿ ಹೊರಡುತ್ತಾನೆ. ನಾವು ಇನ್ನುಮೇಲೆ ಬಂಗಾಲ ಹಾಗು ಗುಜರಾಥ ದೇಶದೊಳಗಿನ ಪೋರ್ತುಗೀಜಫಿರಂಗಿಗಳನ್ನು ದಂಡಿಸಿ, ಅಲ್ಲಿಂದ ಹೊರಗಟ್ಟಬೇಕೆಂದಿರುತ್ತೇವೆ. ನೀವು ಪೋರ್ತುಗೀಜರನ್ನು ದ್ವೇಷಿಸುವಿರಷ್ಟೇ?

ಓಯಾಲ್ಡ:—ನಮ್ಮ ಅವರ ನಡುವೆ ನೂರಾರು ವರ್ಷಗಳಿಂದ ಎಡಬಿಡದೆ ರಣಸಂಗ್ರಾಮವು ನಡದೇ ಇದೆ.

ಬಾದ:—ಹಾಗಾದರೆ ನೀವು ಅವರ ಹಡಗಗಳನ್ನು ಖಂಬಾಯತ, ಹುಗಳಿ ಹಾಗು ಇರಾಣೀ ಆಖಾತಗಳಲ್ಲಿ ಹಿಡಿದು ಪ್ರತಿಬಂಧಿಸಬಲ್ಲಿರಾ?

ಓಯಾಲ್ಡ:—ಬಾದಶಹರ ಅಪ್ಪಣೆಯಾದರೆ ಸಹಜವಾಗಿ ಪ್ರತಿಬಂಧಿಸುತ್ತೇವೆ.

ಬಾದಶಹನು ಇನ್ನು ಆ ಇಂಗ್ಲಿಷವಕೀಲನಿಗೆ ಏನೇನೋ ಹೇಳತಕ್ಕವನಿದ್ದನು. ಅಷ್ಟರಲ್ಲಿ ಶಾಹಿಸ್ತೇಖಾನನು ಅಲ್ಲಿಗೆ ಬಂದು ಬಾದಶಹನನ್ನು ಕುರಿತು:—ಜನಾಬಆಲಿ, ಒಬ್ಬ ಹಿಂದೂ ಫಕೀರನು ನಗಾರಖಾನೆಯ ಬಾಗಿಲಲ್ಲಿ ನಿಂತು ಬಾದಶಹರ ಭೆಟ್ಟಿಗಾಗಿ ನಿರೀಕ್ಷಣೆಮಾಡುತ್ತಿರುವನು. ಅವನ ಬಳಿಯಲ್ಲಿ ಶಹಾನಶಹಾರ ಹೆಸರಿನ ಉಂಗುರವಿರುತ್ತದೆ.

ಶಾಹಿಸ್ತೇಖಾನನ ಮಾತು ಕೇಳಿ ಬಾದಶಹನು ಕ್ಷಣಕಾಲ ವಿಚಾರಮಗ್ನನಾಗಿ ಬಳಿಕ:—ಖಾನಸಾಹೇಬ, ನನ್ನ ಹೆಸರಿನ ಉಂಗುರವು ಒಬ್ಬ ಹಿಂದೂ ಫಕೀರನ ಬಳಿಯಲ್ಲಿರುವದು ನಿಜವು. ಆತನು ಸ್ವತಃ ನನ್ನ ಹಾಗು ನನ್ನ ಪ್ರಿಯ ನಬಾಬ ಆಲಿಯಾ ಬೇಗಮಳ ಪರಮ ಮಿತ್ರನು. ನೀವು ಅವನನ್ನು ಶೀಘ್ರವಾಗಿ ಸನ್ಮಾನಪೂರ್ವಕ ಕರಕೊಂಡು ಬನ್ನಿರಿ, ಎಂದು ಹೇಳಿದನು.

ಬಳಿಕ ಬಾದಶಹನು ಓಯಾಲ್ಡನನ್ನು ಕುರಿತು:—ಇಂಗ್ಲಿಷ ಫಿರಂಗಿ, ನೀನಿನ್ನು ಸುರತಿಗೆ ಹೊರಟುಹೋಗಿ ಯುದ್ಧದ ಸಿದ್ಧತೆಯನ್ನು ನಡಿಸು.

ಓಯಾಲ್ಡ:—ನಾನು ಈ ಮೊದಲೇ ಹೊರಟುಹೋಗುತ್ತಿದ್ದೆನು; ಆದರೆ ಈ ಮೊದಲು ಬಾದಶಹರವರು ಅಪ್ಪಣೆಯಿತ್ತಂತೆ ಈ ದೇಶದಲ್ಲಿ

ಬೇಕಾದಲ್ಲಿ ವ್ಯಾಪಾರಮಾಡುವ ವಿಷಯದ ಬಾದಶಹರವರ ಹುಕುಮಿನ ಸಲುವಾಗಿ ನಿಂತಿರುವೆನು, ಎಂದು ಅನ್ನಲು, ಬಾದಶಹನು ವಜೀರನಿಗೆ ಹೇಳಿ ಆ ಹುಕುಮನ್ನು ಕೊಡಿಸಿದನು. ಕೂಡಲೆ ಓಯಾಲ್ಡನು ಬಾದಶಹನಿಗೆ ಕುರ್ನಿಸ ಮಾಡಿ ಹೊರಟುಹೋದನು.

ಓಯಾಲ್ಡನು ಹೊರಟುಹೋದ ಕೆಲಕ್ಷಣಗಳಲ್ಲೇ ಒಬ್ಬ ದೀರ್ಘ ಕಾಯದ ಗೌರವರ್ಣದ ತೇಜಃಪುಂಜ ಸಂನ್ಯಾಸಿಯು ಆ ಮಂತ್ರಾಗಾರ ವನ್ನು ಪ್ರವೇಶಿಸಿದನು. ಆ ಮೂರ್ತಿಯು ದೂರಿನಿಂದ ಕಾಣಹತ್ತುತ್ತಲೆ ಬಾದಶಹನು ಸಿಂಹಾಸನದಿಂದ ಎದ್ದು ಆ ಮಂತ್ರಾಗಾರದ ಬಾಗಿಲದ ವರೆಗೆ ಬಂದು ಎದುರ್ಗೊಂಡು ಸನ್ಮಾನಿಸಿದನು. ಬಾದಶಹನೇ ಆ ಸಂನ್ಯಾ ಸಿಯನ್ನು ಅಷ್ಟು ಆದರಿಸಿದ ಬಳಿಕ ಮಿಕ್ಕ ಸಭಿಕರೆಲ್ಲರೂ ಅವನನ್ನು ಸನ್ಮಾ ನಿಸಿದರೆಂದು ಬೇರೆ ಹೇಳುವ ಕಾರಣವೇ ಇಲ್ಲ. ಸಂನ್ಯಾಸಿಯು ಬಾದಶಹನಿಗೆ ಕುರ್ನಿಸ ಮುಂತಾದುದನ್ನು ಮಾಡದೆ ತನ್ನ ಪದ್ಧತಿಯ ಮೇರೆಗೆ ಬಾದಶಹ ನನ್ನು ಆಶೀರ್ವದಿಸಿದನು. ಹರೀಕೃಷ್ಣರಾಯನು ಸಂನ್ಯಾಸಿಯ ಚರಣ ಗಳ ಮೇಲೆ ತನ್ನ ಶಿರವನ್ನಿಟ್ಟು ನಮಸ್ಕರಿಸಿದನು. ಅಷ್ಟರಲ್ಲಿ ಬಾದಶ ಹನ ಸಿಂಹಾಸನದೆದುರಿಗಿನ ಎತ್ತರದ ಸ್ಥಳದಲ್ಲಿ ಒಂದು ಕೃಷ್ಣಾಜಿನವು ಮಂಡಿಸಲ್ಪಟ್ಟಿತು. ಸಂನ್ಯಾಸಿಯು ಆಸನಾಧಿಷ್ಠಿತನಾದ ಬಳಿಕ ಬಾದಶ ಹನೂ ಸಭಿಕರೂ ತಮ್ಮತಮ್ಮ ಸ್ಥಾನಗಳನ್ನಲಂಕರಿಸಿದರು ಆಗ ಸಂನ್ಯಾ ಸಿಯು ಅನ್ನುತ್ತಾನೆ:—ಜಹಾಂಪನಾ, ಇಂದು ಈ ಬಾದಶಾಹೀ ದರ್ಬಾ ರಿಗೆ ಭಿಕ್ಷೆಬೇಡುವದಕ್ಕಾಗಿ ಬಂದಿರುತ್ತೇವೆ.

ಬಾದಶಹನು ನಸುನಕ್ಕು:—ತಮಗೆ ಕೊಡದಂಥ ವಸ್ತುವೇ ನನ್ನ ಲ್ಲಿಲ್ಲ. ತಾವು ಹಿಂದಕ್ಕೆ ಹುಗಳಿಯಲ್ಲಿ ನನ್ನ ಪ್ರಾಣವನ್ನೂ ಮಾನವನ್ನೂ ರಕ್ಷಿಸಿರುತ್ತೀರಿ. ಆದುದರಿಂದ ತಾವು ಬೇಕಾದಾಗ ಬೇಕಾದ್ದನ್ನು ಬೇಡಿ ಕೊಳ್ಳಬಹುದು.

ಸಂನ್ಯಾಸಿ:—ನಮ್ಮ ಬಾದಶಹರವರಿಗೆ ಹುಗಳಿಯೊಳಗಿನ ಆ ಸಂಗ ತಿಯು ಇನ್ನೂ ಸ್ಮರಣದಲ್ಲಿದೆಯೆನ್ನಬೇಕು.

ಬಾದ:—ಫಕೀರಸಾಹೇಬ, ನಾನು ಜಲಾಲುದ್ದೀನ ಅಕಬರ ಬಾದ ಶಹನ ಮೊಮ್ಮಗನೂ ನೂರಉದ್ದಿನ ಜಹಾಂಗೀರ ಬಾದಶಹನ ಮಗನೂ ಆಗಿದ್ದು, ನಾನು ಹುಗಳಿಯ ಆ ಸಂಗತಿಯನ್ನು ಮರೆಯುವದೆಂತು?

ಸಂನ್ಯಾಸಿ:-ಬಾದಶಹಾ, ತೀವ್ರದಲ್ಲಿಯೇ ಹುಗಳಿಯ ಪೋರ್ತುಗೀಜ ಫಿರಂಗಿಗಳೊಡನೆ ನೀನು ಯುದ್ಧಮಾಡಬೇಕಾಗುವದು.

ಬಾದ:—ಪೂಜ್ಯ ಫಕೀರರವರಿಗೆ ಅರಿಯದ ವಿಷಯವೇ ಇಲ್ಲ.

ಸಂನ್ಯಾಸಿ:—ಜನಾಬಆಲಿ, ಆ ಪಾದ್ರಿ ಗಂಜಾಲಿಸ ಫಿರಂಗಿಯ ಸ್ಮರಣವಿದೆಯೋ?

ಬಾದ:—ಚೆನ್ನಾಗಿ ನೆನಪಿನಲ್ಲಿದೆ. ಅವನನ್ನೆಂದೂ ಮರೆಯುವಂತಿಲ್ಲ.

ಸಂನ್ಯಾಸಿ:—ತಮ್ಮ ಸೈನ್ಯವನ್ನು ಬೇಗನೆ ಹುಗಳಿಗೆ ಕಳಿಸಿರಿ. ಗಂಜಾಲಿಸನನ್ನು ತಾವು ಸೆರೆಹಿಡಿದರೆ, ಅವನನ್ನು ನಮ್ಮ ಕಡೆಗೆ ಕಳಿಸಿಕೊಡಲಿಕ್ಕೆ ಮರೆಯಬೇಡಿರಿ.

ಬಾದಶಹನು ಆಸಫಖಾನನ ಕಡೆಗೆ ಹೊರಳಿ:—ವಜೀರಸಾಹೇಬ, ಈಗಲೇ ಆ ಬಗ್ಗೆ ಹುಕುಮು ಬರೆದು ತರಿಸಿರಿ.

ಸಂನ್ಯಾಸಿಯು ಬಾದಶಹನನ್ನು ಕುರಿತು ಮತ್ತೆ:—ಜಹಾಂಪನಾ, ನನ್ನ ಇನ್ನೊಂದು ನಿವೇದನವಿರುತ್ತದೆ.

ಬಾದ:—ಸಂಕೋಚವಿಲ್ಲದೆ ತಿಳಿಸಬಹುದು.

ಸಂನ್ಯಾಸಿ:—ಹುಗಳಿಯಲ್ಲಿ ಎಷ್ಟು ಜನ ಪೋರ್ತುಗೀಜ ರಮಣಿಯರು ತಮ್ಮ ದಂಡಾಳುಗಳಿಂದ ಸೆರೆಹಿಡಿಯಲ್ಪಡುವರೋ ಅವರೆಲ್ಲರ ಸಂರಕ್ಷಣದ ಭಾರವನ್ನು ನನ್ನ ಮೇಲೆಯೇ ವಹಿಸತಕ್ಕದ್ದು.

ಬಾದ:—ತಮ್ಮ ಇಚ್ಛೆಗೆ ವಿರುದ್ಧವಾಗಿ ನಾನೆಂದೂ ನಡೆಯಲಾರೆನು.

ಇಷ್ಟರಲ್ಲಿ ಮುಖ್ಯ ಗುಮಾಸ್ತನು ಹುಕುಮನ್ನು ಬರೆದು ತಂದು ವಜೀರನ ಕೈಗಿತ್ತನು. ವಜೀರನು ಅದನ್ನು ಬಾದಶಹನಿಗೆ ಓದಿತೋರಿಸಿದನು. ಬಾದಶಹನು ಅದರ ಮೇಲೆ ತನ್ನ ಮುದ್ರೆಯನ್ನು ಒತ್ತಿದನು; ಹಾಗು ಅದನ್ನು ಆ ಸಂನ್ಯಾಸಿಯ ಮುಂದೆ ಇಟ್ಟು ಅಭಿವಂದಿಸಿದನು. ಸಂನ್ಯಾಸಿಯು ಆ ಹುಕುಮನ್ನು ಪಡಕೊಂಡು ಹೊರಟನು. ಬಾದಶಹನೂ ದರ್ಬಾರಿಗಳೂ ಅವನನ್ನು ಬಾಗಿಲದ ವರೆಗೆ ಕಳಿಸಬಂದರು. ಸಂನ್ಯಾಸಿಯು ಬಾದಶಹನನ್ನು ಆಶೀರ್ವದಿಸಿ ಶಾಹಿಸ್ತೇಖಾನನ ಅನುಚರರೊಡನೆ ಹೊರಟು ಹೋದನು. ಅನುಚರರು ಅವನ ಸಂಗಡಲೇ ನಡೆದಿರಲಿಕ್ಕೆ ಆ ಸಂನ್ಯಾಸಿಯು ನಗಾರಖಾನೆಯ ಬಾಗಿಲಎದುರಿಗೆ ಒಮ್ಮೆಲೆ ಮಾಯವಾದನು!

ಅನುಚರರು ಎಷ್ಟು ಶೋಧಿಸಿದರೂ ಆ ನಗರವಲ್ಲಿಲ್ಲೂ ಆ ಸಂನ್ಯಾಸಿಯ ಪತ್ತೆ ಹತ್ತಲಿಲ್ಲ.

ಸಂನ್ಯಾಸಿಯು ಹೊರಟುಹೋದ ಬಳಿಕ ಆಸಫಖಾನನು ಬಾದಶಹ ನನ್ನುದ್ದೇಶಿಸಿ:—ಜಹಾಂಪನಾ, ಈ ಕಾಫರಫಕೀರನ್ಯಾರು?

ಬಾದಶಹನು ನಸುನಕ್ಕು:—ಸಾಹೇಬ, ಇವನಾರೆಂಬದನ್ನು ನಾನು ಹೇಳಲಾರೆನು. ಹುಗೆಳಿಯೊಳಗಿನ ಫಿರಂಗಿ ದಸ್ಯುಗಳು ಯಾವಾಗ ನನ್ನ ಸರ್ವಸ್ವವನ್ನು ಸುಲಿದಿದ್ದರೋ, ಆಗ ಈ ಮಹಾತ್ಮನೇ ನನ್ನ ಹಾಗೂ ನಿಮ್ಮ ಮಗಳ ಮರ್ಯಾದೆಯನ್ನು ಕಾಪಾಡಿದವನು; ನಮ್ಮ ಪ್ರಾಣವನ್ನು ಉಳಿಸಿದವನು. ಅವನ ಸಂಬಂಧದ ಅನ್ಯ ಪರಿಚಯದ ಅವಶ್ಯಕತೆಯೇ ಇರುವದಿಲ್ಲ. ಕಾಸೀಮಖಾನ, ನಿನ್ನನ್ನು ಬಂಗಾಲದ ಸುಭೇದಾರನನ್ನಾಗಿ ನೇಮಿಸಿರುತ್ತದೆ. ಇಂದಿನಿಂದ ಒಂದು ವರ್ಷದೊಳಗಾಗಿ ನೀನು ಫಿರಂಗಿ ಗಳ ಉತ್ಪಾತವನ್ನು ನಿಲ್ಲಿಸಿ, ಅವರನ್ನು ಈ ದೇಶದಿಂದ ಓಡಿಸಿ ಬಿಡ ಬೇಕು, ಕಂಡೆಯಾ?

ಕಾಸೀಮಖಾನನು ಬಾದಶಹನ ಮಾತಿಗೆ ಒಪ್ಪಿ, ಕುರ್ನಿಸ ಮಾಡಿ ಹೊರಟು ಹೋದನು. ಆಗ ಬಾದಶಹನು ತನ್ನ ಸಿಂಹಾಸನದಿಂದ ಎದ್ದು ಬಂದು ಆ ವಿಕಲಾಂಗನಾದ ಚೈತನ್ಯದಾಸ ಬೈರಾಗಿಯ ಮೈಮೇಲೆ ಕೈಯಾಡಿ ಸಿದನು; ಹಾಗೂ ಅವನನ್ನು ಕುರಿತು ಕರುಣಾಪೂರ್ಣ ದನಿಯಿಂದ:- ಕಾಫರ ಫಕೀರ, ನನ್ನ ರಾಜ್ಯದಲ್ಲಿ ವಾಸವಾಗಿ ನೀನು ಬಹು ಕಷ್ಟಗಳನ್ನು ಅನುಭೋಗಿಸಿರುತ್ತೀ. ಆದದ್ದು ಆಗಿ ಹೋಯಿತು. ಫಕೀರ, ನೀನು ಏನನ್ನು ಇಚ್ಛಿಸುತ್ತೀ? ಎಂದು ಪ್ರಶ್ನೆ ಮಾಡಲು,

ಚೈತನ್ಯದಾಸನು ತನ್ನ ಮುಚ್ಚಿದ ಕಣ್ಣುಗಳನ್ನು ತೆರೆದು:—ಮಹಾ ರಾಜ, ನಾನು ಶ್ರೀಕೃಷ್ಣನ ಮಂದಿರದಲ್ಲಿ ವಾಸಮಾಡಬೇಕೆಂದಿಷ್ಟೇ ಇಚ್ಛಿ ಸುತ್ತೇನೆ.

ಬಾದ:—ಫಕೀರ, ಇದರ ಹೊರತು ಮತ್ತೇನಾದರೂ ನಿನ್ನ ಇಚ್ಛೆ ಯಿದೆಯೋ?

ಚೈತನ್ಯ:—ಬೇರೆಯಾವದೂ ನನಗೆ ಬೇಡ.

ಆಗ ಬಾದಶಹನು ಗದ್ಗದ ಕಂಠದಿಂದ ಚೈತನ್ಯದಾಸನ ಭಕ್ತಿ ಪೂರ್ಣ ಮುಖವನ್ನೊಮ್ಮೆ ನೋಡಿ, ತನ್ನ ಕೈಯೊಳಗಿನ ಒಂದು ಪಚ್ಚದ

ಉಂಗುರವನ್ನು ತೆಗೆದು ಅವನ ಬೆರಳಲ್ಲಿಟ್ಟು:—ಫಕೀರ, ಈ ನಮ್ಮ ಗುರುತು ನಿನ್ನ ಬಳಿಯಲ್ಲಿರಲಿ ನಿನಗೆ ಯಾವಾಗಾದರೂ ಏನಾದರೂ ಬೇಕಾದರೆ ಈ ಗುರುತನ್ನು ಯಾರಿಗೊಬ್ಬರಿಗೆ ತೋರಿಸು; ಅಂದರೆ ಈ ನಮ್ಮ ಬಾದ ಶಾಹೀ ರಾಜ್ಯದಲ್ಲಿ ನಿನಗೆ ಬೇಕಾದ ವಸ್ತುಗಳನ್ನು ನನ್ನ ಅಧಿಕಾರಿಗಳು ನಿನಗೆ ಪೂರೈಸುವರಲ್ಲದೆ, ನಾನು ಎಲ್ಲಿದ್ದರೂ ನಿನ್ನನ್ನು ಪಲ್ಲಕ್ಕಿಯಲ್ಲಿ ಕೂಡ್ರಿಸಿ ನನ್ನ ಬಳಿಗೆ ಕರತರುತ್ತಾರೆ.

ಹೀಗೆಂದು ಹೇಳಿ ಬಾದಶಹನು ಆ ಮಂತ್ರಾಗಾರದ ಬಾಗಿಲಲ್ಲಿ ನಿಂತಿದ್ದ ತನ್ನ ಪಲ್ಲಕ್ಕಿಯನ್ನೇರಿ ರಂಗಮಹಲಿಗೆ ಹೊರಟು ಹೋದನು. ಚೈತನ್ಯದಾಸ ಬೈರಾಗಿಯನ್ನು ಬೇರೆ ಪಲ್ಲಕ್ಕಿಯಲ್ಲಿ ಕೂರಿಸಿ, ವೃಂದಾವನ ದೊಳಗಿನ ಶ್ರೀಕೃಷ್ಣಪರಮಾತ್ಮನ ಮಂದಿರಕ್ಕೆ ಕಳುಹಿಕೊಟ್ಟರು. ಅಂದಿನಿಂದ ವೃಂದಾವನದ ಫೌಜದಾರನು ಚೈತನ್ಯದಾಸನಿಗೆ ಅವಶ್ಯಕವಾದ ಸಮಸ್ತ ವಸ್ತುಗಳನ್ನೂ ಪೂರೈಸುತ್ತ ಅವನ ಬರದಾಸ್ತನ್ನು ಕಾಯುಹತ್ತಿದನು.

---

## ೧೮ನೇ ತರಂಗ.



## ದಿವ್ಯದೃಷ್ಟಿ!



ಪಲ್ಲಕ್ಕಿಯನ್ನೇರಿ ಬಾದಶಹನು ಯಾವಾಗ ಅಂತಃಪುರವನ್ನು ಪ್ರವೇಶಿಸಿದನೋ ಆಗ ಹಜರತ ಮಮತಾಜ-ಈ-ಮಹಲ ಆರಜಮಂದ ಬಾಣೂ ಬೇಗಮಳು ರೌಶನ್ ಜಹಾನೀ ಅಂಗುರೀಬಾಗದ ಛಪ್ಪರದಲ್ಲಿ ನಿಂತು ಕೆಂಪು ಮೀನುಗಳಿಗೆ ಆಹಾರವನ್ನು ನೀಂಟುತ್ತಿದ್ದಳು. ಬಾದಶಹನು ಪಲ್ಲಕ್ಕಿಯಿಂದಿಳಿದ ಕೂಡಲೆ ಬೇಗಮಳ ಕೈಹಿಡಿದುಕೊಂಡು ರಂಗಮಹಲನ್ನು ಪ್ರವೇಶಿಸಿದನು ರಂಗಮಹಲಿನ ಬಾಗಿಲದ ಎದುರಿಗೆ ಅಂತಃಪುರದ ದಾಸಿಯರ ಮುಖ್ಯಸ್ಥಳಾದ ಮೆಹೆದಿಬೀಬಿಯೂ ಖೊಜ್ಜೇರ ನಾಯಕನಾದ ಹಿಮ್ಮತಖಾ ಯಾಕೂತನೂ ಗಭೀರವಾದ ಅಪರಾಧಿಗಳಂತೆ ಕೈ ಕಟ್ಟಿಕೊಂಡು ನಿಂತಿದ್ದರು. ಅವರ ಆ ಅವಸ್ಥೆಯನ್ನು ಕಂಡು ಬಾದಶಹನು ಬೇಗಮಳನ್ನು ಕುರಿತು:—ಅಲಿಯಾ, ಇವರು ಹೀಗೇಕೆ ನಿಂತುಕೊಂಡಿರುತ್ತಾರೆ? ಎಂದು ಪ್ರಶ್ನೆ ಮಾಡಿದನು

ಬೇಗಮಳು ಬಾದಶಹನ ಕೈಹಿಡಿದು ಅವನನ್ನು ಯಮುನಾತಟಾಕದ ಹಿಂದು ಕೋಣೆಗೆ ಕರೆದೊಯ್ದು:—ಜಹಾಂಪನಾ, ನನ್ನ ಕಾಲಕಿರ್ದಿಯಲ್ಲಿ ಈ ರಂಗಮಹಾಲಿನಲ್ಲಿ ಈ ವರೆಗೆ ಯಾವ ಸಂಗತಿಯು ಘಟಿಸಿರಲಿಲ್ಲವೋ ಅದು ಇಂದು ಘಟಿಸಿರುತ್ತದೆ, ಎನ್ನಲು,

ಆದದ್ದಾದರೂ ಏನು? ಎಂದು ಬಾದಶಹನು ವ್ಯಗ್ರಚಿತ್ತದಿಂದ ಕೇಳಿ ದನು.

ತಾವು ತುಸ ಶಾಂತರಾಗಿರಿ. ಅಂದರೆ ನಾನು ತಿಳಿಸತಕ್ಕದ್ದನ್ನು ತಿಳಿ ಸುತ್ತೇನೆ.

ನಾನು ಶಾಂತನಾಗಿಯೇ ಇರುತ್ತೇನೆ. ನೀನು ಹೇಳತಕ್ಕದ್ದನ್ನು ಬೇಗನೆ ಹೇಳು.

ತಿಳಿಸಲಿಕ್ಕೆ ಅತ್ಯಂತ ವಿಷಾದವಾಗುವದೇನಂದರೆ, ಬಾದಶಹರವರ ಈ ರಂಗಮಹಲಿನಲ್ಲಿ ಇಂದು ಇಬ್ಬರು ಗಂಡಸರ ಪ್ರವೇಶವಾಗಿತ್ತು.

ಗಂಡಸರೇ? ಅವರು ಯಾವ ಜಾತಿಯುವರು.

ಬಂಗಾಲಿಗಳು.

ಬಂಗಾಲಿಗಳೇ?

ಅಹುದು. ಜಹಾಂಪನಾ, ಅವರಲ್ಲಿಯು ಒಬ್ಬನು ಬಲಿಷ್ಠನೂ ತೇಜ ಸ್ವಿಯೂ ಸುಂದರನೂ ಆದ ಯುವಕನು. ಇನ್ನೊಬ್ಬನು ಮುದುಕನು. ಮುದುಕನಾಗಿದ್ದರೂ ಅವನ ದೇಹವು ಪಿಶಾಚಿಯಂತೆ ಅತ್ಯಂತ ಬಲವುಳ್ಳ ದ್ದಾಗಿದೆ.

ಅವರು ಎಲ್ಲಿದ್ದರು? ಹೇಗೆ ಸಿಕ್ಕರು?

ಶೀಶಮಹಲಿನ ಕೆಳಗಿನ ಕೋಣೆಯಲ್ಲಿ ಅವರಿದ್ದರು. ಅಲ್ಲಿಂದಲೆ ಅವ ರನ್ನು ಬಂಧಿಸಿ ತಂದಿದೆ.

ಅವರನ್ನು ಬಂಧಿಸಿದವರಾರು?

ನಾನು.

ನೀನೇ?

ಅಹುದು, ಜಹಾಂಪನಾ! ನಿನ್ನೆ ಸಾಯಂಕಾಲಕ್ಕೆ ಯಾಕೂತ ಜಾತಿಯ ದಾಸಿಯಾದ ಗುಲ್‌ಜಾರಳು ನನಗೆ ಹೇಳಿದಳೇನಂದರೆ, ಗುಲ್ ರುಖಳು ರಂಗಮಹಲಿನಲ್ಲಿ ಒಬ್ಬ ಗಂಡಸನ್ನು ಕರೆತಂದಿರುತ್ತಾಳೆಂದು ಆಗ

ಕತ್ತಲೆಯಲ್ಲಿ ನನಗೆ ಅವನ ಪತ್ತೆ ಹತ್ತದಾಗಲು, ಗುಲ್‌ಜಾರಳು ಹೇಳಿದ ಸಂಗತಿಯು ಸುಳ್ಳಿರಬಹುದೆಂದು ತಿಳಿದೆನು. ಇಂದು ಬೆಳಿಗ್ಗೆ ತಾವು ದಿವಾಣ-ಈ-ಆಮ ದರ್ಬಾರಿಗೆ ತೆರಳಿದ ನಂತರ ಆ ಗುಲ್‌ಜಾರದಾಸಿಯು ಮತ್ತೆ ನನ್ನೆಡೆಗೆ ಬಂದು:—ಜಹನಾರಾಬೇಗಮಳೂ ಗುಲ್‌ರುಖಳೂ ಕೂಡಿ ಒಬ್ಬ ಪುರುಷನನ್ನು ಗಲ್ಲಿನ ಕೋಣೆಯಲ್ಲಿ ಗಲ್ಲಿಗೇರಿಸುತ್ತಿರುವರೆಂದು ತಿಳಿಸಿದಳು. ಕೂಡಲೆ ನಾನು ಆ ಫಾಸೀಖಾನೆಯ ಉತ್ತರದಿಕ್ಕಿನ ಗೋಡೆಯ ಕೀಲವನ್ನೊತ್ತಿ ಸರಿಸಿ ನೋಡುತ್ತೇನೆ; ಗುಲ್‌ಜಾರಳ ಸಂಗತಿಯು ಸತ್ಯವಾಗಿ ತೋರಿತು ಆಗ ಅಲ್ಲಿ ಕಟುಕರ ಹಿಲಾಲಖಾನನು ನಿಜವಾಗಿಯೇ ಒಬ್ಬ ತರುಣನನ್ನು ತನ್ನ ಚಪಗೊಡ್ಲಿಯಿಂದ ಕತ್ತಲ್‌ಮಾಡುವದರಲ್ಲಿದ್ದನು. ಆಗ ಅವನನ್ನು ತಡೆದು, ಸಂಗತಿಯೇನೆಂದು ಕೇಳಲು, ಆ ತರುಣನ ಹೆಸರು ಸರವ್ರೋಯಾರಖಾನನೆಂದೂ, ಅವನು ಗುಲ್‌ರುಖಳ ಗಂಡನೆಂದೂ, ಆದರೆ ಅವನು ಒಬ್ಬ ಕಾಫರಣಿಯ ಪ್ರೇಮಜಾಲದಲ್ಲಿ ಸಿಲುಕಿ, ಗುಲ್‌ರುಖಳನ್ನು ತ್ಯಜಿಸಿ, ಕಾಫರನಾಗಿರುವನೆಂದೂ ಜಹಾನಾರಾಬೇಗೆಮಳು ತಿಳಿಸಿದಳು; ಆ ತರುಣನನ್ನು ಕೇಳಲು, ತನ್ನ ಹೆಸರು ಮಯೂಖನೆಂದೂ, ತಾನು ಬಂಗಾಲೀಹಿಂದುವೆಂದೂ, ತನಗೂ ಗುಲ್‌ರುಖಳಿಗೂ ಏನೂ ಸಂಬಂಧವಿಲ್ಲೆಂದೂ ಅವನು ಹೇಳುತ್ತಾನೆ. ಇದರಿಂದ ಈ ಬಗ್ಗೆ ಏನು ನಿರ್ಣಯಮಾಡಬೇಕೆಂಬದು ತಿಳಿಯದಾಗಿದೆ.

ಹೀಗೆ ನುಡಿಯುತ್ತಿರುವಾಗ ಹಜರತ್‌ಬೇಗಮಳ ಎರಡೂ ಕಣ್ಣುಗಳೊಳಗಿಂದ ಅಶ್ರುಗಳು ಧಾರೆಗಟ್ಟಿ ಸುರಿಯಹತ್ತಿದವು. ಆಗ ಅವಳು ಆ ಸ್ಥಿತಿಯಲ್ಲೇ ಬಾದಶಹನ ಎರಡೂ ಕೈಗಳನ್ನು ಹಿಡಿದು, ಒಳ್ಳೇ ನಮ್ರಭಾವದಿಂದ:-ಜನಾಬ ಆಲಿ, ತಾವು ನನ್ನದೊಂದು ಮಾತನ್ನು ನಡಿಸುವಿರಾ? ಎಂದು ಪ್ರಶ್ನಮಾಡಿದಳು.

ಶಹಾಜಹಾನ ಬಾದಶಹನು ಆ ತನ್ನ ಪಟ್ಟದರಸಿಯ ಕಣ್ಣೀರನ್ನು ಆದರದಿಂದ ಒರಿಸುತ್ತ:—ಆಲಿಯಾ, ಹಿಂದುಸ್ತಾನದ ಈ ತುದಿಯಿಂದ ಆ ತುದಿಯ ವರೆಗೆ ನಿನ್ನ ಆದೇಶವು ಪರಿಪಾಲಿಸಲ್ಪಡುತ್ತದೆ. ನೀನು ಯಾವಾಗ ಯಾವ ಅಪ್ಪಣೆಯನ್ನು ಮಾಡುವಿಯೋ ನಾನು ಅಗಲೆ ಅದನ್ನು ಪಾಲಿಸುತ್ತ ಬಂದಿರುವೆನು; ಈಗಲೂ ಪಾಲಿಸುತ್ತೇನೆ. ಹೀಗಿದ್ದೂ ಇಂದು ನೀನು ಕಣ್ಣೀರು ಹಾಕುತ್ತಿರುವದೇಕೆ?

ಪ್ರಾಣಪ್ರಿಯಾ, ಆ ತರುಣನ ಮುಖಭಾವವು ಕೇವಲ ನಮ್ಮ ದಾರಾನಂತಿರುತ್ತದೆ; ಆದುದರಿಂದ ಅವನನ್ನು ಕೊಲ್ಲಬೇಡಿರಿ. ಅವನು ಒಂದು ವೇಳೆ ನಿಜವಾದ ಅಪರಾಧಿಯಾಗಿದ್ದರೂ ಅವನಿಗೆ ಪ್ರಾಣದಂಡದ ಶಿಕ್ಷೆಯನ್ನು ವಿಧಿಸದೆ, ಅವನನ್ನು ಈ ಮೊಗಲರಾಜ್ಯದಿಂದ ಹೊರಗೆ ಹಾಕಿಸಿರಿ. ಇದಕ್ಕೂ ಗುರುತರವಾದ ಶಿಕ್ಷೆಯನ್ನು ಅವನಿಗೆ ವಿಧಿಸಬೇಡಿರಿ.

ಹಾಗೇ ಆಗಲಿ; ಒಂದು ವೇಳೆ ಅವನು ನಿಜವಾಗಿ ಘೋರತರ ಅಪರಾಧಿಯಾಗಿದ್ದರೂ ನಿನ್ನ ಕಣ್ಣೀರಿಗಾಗಿ ಅವನನ್ನು ಕ್ಷಮಿಸಿ ಬಿಟ್ಟುಬಿಡುತ್ತೇನೆ; ಅಂದರಾಯಿತಲ್ಲವೆ?

ಬೇಗಮಳು ಸಂತೋಷದಿಂದ ಮೈಮರೆದು, ಬಾದಶಹನ ಹಸ್ತವನ್ನು ಚುಂಬಿಸಿದಳು. ಬಳಿಕ ಅವರೀರ್ವರೂ ರಂಗಮಹಲಿಗೆ ಬಂದರು. ಸಮೀಪದ ಒಂದು ಕೋಣೆಯಲ್ಲಿ ಮಯೂಖನೂ, ಭುವನನೂ, ಇಬ್ಬರು ಖೋಜಾಗಳೂ ಕುಳಿತಿದ್ದರು. ಬಾದಶಹನು ಆ ಕೋಣೆಯನ್ನು ಪ್ರವೇಶಿಸಿದವನೇ ಮಯೂಖನನ್ನು ಕಂಡು:—ಮನಸಬದಾರ, ನೀನು ಇತ್ತಿತ್ತ? ಎಂದು ವಿಸ್ಮಯದಿಂದ ಪ್ರಶ್ನೆಮಾಡಿದನು.

ದೈಹಿಕ ಹಾಗೂ ಮಾನಸಿಕ ಪರಿತಾಪಗಳಿಂದ ಮಯೂಖನಿಗೆ ಬಲು ತೊಂದರೆಯಾಗಿತ್ತು. ಆದರೂ ಬಾದಶಹನ ನುಡಿ ಕೇಳಿ ಅವನು ಮೆಲ್ಲ ಮೆಲ್ಲನೆ ಎದ್ದು ನಿಂತು, ಬಾದಶಹನಿಗೆ ಮುಜುರೆಮಾಡಿ:—ಶಹಾನಶಹಾ, ಈ ದೀನನ ಅಪರಾಧವನ್ನು ಕ್ಷಮಿಸಬೇಕು, ಎಂದೆಂದನು.

ಆಗ ಬಾದಶಹನು ಹಜರತಬೇಗಮಳ ಕಡೆಗೆ ಹೊರಳಿ:—ಆಲಿಯಾ, ಇವನಂತೂ ನಮ್ಮ ಹೊಸ ಮನಸಬದಾರನು. ಇವನ ತಂದೆಯಂಥ ವಿಶ್ವಾಸಿಗನು ಜಹಾಂಗೀರಬಾದಶಹನ ಅಮಲಿನಲ್ಲಿ ಇನ್ನೊಬ್ಬನಿರಲಿಲ್ಲ. ಇವನು ಮುಸಲ್ಮಾನನಲ್ಲ; ಹಿಂದೂ-ಬಂಗಾಳಿಯು, ಎಂದೆಂದು ಮಯೂಖನನ್ನುದ್ದೇಶಿಸಿ:—ಮನಸಬದಾರ, ನಿನ್ನನ್ನು ಈ ರಂಗಮಹಲಿಗೆ ಆದಾರು ಕರೆತಂದರು?

ಮಯೂಖನು ತನಗೆ ಗೊತ್ತಿದ್ದ ಸಂಗತಿಯನ್ನೆಲ್ಲ ಬಾದಶಹನಿಗೆ ವಿಶದವಾಗಿ ತಿಳಿಸಿದನು. ಆಗ ಬಾದಶಹನು ಹಿಮ್ಮತಖಾನಯಾಕೂತನನ್ನೂ ಮೆಹೆದಿಬೀಬಿಯನ್ನೂ ಕರೆಸಿ ಕೇಳಿದನು. ಅವರು ಹೇಳಿದ್ದೇನಂದರೆ, ಗುಲ್‌ಜಾರದಾಸಿಯು ಈ ಕಾಫರನನ್ನು ಇಲ್ಲಿಗೆ ಕರೆತಂದವಳು. ನಾವು

ಕೂಡಲೆ ಜಹಾನಾರಾ ಬೇಗಮರವರಿಗೆ ಈ ಸಂಗತಿಯನ್ನು ತಿಳಿಸಿದೆವು. ಹಜರತಬೇಗಮರ ಅಜ್ಞೆಯ ಮೇರೆಗೆ ಇವನನ್ನು ಕರೆಸಿದೆಯೆಂಧು ಅವರು ಹೇಳಿದರು.

ಕೂಡಲೆ ಬಾದಶಹನು ಗುಲ್‌ರುಖಳನ್ನೂ ಕರೆಸಿದನು. ಸ್ಥಿರವೂ, ಶಾಂತವೂ, ಶುಭ್ರಪ್ರಸ್ತರನಿರ್ಮಿತವೂ ಆದ ಮೂರ್ತಿಯಂತೆ ಗುಲ್‌ರುಖಳು ಮಂದಗತಿಯಿಂದ ಬಂದು ಬಾದಶಹನ ಸಮ್ಮುಖದಲ್ಲಿ ನಿಂತುಕೊಂಡಳು. ಆ ತರುಣಿಯ ಆ ಜಗದ್ವಿಜಯಿ ರೂಪವನ್ನು ಕಂಡು ಶಹಾಜಹಾನ ಬಾದ ಶಹನ ಆಗಿನ ಆ ಕಠೋರ ಸಂಕಲ್ಪವು ಕೂಡಲೆ ಅತ್ಯಂತ ಕೋಮಲ ವಾಯಿತು. ಆತನ ಅಂತಃಕರಣವು ದ್ರವಿಸಿತು. ಅವನಲ್ಲಿಯ ಈ ವರೆಗಿನ ಉದ್ವೇಗವು ಹೇಳಹೆಸರಿಲ್ಲದಾಯಿತು.

ಬಳಿಕ ಬಾದಶಹನು ಸ್ನೇಹಭಾವದಿಂದ:—ಗುಲ್‌ರುಖ, ಇದೇ ನವ್ವಾ-ಇದು? ಎಂದು ಕೇಳಿದನು.

ಆ ಸುಂದರಿಯ ತುಟಿಗಳು ಚಲಿಸಹತ್ತಿದವು. ಕೆಲ ಕ್ಷಣಗಳ ನಂತರ ಅವಳು:—ಶಹಾನ್‌ಶಹಾ, ಇವರು ನನ್ನ ಭಾಗದ ದೇವರು.

ತಂಗೀ, ನೀನೇ ಇವನನ್ನು ಈ ರಂಗಮಹಲಿಗೆ ಕರೆಸಿದ್ದೆಯಾ?

ಅಹುದು; ಕರೆಸಿಕೊಂಡಿದ್ದೆನು.

ಸ್ವೇಚ್ಛೆಯಿಂದ ಕರೆಸಿದ್ದೆಯೇನು?

ಶಹಾನ್‌ಶಹಾ, ನನ್ನ ತಂದೆಯು ಯಾರೋ, ಎಂಥವನೋ ಎಂಬ ದನ್ನು ನಾನರಿಯೆನು. ತಮ್ಮ ಬಳಿಯಲ್ಲೂ, ನವಾಬ ಶಹಾನಬಿಯಾಜ ಸಾಹೇಬರ ಬಳಿಯಲ್ಲೂ ಪಿತೃ ಸ್ನೇಹವನ್ನು ಹೊಂದಿದ ನಾನು ತಮ್ಮ ಬಳಿ ಯಲ್ಲಿ ಸುಳ್ಳು ಹೇಳುವದಿಲ್ಲ. ಈ ವರೆಗೆ ನಾನು ಅನ್ಯರೆದುರಿಗೆ ಅನೇಕ ಸುಳ್ಳುಗಳನ್ನು ಹೇಳಿ, ಅವರಿಂದ ನನ್ನ ಈ ಆರಾಧ್ಯದೇವತೆಗೆ ನಾನಾ ಬಗೆಯ ಕಷ್ಟಗಳನ್ನು ಕೊಡಿಸಿರುತ್ತೇನೆ. ಮೋಹದಿಂದಲೂ, ಕೇಳಬಾರ ದವರ ಮಾತನ್ನು ಕೇಳಿಯೂ, ಪಿಶಾಚ-ಪಿಶಾಚಿಗಳ ಸಹಾಯದಿಂದಲೂ ನಾನು ಇವರನ್ನು ಇಲ್ಲಿಗೆ, ನನ್ನ ತಾಯಿಯ ವಾಸಸ್ಥಳಕ್ಕೆ ಕರೆತರಿಸಿರುತ್ತೇನೆ.

ತಂಗೀ, ಗುಲ್‌ರುಖ, ನೀನು ಯಾರ ಮಾತನ್ನು ಕೇಳಿ ಇವನನ್ನು ಇಲ್ಲಿಗೆ ಕರೆಸಿಕೊಂಡೆಯವ್ವಾ?

ಅಪ್ಪಾ, ಬಾದಶಹಾ, ಈ ನನ್ನ ಕಣ್ಣುಗಳ ಅಪ್ಪಣೆಯ ಮೇರೆಗೆ

ಇವರನ್ನು ಕರೆಸಿಕೊಂಡಿರುತ್ತೇನೆ ಈ ನನ್ನ ಕಣ್ಣುಗಳೇ ನನ್ನ ಕಡು ವೈರಿಗಳು. ಈ ವಿಷಯದಲ್ಲಿ ಬೇರೆ ಯಾರೂ ಅಪರಾಧಿಗಳಿರುವದಿಲ್ಲ; ಗುಲ್‌ಜಾರ, ಇರಾಮತ್, ಹಿಲಾಲ, ಮೆಹೆದಿ ಹಾಗು ಶಹಾಜಾದಿ ಜಹನಾರಾ ಬೇಗಮ ಮುಂತಾದವರಾರೂ ಅಪರಾಧಿಗಳಲ್ಲ. ಎಲ್ಲ ಅಪರಾಧವೂ ನನ್ನ ಕಣ್ಣಿನದೇ. ಬಹುದೂರದ ಸಪ್ತಗ್ರಾಮದಲ್ಲಿಯೇ ಇವರ ದೇವ ದುರ್ಲಭವಾದ ರೂಪವು ನನ್ನ ದೃಷ್ಟಿಯನ್ನು ಅಂಧಗೊಳಿಸಿ ಬಿಟ್ಟಿರುತ್ತದೆ. ಶಹಾನ್‌ಶಹಾ, ನಾನು ಇಂದು ತಮ್ಮ ಎದುರಿಗೆ ಈ ನನ್ನ ದೋಷೀಯ ಕಣ್ಣುಗಳಿಗೆ ತಕ್ಕ ಶಿಕ್ಷೆಯನ್ನು ವಿಧಿಸುತ್ತೇನೆ, ಎಂದವಳೇ ಗುಲ್‌ರುಖಳು ತನ್ನ ವಸ್ತ್ರದಲ್ಲಿ ಬಚ್ಚಿಟ್ಟುಕೊಂಡಿದ್ದ ಎರಡು ಉದ್ದನ್ನ ಸೂಜಿಗಳನ್ನು ಎರಡೂ ಕೈಗಳಲ್ಲಿ ಹಿಡಿದು, ಅವುಗಳನ್ನು ಒಮ್ಮೆಲೆ ತನ್ನ ಎರಡೂ ಕಣ್ಣುಗಳಲ್ಲಿ ಚುಚ್ಚಿಕೊಂಡು ಬಿಟ್ಟಳು! ನೀಲೇಂದೀವರ ತುಲ್ಯಗಳಾದ ಅವಳ ಎರಡೂ ಕಣ್ಣುಗಳು ಕ್ಷಣಾರ್ಧದಲ್ಲಿ ಹೀನಪ್ರಭೆಗಳಾಗಿ ಹೋದವು!! ಕೂಡಲೆ ಆ ಯುವತಿಯು ಪ್ರಫುಲ್ಲಿತವಾದ ಸುಂದರ ಮುಖಮಂಡಲವು ಬಿಳುಪೇರಿ ಹೋಯಿತು! ಅಂಥ ಸ್ಥಿತಿಯಲ್ಲೂ ಗುಲ್‌ರುಖಳು ಮುಗುಳು ನಗೆಯಿಂದ:- ಅಪ್ಪಾ ಬಾದಶಹಾ, ಇನ್ನು ನಾನು ಯಾರನ್ನೂ ನೋಡಲಾರೆನು. ನನ್ನಿಂದ ಇನ್ನು ಇಂಥ ಗುರುತರವಾದ ಅಪರಾಧವೆಂದೂ ಘಟಿಸದು; ಆದರೆ ಪ್ರಭೂ, ಈ ನನ್ನ ಕಣ್ಣಿಗೆ ಈಗಲೂ ನಿಮ್ಮ ಹಾಗೂ ಹಜರತ ಬೇಗಮರ ಮತ್ತು ಈ ನನ್ನ ಭಾಗದ ಆರಾಧ್ಯದೇವತೆಯ ರೂಪಗಳು ಅಚ್ಚಳಿಯದೆ ಕಾಣಿಸಿಕೊಳ್ಳುತ್ತಿರುವವು. ಇವುಗಳ ಹೊರತು ಉಳಿದ ಯಾವ ರೂಪಗಳೂ, ವಸ್ತು-ಒಡವೆಗಳೂ ಗೋಚರವಾಗುವದಿಲ್ಲ, ಎಂದಂದು ಅಂಧಳಾದ ಅವಳು ಮಮತಾಜ ಖಾಣೂ ಬೇಗಮಳನ್ನು ತಬ್ಬಿಕೊಳ್ಳುವದಕ್ಕಾಗಿ ತನ್ನ ಕೈಗಳನ್ನು ಚಾಚಿ:—ಅಮ್ಮಾ, ತಾಯಿ, ನೀನು ಎಲ್ಲಿರುವೆ? ನಾನು ನನ್ನ ಅಪರಾಧಕ್ಕೆ ತಕ್ಕ ಶಿಕ್ಷೆಯನ್ನು ವಹಿಸಿರುತ್ತೇನಾದ್ದರಿಂದ ಇನ್ನು ನೀನು ನನ್ನನ್ನು ಕ್ಷಮಿಸುವದಿಲ್ಲವೆ? ಎಂದು ಕೇಳಿದಳು.

ಮಮತಾಜ ಬೇಗಮಳು ರಕ್ತ ಪೂರಿತವಾದ ಗುಲ್‌ರುಖಳ ದೇಹವನ್ನು ಬಿಗಿದಪ್ಪಿಕೊಂಡು ಅಳಹತ್ತಿದಳು! ಬಾದಶಹನು ವಿಸ್ಮಯ ಚಕಿತ ನೇತ್ರಗಳಿಂದ ಆಗಿನ ಆ ನಭೂತಪೂರ್ವ ದೃಶ್ಯವನ್ನು ನೋಡತೊಡಗಿದನು. ಕೆಲ ಕ್ಷಣಗಳ ನಂತರ ಬಾದಶಹನು ಮಯೂಖನ ಕಡೆಗೆ ಹೊರಳಿ ನೋಡು

ತ್ತಾನೆ, ಮಯೂಖನ ಕಪೋಲಪ್ರದೇಶದಿಂದ ನಯನಾಶ್ರುಗಳ ಧಾರೆಯು ಒಂದೇಸವನೆ ಬೀಳುತ್ತಲಿದೆ.

• • • • •

ಇದೇ ಕಾಲಕ್ಕೆ ಆಗ್ರಾಪಟ್ಟಣದ ಒಂದು ಸಾಧಾರಣವಾದ ಓಣಿಯೊಳಗೆ ಯಾವನೋ ಒಬ್ಬ ದೀರ್ಘಕಾಯದ ಗೌರವರ್ಣದ ಸಂನ್ಯಾಸಿಯು ಸಾಗಿದ್ದನು. ಆ ಓಣಿಯೊಳಗಿದ ಒಂದು ಸರ್ವಸಾಧಾರಣವಾದ ಮನೆಯ ಬಾಗಿಲಲ್ಲಿ ನಿಂತುಕೊಂಡ ಒಬ್ಬ ದಿನಹೋದ ಹಿಂದೂ-ಬಂಗಾಲೀ ರಮಣಿಯು ಯಾರದೋ ದಾರಿಕಾಯುತ್ತಿದ್ದಳು. ಸಂನ್ಯಾಸಿಯು ಆ ರಮಣಿಯನ್ನು ಕಂಡು ಚಕಿತನಾಗಿ ನಿಂತುಕೊಂಡನು! ರಮಣಿಯೂ ಆ ಸಂನ್ಯಾಸಿಯ ದರ್ಶನದಿಂದ ವಿಸ್ಮಯವಿಸ್ಫೂರಿತಳಾಗಿ ಚಲಚಲನೆ ನಡುಗಹತ್ತಿದಳು!! ಆಗ ಆ ಸಂನ್ಯಾಸಿಯು ದೂರದಿಂದಲೇ:— "ವಿನೋದಿನಿ" ಎಂದು ಕೂಗಿದನು.

ಆ ಸಂನ್ಯಾಸಿಯ ಧ್ವನಿಯನ್ನು ಕೇಳಿ ಆ ರಮಣಿಯು ಮೂರ್ಛಿತಳಾದಳು! ಕೂಡಲೆ ಆ ಸಂನ್ಯಾಸಿಯು ಒಂದು ಕ್ಷಣ ಕೂಡ ಅಲ್ಲಿ ನಿಲ್ಲದೆ ಊರ್ಧ್ವಶ್ವಾಸದಿಂದ ದಾರಿಸಿಕ್ಕತ್ತ ಕಾಲಿಗೆ ಬುದ್ಧಿಹೇಳಿಸಿದನು.

⁘ ⁘ ⁘ ⁘ ⁘

ಅಂದೇ ಸಾಯಂಕಾಲದಲ್ಲಿ ಆ ಸಂನ್ಯಾಸಿಯಂಥ ರೂಪ-ವರ್ಣಗಳುಳ್ಳ ಆದರೆ ಗಡ್ಡ-ಜಡೆಗಳನ್ನು ಬೋಳಿಸಿದಂತಹ, ಸುಶೋಭಿತಗಳಾದ ಮೀಸೆಗಳನ್ನು ಬಿಟ್ಟಂತಹ ಒಬ್ಬ ಪ್ರೌಢನು ಬಂಗಾಲದ ಪ್ರಸ್ತುತದ ಸುಭೇದಾರನಾದ ಕಾಸೀಮಖಾನನ ಕಾಲಾಳಿನ ದಂಡಿನಲ್ಲಿ ಸೇರ್ಪಡೆ ಹೊಂದಿದನು.

---

## ೧೮ನೇ ತರಂಗ.



# ಪೋರ್ತಗೀಜ ಶಕ್ತಿಯ ಸಮಾಧಿ.

ರಂಗಮಹಾಲಿನಿಂದ ಬಾದಶಹನ ಆಜ್ಞೆಯ ಮೇರೆಗೆ ಬಿಡುಗಡೆ ಹೊಂದಿ ಮಯೂಖನು ಸುಭೇದಾರ ಕಾಶೀಮಖಾನನೊಡನೆ ಬಂಗಾಲಕ್ಕೆ ತೆರಳಿದನು. ಬಂಗಾಲ ಪ್ರಾಂತಕ್ಕೆ ಹೋಗಿ ಸುಭೇದಾರಿಯನ್ನು ವಹಿಸಿ

ಕೊಂಡ ನಂತರವೇ ಮಯೂಖನು ಹುಗಳಿಯೊಳಗಿನ ಪೋರ್ತುಗೀಜ ಫಿರಂಗಿಗಳನ್ನು ವಿನಾಶಗೊಳಿಸಲಿಕ್ಕೆ ಸಜ್ಜಾದನು. ಸುಭೇದಾರನ ಮಗನೂ ಸೇನಾಪತಿಯೂ ಸೈನ್ಯಸಹಿತವಾಗಿ ಹೊರಟು ವರ್ಧಮಾನಕ್ಕೆ ತಲುಪಿದರು. ಬಂಗಾಲದ ಸುಭೇದಾರನು ತಮ್ಮ ಹುಗಳೀಬಂದರವನ್ನು ಮುತ್ತಬರುತ್ತಿರುವದನ್ನು ಕೇಳಿ, ಅಲ್ಲಿಯ ಪೋರ್ತುಗೀಜ ಫಿರಂಗಿಗಳು ಜಲಪಥದಿಂದ ಓಡಿಹೋದಾರೆಂದು ಮಖಸೂಷಾಬಾದದ ಬಹದ್ದರಖಾನನು ಸಮಸ್ತ ಸರಕಾರೀ ನಾವು, ಡೋಣಿ ಮುಂತಾದವುಗಳನ್ನು ಸಜ್ಜುಗೊಳಿಸಿ, ಸುಂದರಬನದಲ್ಲಿ ತಳವೂರಿಕೊಂಡು ಕುಳಿತನು. ಸುಂದರಬನದ ಕಡೆಯಿಂದ ಪೋರ್ತುಗೀಜರ ನಾವೆಗಳು ಚಲಿಸದಂತೆ ವ್ಯವಸ್ಥೆಯಾದ ಬಳಿಕ, ವರ್ಧಮಾನದಿಂದ ಸೇನಾಪತಿಯೂ ಬೇರೆ ಕಡೆಯಿಂದ ಸುಭೇದಾರನ ಮಗನೂ ಹುಗಳಿಯನ್ನು ಮುತ್ತಲಿಕ್ಕೆ ಹೊರಟರು.

ಇದೇ ಸಮಯಕ್ಕೆ ಒಂದು ದಿನ ಫಿರಂಗಿಗಳು ಸಪ್ತಗ್ರಾಮದೊಳಗಿನ ಗೋಕುಲಬಿಹಾರಿಯ ವಖಾರನ್ನು ಆಕ್ರಮಿಸಿದರು. ಅವರ ಸೇಡು ತೀರಿಸುವದಕ್ಕಾಗಿ ಗೋಕುಲಬಿಹಾರಿಯೂ ಸಪ್ತಗ್ರಾಮದ ಫೌಜದಾರನೂ ಕೂಡಲೆ ಫಿರಂಗಿಗಳ ಹುಗಳೀಬಂದರವನ್ನು ಮುತ್ತಿದರು. ಯಾವ ದಿವಸ ಹುಗಳಿಯನ್ನು ಅವರು ಮುತ್ತಿದರೋ, ಅದರ ಮರುದಿವಸವೇ ಉತ್ತರದಿಂದ ಬಂಗಾಲದ ಸುಭೇದಾರನ ಸೇನಾಪತಿಯೂ, ದಕ್ಷಿಣದಿಂದ ಸುಭೇದಾರನ ಮಗನೂ ಸಸೈನ್ಯವಾಗಿ ಬಂದು ಗೋಕುಲಬಿಹಾರ್ಯಾದಿಗಳನ್ನು ಕೂಡಿಕೊಂಡರು. ಇದೇ ಕಾಲಕ್ಕೆ ಸುಂದರಬನದೊಳಗಿನ ಜಲಮಾರ್ಗಗಳನ್ನೆಲ್ಲ ಕಟ್ಟುಮಾಡಿ ಬಹದ್ದೂರಖಾನನೂ ಹುಗುಳಿಯ ಕಡೆಗೆ ತನ್ನ ನಾವೆಗಳನ್ನು ಸಾಗಿಸಹತ್ತಿದನು. ಕ್ರಿ. ಶ. ೧೬೩೧ರಲ್ಲಿ ಪೋರ್ತುಗೀಜರ ಹುಗುಳೀದುರ್ಗವನ್ನು ಮೊಗಲರು ನಾಲ್ಕೂ ಕಡೆಯಿಂದ ಮುತ್ತಿದರು. ಪೋರ್ತುಗೀಜ ಪಾದ್ರಿಗಳ ಛಲನದಿಂದಲೂ ಫಿರಂಗೀಸೈನಿಕರ ಉತ್ಪಾತದಿಂದಲೂ ತ್ರಸ್ತರಾಗಿದ್ದ ಆ ಬಂಗಾಲ-ಬಿಹಾರ-ಓರಿಸಾಪ್ರಾಂತದ ಪ್ರಜೆಗಳು ತಾವಾಗಿ ಬಂದು ಸುಭೇದಾರನ ದಂಡಿನಲ್ಲಿ ಸೇರಲಾರಂಭಿಸಿದರು. ಬಹದ್ದೂರಖಾನನು ಸರಕಾರದ ಹಾಗು ಆ ಪ್ರಾಂತದ ಹಿಂದೂಮುಸಲ್ಮಾನ ವಣಿಕರ ನಾವೆ-ಡೋಣಿಗಳನ್ನು ಕೂಡಿಸಿ ಹುಗುಳಿಯ ದುರ್ಗದ ಕೆಳಗೆ ಒಂದು ನಾವೆಯ ಸೇತುವನ್ನು ಸಿದ್ಧಪಡಿಸಿದನು. ಇದರಿಂದ ಫಿರಂಗಿಗಳ ಒಂದು ಚಿಕ

ಡೋಣಿಯೂ ಕೂಡ ದುರ್ಗದಿಂದ ನೀರಲ್ಲಿಳಿಯದಾಯಿತು. ಹೀಗೆ ಇತ್ತ ಜಲದ್ವಾರದಿಂದ ಬಹದ್ದೂರಖಾನನೂ ಸ್ಥಲಪಥದಿಂದ ಸುಭೇದಾರನ ಸೇನಾಪತಿಯೂ ಹುಗುಳಿಯನ್ನು ಸುತ್ತುಗಟ್ಟಿದರು.

ಮೊಗಲರ ಸೈನ್ಯವು ಮೂರು ತಿಂಗಳ ಗಟ್ಟಲೆ ಮುತ್ತಿಗೆ ಹಾಕಿಕೊಂಡು ಕುಳಿತರೂ, ಫಿರಂಗಿಗಳು ಅವರಿಗೆ ದಾದು ಕೊಡಲಿಲ್ಲ. ಮೂರು ತಿಂಗಳ ನಂತರ ಗೋಕುಲಬಿಹಾರಿಯ ಸೈನ್ಯಕ್ಕೆ ದುರ್ಗದ ಒಂದು ಆಯಕಟ್ಟಿನ ಸ್ಥಳವು ಹಸ್ತಗತವಾಯಿತು. ಒಂದು ಬುರುಜಿನ ಬಳಿಯಲ್ಲಿ ದುರ್ಗದ ಗೋಡೆಯು ಗಡಚಾಗಿರಲಿಲ್ಲ. ಅದನ್ನರಿತ ಗೋಕುಲಬಿಹಾರಿಯ ಸೈನ್ಯದವರು ಆ ಸ್ಥಳದಲ್ಲಿ ಎಷ್ಟೋ ಸುರಂಗಗಳನ್ನು ಒಮ್ಮೆಲೆ ಹಚ್ಚಿ ಆ ಗೋಡೆಯನ್ನು ಹಾರಿಸಬೇಕೆಂದರು; ಅದರಿಂದ ಬಾದಶಹನ ಸೈನ್ಯವು ಅಲ್ಲಿಂದ ಒಳನುಗ್ಗಲಿಕ್ಕೆ ಅನುಕೂಲವಾಗುವಂತಿತ್ತು.

ಇದೇ ಕಾಲಕ್ಕೆ ಬಹದ್ದೂರಖಾನನ ನೌಕಾಸೇನೆಯಲ್ಲಿ ಪೋರ್ತುಗೀಜರ ಒಬ್ಬ ಹೊಸ ವೈರಿಯು ಬಂದು ಸೇರಿಕೊಂಡಿದ್ದನು. ಅವನು ಬೇರೆ ಯಾರೂ ಆಗಿರದೆ, ಗೋವೆಯ ಪೋರ್ತುಗೀಜರ ಅತ್ಯಂತ ಛಲನದಿಂದ ರೇಗಿಗೆದ್ದಿದ್ದ ಒಬ್ಬ ಇಂಗ್ಲಿಷ ವ್ಯಾಪಾರಸ್ಥನಾಗಿದ್ದನು. ಪೋರ್ತುಗೀಜ ಪಾದ್ರಿಗಳು ಅವನ ಎರಡೂ ಕಣ್ಣುಗಳನ್ನು ಕಿತ್ತಿಸಿಬಿಟ್ಟಿದ್ದರು! ಹುಗುಳೀ ದುರ್ಗವನ್ನು ಮೊಗಲಸೈನ್ಯವು ನಾಲ್ಕೂ ಕಡೆಯಿಂದ ಮುತ್ತಲಿಕ್ಕೂ, ಆ ಅಂಧ ವಣಿಕನು ಅದೇ ಸಮಯಕ್ಕೆ ವ್ಯಾಪಾರಕ್ಕಾಗಿ ಸಪ್ತಗ್ರಾಮಕ್ಕೆ ಬರಲಿಕ್ಕೂ ಗಂಟೇಬಿದ್ದಿತು. ಆ ಇಂಗ್ಲಿಷನು ತನ್ನ ದೇಶದಲ್ಲಿ ದಂಡಾಳು ವಾಗಿದ್ದನು. ಸುರಂಗಗಳನ್ನು ನೆಟ್ಟು ಕಿಲ್ಲೆಗಳ ಭದ್ರವಾದ ಗೋಡೆಗಳನ್ನು ಹೇಗೆ ಹಾರಿಸಬೇಕೆಂಬದನ್ನು ಫಾರ್ಸೀದೇಶದಲ್ಲಿ ಅವನು ಅಭ್ಯಾಸಿಸಿದ್ದನು. ಮಯೂಖನು ಆ ಅಂಧ ಇಂಗ್ಲಿಷ ದಂಡಾಳುವಿನ ನೆರವಿನಿಂದ ಸುರಂಗಗಳನ್ನು ಹಾರಿಸಲುದ್ಯುಕ್ತನಾದನು. ಸುರಂಗಿನ ಎರಡು ಮೂರು ಏಟುಗಳು ವ್ಯರ್ಥವಾದದ್ದರಿಂದ, ಕಟ್ಟಕಡೆಗೆ ಆ ಕುರುಡ ಇಂಗ್ಲಿಷನು ಒಂದು ಬಹು ದೊಡ್ಡ ಸುರಂಗವನ್ನು ತೋಡಿದನು. ಆ ಸುರಂಗದಲ್ಲಿ ನೂರಾರು ಮಣಗಟ್ಲೆ ಮದ್ದನ್ನು ತುಂಬಿದರು. ಪ್ರಾಣಭಯದಿಂದ ಯಾವ ಹಿಂದೂ ಅಥವಾ ಮುಸಲ್ಮಾನ ಶಿಪಾಯಿಯೂ ಆ ಸುರಂಗಕ್ಕೆ ಕೊಳ್ಳಿ ಕೊಡಲಿಕ್ಕೆ ಮುಂದರಿಯಲೊಲ್ಲನು. ಕಡೆಗೆ ಸುಭೇದಾರನ ಕಾಲಾಳಿನ

ದಂಡಿನೊಳಗಿನ ಒಬ್ಬ ದೀರ್ಘಕಾಯದ ಗೌರವರ್ಣದ ನೂತನ ಶಿಪಾಯಿಯು ಸ್ವೇಚ್ಛೆಯಿಂದ ಆ ಸುರಂಗಕ್ಕೆ ಕೊಳ್ಳಿಯಿಕ್ಕಲು ಮುಂದರಿದನು.

ಸುರಂಗವು ಹಾರಿದ ಕೂಡಲೆ ನಾಲ್ಕೂ ದಿಕ್ಕಿನಿಂದ ಒಳನುಗ್ಗಬೇಕೆಂದು ಬಾದಶಾಹೀ ದಂಡು ಸಜ್ಜಾಗಿ ನಿಂತಿದೆ. ಆ ಸಮಯದಲ್ಲಿ ಆ ನೂತನ ಕಾಲಾಳು ಹಳದೀಪುರದೊಳಗಿನ ದಂಡಿನ ಬೀಡನ್ನು ಪ್ರವೇಶಿಸಿ, ಮಯೂಖನನ್ನು ಕಂಡನು. ಅವನು ಮಯೂಖನನ್ನು ಒತ್ತಟ್ಟಿಗೆ ಕರೆದೊಯ್ದು:—ಮಯೂಖ, ನೀನು ನನ್ನನ್ನು ಗುರ್ತಿಸಲಾರೆಯಾ? ಎಂದು ಕೇಳಿದನು.

ತೀರ ಸಾಮಾನ್ಯನಾದ ಆ ಕಾಲಾಳು ತನ್ನನ್ನು ಹಾಗೆ ಏಕವಚನದಿಂದ ಸಂಬೋಧಿಸಿದ್ದನ್ನು ಕೇಳಿ ಮಯೂಖನು ವಿಸ್ಮಯಚಕಿತನಾಗಿ ನಿಂತು ಬಿಟ್ಟನು.

ಆಗ ಆ ಶಿಪಾಯಿಯು ಮತ್ತೆ:—ಲಲಿತಾಹರಣದ ದಿವಸ ಗೌರೀಪುರದ ಘಾಟನಲ್ಲಿ ನಿನಗಾರು ಭೆಟ್ಟಿಯಾಗಿದ್ದರೆಂಬದು ಸ್ಮರಣದಲ್ಲಿದೆಯೆ?

ಮಯೂಖನು ಮತ್ತಿಷ್ಟು ಬೆರಗಾಗಿ:—ಸ್ಮರಣವಿದೆ.

ನಾನು ಅದೇ ಆ ಸಂನ್ಯಾಸಿಯು.

ಅವರು ತಾವೊ?

ಅಹುದು; ನಾನೇ ಅವನು. ನಾನು ಲಲಿತೆಯ ಸೋದರಮಾವನು; ವಿನೋದಿನಿಯ ಅಣ್ಣನು. ಹದಿನಾಲ್ಕು ವರ್ಷಗಳ ಹಿಂದೆ ಗಂಜಾಲಿಸ ಫಿರಂಗಿಪಾದ್ರಿಯು ಖಡ್ಗಹದಿಂದ ನನ್ನ ತರುಣ ಹೆಂಡತಿಯನ್ನೂ ವಿನೋದಿನಿಯನ್ನೂ ಬಲಾತ್ಕಾರದಿಂದ ಅಪಹರಿಸಿಕೊಂಡೊಯ್ದನು. ನನ್ನ ಹೆಂಡತಿಯು ಆಗಲೆ-ಅಂದೇ ಆತ್ಮಹತ್ಯೆಯನ್ನು ಮಾಡಿಕೊಂಡು ಮುಕ್ತಳಾದಳು; ಮತ್ತೂ ನನ್ನ ತಂಗಿ ವಿನೋದಿನಿಯಾದರೂ ಆಗಲೆ ಸತ್ತುಹೋದಳೆಂದು ನಾನು ತಿಳಿದಿದ್ದೆನು; ಆದರೆ ಮೊನ್ನೆ ಆಗ್ರಾದಲ್ಲಿ ವಿನೋದಿನಿಯನ್ನು ಪ್ರತ್ಯಕ್ಷ ನೋಡುತ್ತಲೆ, ನನ್ನ ಪೂರ್ವಸಂಕಲ್ಪವು ಮರೆತು ಹೋಯಿತು. ಪೋರ್ತುಗೀಜರ ಹುಗುಳಿಯನ್ನು ಸುಟ್ಟು ಸೂರೆಗೊಂಡು, ಅಲ್ಲಿಯ ಸ್ಮಶಾನದಲ್ಲಿ ಸಂನ್ಯಾಸಿಯಾದ ನಾನು ವಾಸಿಸಬೇಕೆಂದು ಯೋಚಿಸಿದ್ದೆನು; ಆದರೆ ವಿನೋದಿನಿಯ ಜಾರನು-ಮಿಂಡನು-ಇನ್ನೂ ಜೀವಂತನಿರುತ್ತಾನೆ. ಇಂದು ಹುಗಳೀ ದುರ್ಗವು ನಿಮ್ಮ ಕೈವಶವಾಗುವದು ಖಂಡಿತ; ಆದರೆ ನಾನು ಆ

ಕಾಲಕ್ಕೆ ಒದುಕಿರಲಾರೆನು. ಮಯೂಖ, ಒಂದು ವೇಳೆ ನೀನು ಆ ನೀಚ ಗೆಂಜಾಲಿಸ ಪಾದ್ರಿಯನ್ನು ಇಂದಿನ ಯುದ್ಧದಲ್ಲಿ ಹಿಡಿದರೆ, ಆ ಕೂಡಲೆ ನಿನ್ನ ಕೈಖಡ್ಗದಿಂದ ಅವನ ರುಂಡವನ್ನು ತುಂಡರಿಸಿ, ಅವನ ವೈರಕ್ತದಿಂದ ನನ್ನ ಚಿತಾಭೂಮಿಯನ್ನು ಸಮ್ಮಾರ್ಜನಗೊಳಿಸು! ನಿನ್ನ ನೀಚ ಕರ್ಮ ನಾದ ಅನುಪನಾರಾಯಣನು ಮಡಿದಿರುವನು. ನಿನಗೆ ಬೇಗನೆ ನಿನ್ನ ಜಹಗೀರು ಲಭಿಸುತ್ತಿದೆ, ಎಂದು ಹೇಳಿ, ಆ ಗೌರವರ್ಣದ ದೀರ್ಘಕಾಯದ ಶಿಪಾಯಿಯು ಮಯೂಖನ ಉತ್ತರವನ್ನು ನಿರೀಕ್ಷಿಸದೆ, ತನ್ನ ಕೆಲಸಕ್ಕೆ ಹೊರಟು ಹೋದನು. ಮುಂದೆ ಅರ್ಧತಾಸಿನಲ್ಲಿಯೇ ಸುರಂಗದ ಬಹು ಭೀಕರವಾದ ಸಪ್ಪಳವಾಗಿ ಹುಗಳಿಯ ದುರ್ಗದ ಬುರುಜುಗಳೂ, ಗೋಡೆ ಗಳೂ ಆಕಾಶದಲ್ಲಿ ಹಾರಿಬಿಟ್ಟವು! ಮತ್ತೆ ಎರಡು ಗಂಟೆಗಳಲ್ಲಿ ಹುಗಳಿ ಯೊಳಗಿನ ಪೋರ್ತುಗೀಜ ಶಕ್ತಿಯು ಸಮಾಧಿಹೊಂದಿತು!

ಬಿಚ್ಚುಗತ್ತಿಯನ್ನು ಧರಿಸಿದ ಮಯೂಖನು ಒಳ್ಳೇ ತ್ವೇಷದಿಂದ ಫಿರಂಗೀ ಪ್ರಧಾನನ ಪ್ರಾಸಾದದ ಬಳಿಗೆ ಹೋಗಿ ನೋಡುತ್ತಾನೆ, ಅತ್ಯಲ್ಪ ಸೈನ್ಯದಿಂದೊಡಗೂಡಿದ್ದ ಪೋರ್ತುಗೀಜ ದಳಪತಿಯಾದ ಡಿಸೋಝುನು ಇನ್ನೂ ಕಾದುತ್ತಲಿದ್ದಾನೆ. ಮೊಗಲ ಸೈನ್ಯವು ನಾಲ್ಕೂ ಕಡೆಯಿಂದ ಏರಿಬರುತ್ತಿದ್ದರೂ ಡಿಸೋಝುನು ಕತ್ತಿಯನ್ನು ಕೆಳಗಿಟ್ಟು ಅವರಿಗೆ ಶರಣಾ ಗತನಾಗಲಿಲ್ಲ; ಅವನು ಹಾಗೆ ಎಷ್ಟು ಹೊತ್ತಿನವರೆಗೆ ಕಾದಿಯಾನು? ಅಲ್ಪಾವಕಾಶದಲ್ಲಿಯೇ ಹತವೀರ್ಯನಾದನು.

ಪೋರ್ತುಗೀಜ ಫಿರಂಗಿ ಪಾದ್ರಿಗಳಲ್ಲಿ ಅಗ್ರಗಣ್ಯನಿದ್ದಂತೆ, ನೀಚತನ ದಲ್ಲಿಯೂ ಶ್ರೇಷ್ಠನಾಗಿದ್ದ ಗೆಂಜಾಲಿಸನು ಜಲಪಥದಿಂದ ಪಲಾಯನ ಹೇಳಿ ಸುವದರಲ್ಲಿದ್ದನು. ಅಷ್ಟರಲ್ಲಿ ಮಯೂಖನ ಸೇನಾನಿಗಳು ಅವನನ್ನು ಸೆರೆ ಹಿಡಿದು ಮಯೂಖನ ಬಳಿಗೆ ಕರೆತಂದರು. ಕೂಡಲೆ ಮಯೂಖನು ಲಲಿತೆ ಯ ಮಾವನ ಸಂಕೇತದಂತೆ ಅವನನ್ನು ವಧಿಸಿ, ಅವನ ರಕ್ತಸಿಂಚನದ ಮೇಲೆ ಆ ಸಂನ್ಯಾಸಿಯ-ಕಾಲಾಳಿನ-ದೇಹದ ಚಿತೆಯನ್ನು ರಚಿಸಿದನು. ಸುರಂಗದ ಝಳಕ್ಕೆ ಕಮರಿ ಹೋಗಿದ್ದ ಆ ಸಂನ್ಯಾಸಿಯ ದೇಹವನ್ನು ಆ ಚಿತೆಯಲ್ಲಿ ಸ್ಥಾಪಿಸಿದರು. ಅದರಿಂದ ಆ ಬ್ರಾಹ್ಮಣನ ಆತ್ಮಕ್ಕೆ ಪರಲೋಕದಲ್ಲಿ ಚಿರವಾದ ಶಾಂತಿ-ಸಮಾಧಾನಗಳು ಲಭಿಸಿದವೆಂದು ಅಲ್ಲಿ ಕೂಡಿದ್ದ ಜನ ರೆಲ್ಲರೂ ಅಂದುಕೊಂಡರು.

ಅಂದಿಗೆ ಬಂಗಾಲದೊಳಗಿನ, ಅದೇಕೆ ಇಡಿ ಹಿಂದುಸ್ತಾನದೊಳಗಿನ ಫಿರಂಗಿಗಳ ಉತ್ಪಾತವು ಕಟ್ಟಾಯಿತು. ಆ ಪ್ರಾಂತದ ಪ್ರಜೆಗಳು ಸ್ಥಿರ ಸೌಖ್ಯದಿಂದ ಕಾಲಯಾಪನೆ ಮಾಡಹತ್ತಿದರು.

---

## ಉಪಸಂಹಾರ.



# ವಿಷವೆರೆವಗೆ ಹಾಲೆರೆ.

ಚಳಿಗಾಲದ ಒಂದು ಅಪರಾಹ್ಣಕಾಲದಲ್ಲಿ ಕ್ಷುದ್ರವಾದುದೊಂದು ಡೋಣಿಯು ಆಗ್ರಾದುರ್ಗದ ಸಮೀಪದಲ್ಲಿ ಹಸರುಹುಲ್ಲುಗದ್ದೆಯ ಬಳಿಗೆ ಬಂದಿತು. ಆ ಡೋಣಿಯಲ್ಲಿ ಒಬ್ಬ ಅಂಬಿಗನೂ ಇಬ್ಬರು ಆರೋಹಿಗಳೂ ಇದ್ದರು. ಆರೋಹಿಗಳಲ್ಲಿ ಒಬ್ಬನು ಗಂಡಸು; ಇನ್ನೊಬ್ಬಳು ಹೆಂಗಸು. ಆಗ ಆ ಪುರುಷನು ಅಂಬಿಗನನ್ನು ಕೇಳುತ್ತಾನೆ:— ಭುವನ, ಸಮಾಧಿಯು ಎಲ್ಲಿರುತ್ತದೆ?

ಅಂಬಿಗನು ಯಮುನಾತಟಾಕದೊಳಗಿನ ಹಳದೀವರ್ಣದ ಹುಲ್ಲಿನ ಕ್ಷೇತ್ರದ ಕಡೆಗೆ ಬೊಟ್ಟುಮಾಡಿ ತೋರಿಸಿದನು. ಕೂಡಲೆ ಆರೋಹಿಗಳಿಬ್ಬರೂ ಇಳಿದು ಅತ್ತ ಕಡೆಗೆ ನಡೆದರು. ಆಗ ಸೂರ್ಯನು ಅಸ್ತಂಗತನಾಗುವದರಲ್ಲಿದ್ದನು ಆತನ ಹೀನ ಪ್ರಭೆಯು ಮಂದ ಮಂದ ಕಿರಣಗಳು ರಕ್ತವರ್ಣದ ಕಲ್ಲಿನಿಂದ ಕಟ್ಟಲ್ಪಟ್ಟ ಆಗ್ರಾದುರ್ಗದ ತಲೆಯ ಮೇಲಿನ ಶುಭ್ರ ಕಲ್ಲಿನಿಂದ ಕಟ್ಟಲ್ಪಟ್ಟ ಮತಿಮಸೀದೆಯ ಅತ್ಯಂತ ಶುಭ್ರವಾದ ಗೋಪುರಗಳ ಮೇಲೆ ಸ್ವರ್ಣವರ್ಣದಿಂದ ರಂಜಿಸುತ್ತಿದ್ದವು. ಎತ್ತರವಾದ ನೆಲದ ಮೇಲಿನ ಹಸರುಮುಡಿದಿದ್ದ ಹುಲ್ಲಿನ ಮಧ್ಯ ಪ್ರದೇಶದಲ್ಲಿ ಸಂಗಮರವರೀ ಕಲ್ಲಿನಿಂದ ನಿರ್ಮಿಸಲ್ಪಟ್ಟ ಒಂದು ಚಿಕ್ಕ ಸಮಾಧಿಯಿದ್ದಿತು. ಸಂಧ್ಯಾಕಾಲದ ಘನ ಘನವಾದ ತೆರೆಗಳ ಮೂಲಕ ಯಮುನಾನದಿಯ ನೀರಹನಿಗಳು ದಂಡೆಗೆ ಪುಟ ಪುಟಿದು ಬಹುದೂರದ ಆ ಸಮಾಧಿಯ ಕೆಳಭಾಗಕ್ಕೆ ಚಿಮ್ಮುತ್ತಲಿವೆ. ಶುಭ್ರ ವಸನಾವೇಷ್ಟಿತನಾದ ಒಬ್ಬ ಪ್ರೌಢನು ಸಮಾಧಿಯನ್ನು ಆಲಿಂಗಿಸಿ ಕುಳಿತುಕೊಂಡಿದ್ದಾನೆ; ಹಾಗೂ ಆತನ ಹತ್ತರವೇ ಮಲಿನವೇಷದ, ಕುಂದಿದ ಶರೀರದ ಒಬ್ಬ ಅಂಧರಮಣಿಯು ಕುಳಿತುಕೊಂಡು ನೀರವವಾಗಿ ಕಣ್ಣೀರನ್ನು

ಸುರಿಸುತಲಿದ್ದಾಳೆ. ನೌಕೆಯು ಅಂಬಿಗನೂ ಆರೋಹಿಗಳೂ ಅವರನ್ನು ಕಂಡು ದೂರದಲ್ಲಿಯೇ ನಿಂತುಕೊಂಡರು.

ಕೆಲ ಕ್ಷಣಗಳ ನಂತರ ಆ ಆರೋಹಿ-ಪುರುಷನು:—ಭುವನೆ, ಅವರಾರು? ಎಂದು ಪ್ರಶ್ನಮಾಡಲು,

ಮಹಾರಾಜ, ಅವರಾರೆಂಬದು ನನಗೆ ಗೊತ್ತಿಲ್ಲ, ಎಂದು ಅಂಬಿಗನು ಉತ್ತರವಿತ್ತನು.

ಅಷ್ಟರಲ್ಲಿ ಆ ಆರೋಹಿ-ರಮಣಿಯು ಆರೋಹಿ-ಪುರುಷನ ಕಿವಿಯಲ್ಲಿ ಮೆಲ್ಲಗೆ ಹೇಳುತ್ತಾಳೆ:—ಹತ್ತಿರ ಹೋಗುವ ಕಾರಣವಿಲ್ಲ; ದೂರದಿಂದಲೇ ನೋಡಿ ತಿರುಗೋಣ.

ಅದೇಕೆ? ಎಂದು ಪುರುಷನು ಕೇಳಲು,

ಅವರಾರೆಂಬುದರ ಗುರುತು ಹತ್ತಲಿಲ್ಲವೆ? ರಮಣಿಯೆಂದಳು.

ಇಲ್ಲ; ನನಗೆ ಅವರ ಗುರುತು ಹತ್ತಲೊಲ್ಲದು, ಎಂದು ಆ ಶುಭ್ರವಸನಾಂಕಿತವಾದ ಪ್ರೌಢವ್ಯಕ್ತಿಯ ಕಡೆಗೆ ಟಕಮಕವಾಗಿ ನೋಡುತ್ತ ಆ ಪುರುಷನು ನುಡಿದನು.

ನೋಡಿದ ಕೂಡಲೆ ನನಗಿವರ ಗುರುತು ಹತ್ತಿತು. ರಮಣಿಯೆಂದಳು.

ಲಲಿತಾ, ಅವರಾರು? ಬೇಗನೆ ಹೇಳಬಾರದೆ? ಪುರುಷನು ಪ್ರಶ್ನೆ ಮಾಡಲು,

ಮತ್ತಾರಿವರು? ಸ್ವತಃ ಶಹಾಜಹಾನ ಬಾದಶಹರೇ, ಎಂದು ಲಲಿತೆಯು ಮೆಲ್ಲನೆ ತಿಳಿಸಿದಳು.

ಇದೇ ಕಾಲಕ್ಕೆ ಆ ಪ್ರೌಢನು ಸಮಾಧಿಯ ಮೇಲಿನ ತನ್ನ ತಲೆಯನ್ನೆತ್ತಿದ್ದನು. ಕೂಡಲೆ ಅವನ ಮುಖಮಂಡಲವು ಆ ಆರೋಹಿ ಪುರುಷನಿಗೆ-ನಮ್ಮ ವಾಚಕರ ಚಿರಪರಿಚಯದ ಬಾದಶಹನ ಮನಸಬದಾರನಾದ ಮಯೂಖನಿಗೆ ಕಾಣಿಸಿತು. ಮಯೂಖನು ವಿಸ್ಮಯಭರದಿಂದ ಹಿಂದುಸ್ತಾನದ ಸಾಮ್ರಾಟನಾದ ಆ ಶಹಾಜಹಾನ ಬಾದಶಹನ ಕಡೆಗೆ ನೋಡುತ್ತ ನಿಂತುಕೊಂಡನು. ಆಗ ಲಲಿತೆಯು-ಮಯೂಖನ ಹೆಂಡತಿಯು-ಗಂಡನನ್ನು ಕುರಿತು:—ಮಹಾರಾಜ, ನಾನು ಬಾದಶಹರವರನ್ನು ಎಂದೂ ಕಣ್ಣುಟ್ಟಿ ನೋಡಿರುವದಿಲ್ಲ. ಅನುಮಾನದಿಂದಲೂ, ನೀವು ಇವರ ವರ್ಣನವನ್ನು ಆಗಾಗ್ಗೆ ನನ್ನೆದುರಿಗೆ ಮಾಡುತ್ತಿದ್ದದರಿಂದಲೂ ಇವರೇ

ಅವರೆಂದು ನಾನು ತಿಳಿದೆನು ನಾವು ಇಲ್ಲಿಯವರೆಗೆ ಬಂದ ಬಳಿಕ ಹಾಗೆಯೇ ಮರಳಿ ಹೋಗುವದು ಸರಿಯಲ್ಲ. ಸಮಾಧಿಯ ಬಳಿಗೆ ಹೋಗಿ, ಸಮಾಧಿಗೆ ಪೊಡಮಟ್ಟು ಹೋಗತಕ್ಕದ್ದು. ಬಾದಶಹರವರು ಅಲ್ಲಿಂದ ಹೊರಡುವ ವರೆಗೆ ನಾವು ಇಲ್ಲಿಯೇ ತುಸ ನಿಂತುಕೊಳ್ಳೋಣ, ಎಂದು ನುಡಿದಳು.

ಅಷ್ಟರಲ್ಲಿ ಸಮೀಪದಲ್ಲಿಯೇ ಯಾರೋ ಹಿಳ್ಳೇ ಕರುಣಾರಸಪೂರ್ಣವಾದ ಪದವನ್ನು ತಮ್ಮ ಕೋಮಲ ಕಂಠದಿಂದ ಮನೋಹರವಾಗಿ ಹಾಡುತ್ತಿರುವಂತೆ ಕೇಳಹತ್ತಿತು. ಆ ಸಂಗಿತಾಲಾಪದಿಂದ ಅಲ್ಲಿದ್ದವರೆಲ್ಲರೂ ಹಿಂದು ಬಗೆಯ ಅಂತರ್ಭಾವನಾರೂಪ ರಜ್ಜುವಿನಿಂದ ಬಿಗಿಯಲ್ಪಟ್ಟರು ಎಲ್ಲರೂ ಸ್ತಬ್ಧವಾಗಿ ನಿಂತು ಆ ಗಾಯಕನ ಗಾನವನ್ನು ಕೇಳತೊಡಗಿದರು.

ಬಾದಶಹನಂತೂ ಆ ಸಂಗೀತ ಧ್ವನಿಯನ್ನು ಕೇಳಿ ಬೆರಗಾಗಿ ಹೋದನು ಕೂಡಲೆ ಅವನು ಕುಳಿತ ಸ್ಥಳದಿಂದ ಎದ್ದು ನಿಂತನು. ಆಗ ಮಯೂಖನು ಬಾದಶಹನ ಎದುರಿಗೆ ಹೋಗಿ ಅವನಿಗೆ ಮುಜುರೆಮಾಡಿ ಅಭಿವಂದಿಸಿದನು. ಬಾದಶಹನು ವಿಷಣ್ಣವದನದಿಂದ ಮಯೂಖನನ್ನು ಕುರಿತು:—ಗಾಯನವನ್ನು ಮಾಡುತ್ತಿದ್ದವನು ನೀನೇ ಏನು? ಎಂದು ಕೇಳಲು,

ಮಯೂಖ:—ಅಲ್ಲ; ಜಹಾಂಪನಾ, ನಾನಲ್ಲ.

ಬಾದಶಹ:—ಹಾಗಾದರೆ ಗಾಯನಮಾಡುತ್ತಿದ್ದವರಾರು?

ಮಯೂಖ:—ನಾನರಿಯೆನು; ಆಚೇಬದಿಗೆ ಯಾವನೋ ಗಾಯಕನು ಹಾಡುತ್ತಿರುವ ಹಾಗಿದೆ.

ಬಾದಶಹ:—ಮನಸಬದಾರ, ಗಾಯಕನು ಹಾಡುವ ಹಾಡು ಯಾವ ಭಾಷೆಯದು?

ಮಯೂಖ:—ಜನಾಬ ಆಲಿ, ಇದು ಬಂಗಾಲೀಭಾಷೆಯ ಹಾಡು.

ಬಾದಶಹ:—ಗಾಯಕನ ಸ್ವರವು ಬಹು ಮನೋಹರವಾಗಿರುತ್ತದೆ. ಅವನನ್ನು ನನ್ನೆಡೆಗೆ ಕರೆತರುವೆಯಾ?

ಕೂಡಲೆ ಮಯೂಖನು ಹಿಂದಕ್ಕೆ ಹೊರಳಿ ಲಲಿತೆಯ ಕಡೆಗೆ ನೋಡಿದನು. ಬಾದಶಹನೂ ಸಹಜವಾಗಿ ಅತ್ತ ನೋಡಿದವನೇ:—ಮನಸಬದಾರ, ನಿನ್ನೊಡನೆ ಬಂದಿರುವ ಈ ರಮಣಿಯು ಯಾರು? ಎಂದು ಪ್ರಶ್ನೆ

ಮಾಡಲು,

ಮಯೂಖನು ಅವನತ ಮುಖದಿಂದ:—ಶಹಾನಶಹಾ, ಇವಳು ನನ್ನ ಹೆಂಡತಿ, ಎಂದಂದನು.

ಆದಕ್ಕೆ ಬಾದಶಹ:—ಮನಸಬದಾರ, ನಿನ್ನ ಹೆಂಡತಿಯು ಇಲ್ಲಿಗೇಕೆ ಬಂದಿರುತ್ತಾಳೆ?

ಮಯೂಖ:—ಹಜರತ್ ಬಾದಶಹ ಬೇಗಮರ ಸಮಾಧಿಗೆ ಪೊಡಮುಟ್ಟಿ ಹೋಗುವ ಸಲುವಾಗಿ.

ಬಾದಶಹ:—ಹಾಗಾದರೆ ಅವಳಿಗೆ ಹತ್ತರ ಬರಲಿಕ್ಕೆ ತಿಳಿಸು. ಅವಳನ್ನು ನಮ್ಮ ಗುಲ್‌ರುಖಳ ಹತ್ತರಿರಿಸಿ, ನೀನು ಆ ಗಾಯಕನನ್ನು ಹುಡುಕಿ ಕರಕೊಂಡು ಬಾ.

ಆಗ ಮಯೂಖನ ದೃಷ್ಟಿಯು ಜೀರ್ಣ-ಶೀರ್ಣಕಾಯದ, ಮಲಿನ ವೇಷದ ಹಾಗು ದೃಷ್ಟಿವಿಹೀನಳಾದ ಆ ರಮಣಿಯ ಕಡೆಗೆ ಹೊರಳಿತು. ಅವಳನ್ನು ದೃಷ್ಟಿಸಿದ ಕೂಡಲೆ ಅವನ ಎದೆಯಲ್ಲಿ ಧಸ್ಸೆಂದಿತು. ಅವಳ ಸಂಬಂಧದ ಹಿಂದಿನ ಎಲ್ಲ ವೃತ್ತಾಂತವೂ ಒಮ್ಮೆಲೆ ಅವನ ಕಣ್ಣಿಗೆ ಕಟ್ಟಿದಂತಾಯಿತು. ಈ ಮೊದಲೇ ಆ ಕುರುಡೆಯು ಅಲ್ಲಿ ಎದ್ದು ನಿಂತಿದ್ದಳು. ಅವಳ ಮಣ್ಣಿನ ಗೊಂಬೆನಂತಹ ದೃಷ್ಟಿವಿಹೀನ ಕಣ್ಣುಗಳು ಸ್ಫುರಿಸಹತ್ತಿದ್ದವು. ಬಹುದೂರ ಓಡುತ್ತ ಬಂದ ಕುದುರೆಯು ಹಾಗೆ ಅವಳು ಧಸ್ಸ ಧಸ್ಸೆಂದು ಶ್ವಾಸೋಚ್ಛ್ವಾಸಗೆಯ್ಯಲಾರಂಭಿಸಿದ್ದಳು. ಮಯೂಖನು ಯಾವಾಗ ಬಾದಶಹನೊಡನೆ ಮಾತಾಡಹತ್ತಿದನೋ ಆಗಿನಿಂದಲೇ ಆ ಅಂಧೆಯು ಎದ್ದು ನಿಂತು ಆ ಭಾಷಣವನ್ನು ಆಲಿಸಿ ಕೇಳಹತ್ತಿದ್ದಳು. ಮಯೂಖನ ದನಿಯು ಆ ಕುರುಡೆಯ ಕಿವಿಯನ್ನು ಪ್ರವೇಶಿಸಹತ್ತಿದಂತೆ, ಅದು ಅವಳನ್ನು ಕೂತಲ್ಲಿ ಕೂಡಗೊಡದಾಯಿತು; ನಿಂತಲ್ಲಿ ನಿಲ್ಲಗೊಡದಾಯಿತು. ಅವನು ಬಾದಶಹನೊಡನೆ ಮಾತಾಡುತ್ತಿರುವ ವರೆಗೆ ಅವಳು ಹೇಗಾದರೂ ಮಾಡಿ ಅಲ್ಲಿ ಸುಮ್ಮನೆ ನಿಂತುಕೊಂಡಿದ್ದಳು. ಆ ಅಂಧ ಗುಲ್‌ರುಖಳು ನಡುವೇ ಏನನ್ನೋ ಮಾತಾಡಲಿಕ್ಕೆ ಉತ್ಸುಕಳಾಗಿದ್ದಳು. ಆದರೆ ಬಾದಶಹನ ಭಾಷಣಕ್ಕೆ ವ್ಯತ್ಯಯಗೊಳಿಸುವದು ತರವಲ್ಲೆಂದು ಅವಳು ತುಸ ತಡೆದಳು. ಅಷ್ಟರಲ್ಲಿ ಆವರ ಸಂಭಾಷಣವು ಕಟ್ಟಾಗಲು, ಗುಲ್‌ರುಖಳು ಒಳ್ಳೇ ಅವಸರದಿಂದ ಮಯೂಖನನ್ನು ಕುರಿತು:—ನನ್ನ

ಪ್ರಿಯ ಆರಾಧ್ಯದೇವತೆಯೇ! ನಿನ್ನ ರೂಪರಾಶಿಯಲ್ಲಿ ಇಷ್ಟೊಂದು ಕಾಠಿಣ್ಯವು ನೆಲಸಿರುವದೆಂದು ನನಗೆ ತಿಳಿದಿರಲಿಲ್ಲ; ಈಗ ಅದು ನನ್ನ ಸಂಪೂರ್ಣ ಅನುಭವಕ್ಕೆ ಬಂದಂತಾಯಿತು. ದೇವಾ, ನೀನು ಮತ್ತೆ ನನ್ನ ಬಳಿಗೇಕೆ ಬಂಹೆ? ಎಂದು ಪ್ರಶ್ನ ಮಾಡಿದಳು.

ಮಯೂಖನು ವಿಸ್ಮಿತನೂ ಸ್ತಂಭಿತನೂ ಆಗಿ ನಿಂತು ಬಿಟ್ಟನು. ಗುಲ್‌ರುಖಳ ತಲೆಯಮೇಲಿನ ಸೆರಗು ಗಾಳಿಯಿಂದ ಜಾರಿಹೋಯಿತು ಕೂಡಲೆ ಬಹು ದಿನಗಳಿಂದ ಎಣ್ಣೆ-ನೀರುಗಳನ್ನು ಕಾಣದ ಅವಳ ಆ ಉದ್ದನ್ನ ಕೂದಲುಗಳು ರಕ್ತಹೀನ-ಜ್ಯೋತಿಹೀನತೆಗಳಿಂದ ಬಿಳುಪೇರಿದ ಮುಖಮಂಡಲದ ಮೇಲೆ ಹಾರಿ ಹಾರಿ ಬರಹತ್ತಿದವು. ಆಗ ಆ ಅಂಧಳು ಮತ್ತೆ:-ದೇವಾ! ಅಂಧಕಾರಮಯವಾದ ಜಗತ್ತಿನಲ್ಲಿ ನೀನೇ ನನ್ನ ಶ್ರೇಷ್ಠ ಜ್ಯೋತಿಯು; ಹಗಲ ದೀವಟಿಗೆಯು! ನಿನ್ನ ಸುಂದರ ಮೂರ್ತಿಯು ನನ್ನ ದೃಷ್ಟಿಶಕ್ತಿವಿಹೀನಗಳಾದ ಕಣ್ಣೆದುರಿನಲ್ಲಿ ಯಾವಾಗಲೂ ಚಿತ್ರಿತವಾಗಿರುತ್ತದೆ; ಆದರೆ ದೇವಾ, ನೀನು ನನ್ನ ಹತ್ತರ ಮಾತ್ರ ಬರಬೇಡ. ದೂರದಲ್ಲಿಯೇ ಇರು ನಿನ್ನ ಕಾಲಸಪ್ಪಳವನ್ನೂ ದನಿಯನ್ನೂ ಕೇಳುತ್ತಲೆ ನನಗೆ ಉನ್ಮಾದವೇ ಉಂಟಾಗುತ್ತಿದೆ, ಎಂದಂದಳು

ಆಗ ಬಾದಶಹನು ಗುಲ್‌ರುಖಳ ಕಿವಿಯಲ್ಲಿ ಮೆಲ್ಲಗೆ ಏನೋ ಹೇಳಿದನು. ಅದನ್ನು ಕೇಳಿ ಗುಲ್‌ರುಖಳು ಹರ್ಷಭರದಿಂದ ನಡುಗಹತ್ತಿದಳು; ಹಾಗು ಅವಳು:-ಎಲ್ಲಿ? ನೀನು ಎಲ್ಲಿರುತ್ತೀ? ಎತ್ತಕಡೆಗೆ ನಿಂತಿರುತ್ತೀ? ಎಂದೆನ್ನುತ್ತ ತನ್ನ ಎರಡೂ ಕೈಗಳನ್ನು ಚಾಚಿ, ಮತ್ತೆ:—ನಿನ್ನನ್ನೊಮ್ಮೆ ನೋಡಬೇಕೆಂದಿರುತ್ತೇನೆ ಕಣ್ಣಿರುವ ವರೆಗೂ ನಾನು ನಿನ್ನನ್ನು ಕಾಣಲಿಲ್ಲ. ಈಗ ನಿನ್ನನ್ನೊಮ್ಮೆ ಮುಟ್ಟಿಯಾದರೂ ನೋಡುತ್ತೇನೆ. ತಂಗೀ, ಲಲಿತಾ, ನನ್ನ ಸ್ಪರ್ಶದಿಂದ ನಿನ್ನ ಪತಿಯಂತೆ ನಿನಗೂ ಅಪವಿತ್ರತೆಯೆನಿಸುವದೇನು?

ಬಾದಶಹನು ನಡುವೇ ಬಾಯಿಹಾಕಿ:—ಮನಸಬದಾರ, ಗುಲ್‌ರುಖಳು ನಿನ್ನ ಹೆಂಡತಿಗೆ ಭೆಟ್ಟಿಯಾಗಬೇಕೆಂದಿರುತ್ತಾಳೆ; ನಿನ್ನ ಹೆಂಡತಿಯನ್ನು ಅಪ್ಪಿಕೊಳ್ಳಬೇಕೆಂದಿರುತ್ತಾಳೆ, ಎಂದು ತಿಳಿಸುತ್ತಿರಲು,

ಲಲಿತೆಯು ಮಯೂಖನ ಅನುಮತಿಯ ದಾರಿಕಾಯುತ್ತ ನಿಲ್ಲದೆ, ಗುಲ್‌ರುಖಳ ಬಳಿಗೆ ಧಾವಿಸಿ ಬಂದಳು. ಅವಳ ಕಾಲಸಪ್ಪಳ ಕೇಳಿ ಗುಲ್

ರುಖಳೂ ಎರಡು ಹೆಜ್ಜೆ ಮುಂದೆ ನಡೆದು ಬಂದಳು. ಕೂಡಲೆ ಅವರು ಒಬ್ಬರನ್ನೊಬ್ಬರು ತೆಕ್ಕೆಬಿದ್ದು ಗಾಢಾಲಿಂಗನದಲ್ಲಿ ನಿಮಗ್ನರಾದರು! ಬಾದಶಹನು ಬೇರೆ ಕಡೆಗೆ ನೋರೆ ತಿರುವಿ ನಿಂತುಕೊಂಡನು. ಮಯೂಖನು ಒಂದು ಬಗೆಯ ಅಕಲ್ಪನೀಯ ಆವೇಗಭರದಿಂದ ಮೋರೆತಗ್ಗಿಸಿಕೊಂಡು ನಿಂತುಬಿಟ್ಟನು.

ಎಷ್ಟೋ ಕ್ಷಣಗಳ ಮೇಲೆ ಮಯೂಖನಿಗೆ ಬಾದಶಹನ ಆಜ್ಞೆಯು ನೆನಪಿಗೆ ಬಂದಿತು. ಕೂಡಲೆ ಅವನು ಆ ಗಾಯಕನನ್ನು ಹುಡಕ ಹೋದನು. ಆಗ್ರಾದೊಳಗೆ ಈಗ ತಾಜಮಹಾಲು ಕಟ್ಟಲ್ಪಟ್ಟಿರುವ ಸ್ಥಳದಲ್ಲಿ ಆ ಮೊದಲು ತೃಣಾಚ್ಛಾದಿತ ವಿಸ್ತೃತವಾದ ಬೈಲು ಪ್ರದೇಶವಿತ್ತು. ಆ ಹುಲ್ಲುಪ್ರದೇಶದ ಒಂದು ಕಡೆಗೆ ಒಬ್ಬ ಸೊರಗಿ ಸಾಯಲಿಕ್ಕಾದ ಊನನು ಬಿದ್ದುಕೊಂಡಿದ್ದು, ಅವನೇ ಹಾಗೆ ಮನೋಹರವಾಗಿ ಹಾಡುತ್ತಿದ್ದನು. ಮಯೂಖನು ತೀರ ಅವನ ಹತ್ತಿರಕ್ಕೆ ಹೋಗಿ:—ಮುದುಕಾ, ಇಲ್ಲಿ ಬಿದ್ದುಕೊಂಡು ಹೀಗೇಕೆ ಹಾಡುತ್ತಿರುವೆ? ಎಂದು ಪ್ರಶ್ನ ಮಾಡಿದನು.

ಆ ಮುದುಕನು ಶುದ್ಧವಾದ ಬಂಗಾಲೀ ಭಾಷೆಯಲ್ಲಿ:—ಅಪ್ಪಾ, ನಾನು ಏಳಲಾರೆನು; ನಡೆಯಲಾರೆನು. ಹೀಗೆ ಗಟ್ಟಿಗಟ್ಟಿಯಾಗಿ ಹಾಡಿದರೆ ಅದನ್ನು ಕೇಳಿ ಯಾರಾದರೂ ಬಂದು ನನ್ನನ್ನು ಕರೆದೊಯ್ದಾರೆಂದು ತಿಳಿದು, ದೇವರ ನಾಮವನ್ನು ಹಾಡುತ್ತಿದ್ದೆನು.

ನೀನು ಎಲ್ಲಿಗೆ ಹೋಗಬೇಕಾಗಿರುತ್ತದೆ?

ಸಮೀಪದ ಆ ಸಮಾಧಿಯ ಬಳಿಗೆ.

ನಿನ್ನನ್ನು ಅಲ್ಲಿಗೆ ಕರೆದೊಯ್ಯುವ ಸಲುವಾಗಿಯೇ ಬಂದಿರುತ್ತೇನೆ, ಎಂದವನೇ ಮಯೂಖನು ಆ ವಿಕಲಾಂಗನನ್ನು ಹೆಗಲಮೇಲೆ ಹೊತ್ತುಕೊಂಡು ಬಾದಶಹನ ಎದುರಿಗೆ ತಂದು ಇಳಿಸಿದನು. ಕೂಡಲೆ ಆ ಊನನು ತನ್ನ ಮಲಿನ ವಸ್ತ್ರದೊಳಗೆ ಅಡಗಿಸಿಟ್ಟಿದ್ದ ಒಂದು ಉಂಗುರವನ್ನು ತೆಗೆದು ಮಯೂಖನ ಕೈಗಿತ್ತನು. ಮಯೂಖನು ಆ ಪಚ್ಚದುಂಗುರವನ್ನು ಬಾದಶಹನ ಕಡೆಗೆ ಕೊಟ್ಟನು.

ಅದನ್ನು ಕಂಡು ಬಾದಶಹನು ವಿಸ್ಮಯಚಕಿತನಾಗಿ:—ಕಾಫರ-ಫಕೀರ, ನೀನು ಸಪ್ತಗ್ರಾಮದ ಆ ವೈಷ್ಣವ ಚೈತನ್ಯದಾಸನಲ್ಲವೆ?

ಅಹುದು ಮಹಾರಾಜ. ಬಾದಶಹರೆಡೆಯಲ್ಲಿ ಹಿಂದಿಷ್ಟು ಪ್ರಾರ್ಥನೆ ಮಾಡಿಕೊಳ್ಳುವ ಸಲುವಾಗಿ ಬಂದಿರುತ್ತೇನೆ.

ಅರಮನೆಯಲ್ಲಿ ನಮ್ಮನ್ನು ಕಾಣಬಹುದಿತ್ತಲ್ಲ?

ಮಹಾರಾಜ, ತಮ್ಮನ್ನು ಇಲ್ಲಿಯೇ ಕಾಣುವದು ತಕ್ಕದ್ದೆಂದು ಗೋವಿಂದನು ನನ್ನನ್ನು ಪ್ರೇರಿಸಿದನು.

ಫಕೀರ, ನಿನಗೇನು ಬೇಕು?

ಮಹಾರಾಜ, ನನ್ನ ಗುರುವು ನಿಮ್ಮ ಸೆರೆಯಾಳಾಗಿರುತ್ತಾನೆ. ದಯ ಮಾಡಿ ಅವನನ್ನು ಮುಕ್ತಗೊಳಿಸಬೇಕು.

ಆಗ ಮುಮತಾಜ-ಈ-ಮಹಲ ಅರಜ ಮುಂದ ನಾಣೂ ಬೇಗಮೆಯ ಜಗದ್ವಿಖ್ಯಾತ "ತಾಜಮಹಾಲ" ಸಮಾಧಿಯ ಗೋಡೆಗಳನ್ನು ಕಟ್ಟುವ ಕೆಲಸವು ನಡೆದಿತ್ತು. ಎಷ್ಟೋಜನ ಫಿರಂಗಿ ಕೈದಿಗಳು ದೂರದಿಂದ ಮಣ್ಣು ಬುಟ್ಟಿಗಳನ್ನು ಹೊತ್ತುತಂದು ಹಾಕುತ್ತಿದ್ದರು. ಚೈತನ್ಯದಾಸನು ಆ ಫಿರಂಗಿ ಕೈದಿಗಳಲ್ಲಿಯ ಒಬ್ಬನ ಕಡೆಗೆ ಬೊಟ್ಟುಮಾಡಿ ತೋರಿಸಿ, ಬಾದ ಶಹನನ್ನು ಕುರಿತು:—ಮಹಾರಾಜ, ಇವನೇ ಆ ನನ್ನ ಗುರುವು, ಎಂದು ಹೇಳಿದನು. ಕೂಡಲೇ ಮಯೂಖನು ಬಾದಶಹನ ಆದೇಶದ ಮೇರೆಗೆ ಅವನನ್ನು ಅಲ್ಲಿಗೆ ಕರೆತಂದನು. ಊನಕಾಯದ ಆ ಬೈರಾಗಿಯನ್ನು ಕಂಡ ಆ ಫಿರಂಗಿ ಕೈದಿಯು ಥರಗುಟ್ಟಿ ನಡುಗಹತ್ತಿದನು! ಆಗ ಚೈತನ್ಯ ...ನು ಅವನಿಗೆ ಪೊಡಮಟ್ಟು:—ಸದ್ಗುರೋ! ಹಿಂದಾನೊಂದು ...ದಲ್ಲಿ ಪದಭ್ರಾಂತನಾಗಿದ್ದ ಈ ಶಿಷ್ಯನಿಗೆ ನಿಜಪಥವನ್ನು ನೀನೇ ...ರಿಸಿರುತ್ತೀ. ಆದುದರಿಂದ ನೀನು ನನ್ನ ಪರಮ ಗುರುವಾಗಿರುತ್ತೀ. ...ರೋ! ಬಾದಶಹರವರ ಹುಕುಮಿನ ಮೇರೆಗೆ ಇಂದಿನಿಂದ ನೀನು ಈ ...ಾಗಾರದಿಂದ ಮುಕ್ತನಾಗಿರುತ್ತೀ, ಎಂದು ಹೇಳಿ ಅವನಿಗೆ ಮತ್ತೊಮ್ಮೆ ...ಮಟ್ಟನು.

ಕೂಡಲೆ ಬಾದಶಹನು ಮಯೂಖನಿಗೆ ಸಂಜ್ಞೆ ಮಾಡಿದನು. ಮಯೂಖನು ಆ ಫಿರಂಗಿಯ ಕೈಲೊಳಗಿನ ಬೇಡಿಗಳನ್ನು ತೆಗೆದೊಗೆದನು. ಅದನ್ನೆಲ್ಲ ಕಂಡು ಆ ಫಿರಂಗಿಯು ಬೆರಗಾಗಿ ಬೆಪ್ಪನಂತೆ ನಿಂತುಬಿಟ್ಟನು!

ಅಷ್ಟರಲ್ಲಿ ಯಮುನಾತೀರದಿಂದ ಬಹು ದೊಡ್ಡ ಗಾಳಿಯು ಬೀಸಿತು. ಆದರಿಂದ ಮಳಲು-ಮಣ್ಣುಗಳೂ ಹುಲ್ಲು-ಕಂಟಿಗಳೂ ಹಾರಿ ಬಂದು ಸ್ವಚ್ಛ

ವಾದ ಆ ಸಂಗಮರವರೀ ಸಮಾಧಿಯ ಮೇಲೆ ಬಿದ್ದುಕೊಂಡವು. ಬಾದ
ಶಹನು ಮತ್ತೆ ಆ ಶಿಲಾಮಯ ಸಮಾಧಿಯನ್ನು ಆಲಿಂಗಿಸಿಕೊಂಡು ಕುಳಿ
ತನು. ಆವನ ಹಿಮ್ಮಗ್ಗಲಿನಲ್ಲಿ ಗುಲ್‌ರುಖ ಹಾಗು ಲಲಿತೆಯರು ಮೊಣ
ಕಾಲೂರಿ ಕುಳಿತರು. ಅವರನ್ನು ಕಂಡು ಮಯೂಖನೂ ಅದರಂತೆ
ಕುಳಿತು, ಸಮಾಧಿಗೆ ತಲೆಹಚ್ಚಿ ಪೊಡಮಟ್ಟನು. ಆ ಬಂಧಮುಕ್ತ
ಫಿರಂಗಿಯು ಇದನ್ನೆಲ್ಲ ಟಕಮಕ ನೋಡುತ್ತಲೇ ಇದ್ದನು. ಕಡೆಗೆ ಅವನೂ
ತನ್ನ ಧರ್ಮಪದ್ಧತಿಯ ಮೇರೆಗೆ ಬೊಗ್ಗಿ ಆ ಸಮಾಧಿಗೆ ಪೊಡಮಟ್ಟನು.

ಆ ಬಂಧಮುಕ್ತ ಕೈದಿಯು ಪೋರ್ತುಗೀಜ ಫಿರಂಗಿ ಪಾದ್ರಿಯಾದ
ಅಲ್‌ಭಾರೇಜನು! ಅವನೇ ಸಪ್ತಗ್ರಾಮದಲ್ಲಿ ಮಯೂಖನನ್ನು ಆಹತ
ಗೊಳಿಸಿದ್ದನು! ಹುಗಳಿಯಲ್ಲಿ ಚೈತನ್ಯದಾಸನನ್ನು ಚಕ್ರಕ್ಕೆ ಕಟ್ಟಿಸಿ ತಿರು
ವಸಿ ಅವನ ಮೈಯ ಎಲುವುಗಳನ್ನೆಲ್ಲ ಪುಡಿ ಪುಡಿ ಮಾಡಿದ ಮಹಾಶಯ
ನಾದರೂ ಅವನೇ!!

ಪರಧರ್ಮದವರು ನಮಗೆ ಎಷ್ಟು ಬಗೆಯಾಗಿ ವಿಷವೆರೆದರೂ ಅವರಿಗೆ
ಹಾಲೆರೆವುದೇ ನಮ್ಮ ಹಿಂದೂಧರ್ಮದ ಅತ್ಯಂತ ಶ್ರೇಷ್ಠವಾದ ತತ್ವವು
ಜಗತ್ತಿನೊಳಗಿನ ಅನ್ಯ ಯಾವ ಧರ್ಮದವರಲ್ಲಿಯೂ ಈ ತತ್ವವು ಹೀಗೆ
ಕಾರ್ಯತಃ ಗೋಚರವಾಗದು.

---

# ಸಂಪೂರ್ಣ

